ಅಧ್ಯಾತ್ಮಗ್ರಂಥಾವಳಿ

# ಸಂಸ್ಕೃತವೂ ಸಂಸ್ಕೃತಿಯೂ

ಸಂಪಾದಕರು

ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತಿ ಸ್ವಾಮಿಗಳವರು

ಸಂಗ್ರಹ

**ಅಧ್ಯಾತ್ಮಪ್ರಕಾಶಕಾರ್ಯಾಲಯ**

**ಕ್ರಮಾಂಕ : 266**

**ಅಧ್ಯಾತ್ಮಪ್ರಕಾಶಕಾರ್ಯಾಲಯ**

**ಹೊಳೆನರಸೀಪುರ – 573 211**

**ದೂರವಾಣಿ: 08175-273820**

www.adhyatmaprakasha.org.

email: secretary@adhyatmaprakasha.org

**ಬೆಂಗಳೂರುಶಾಖೆ :**

**ನಂ. 68, (ಹೊಸ ನಂ. 6), ಎ.ಪಿ.ಕೆ. ರಸ್ತೆ, 2ನೇ ಬ್ಲಾಕ್,**

**ತ್ಯಾಗರಾಜನಗರ, ಬೆಂಗಳೂರು – 28. ದೂ : 2676 5548**

email: shankara.bhaskara@gmail.com

**2016**

**SAMSKRUTHAVOO SAMSKRUTHIYUU** ಸಂಸ್ಕೃತವೂ ಸಂಸ್ಕೃತಿಯೂ: Written by **Sri Sri Satchidanandendra Saraswathi Swamigalu,** Published by Adhyatma Prakasha Karyalaya, Holenarasipur-573211, India.

ಒಂದನೆಯ ಮುದ್ರಣ : **2016 - 1000** ಪ್ರತಿಗಳು

ಮುದ್ರಣ ಕಾಗದ : **70 GSM NS Maplitho**

ಪುಟಗಳು : **24+168=192**

**ಬೆಲೆ: ರೂ. 100/-**



*ಪ್ರತಿಗಳು ದೊರೆಯುವ ಸ್ಥಳ :*

**ಅಧ್ಯಾತ್ಮಪ್ರಕಾಶಕಾರ್ಯಾಲಯ**

**ಹೊಳೆನರಸೀಪುರ - 573 211, ದೂರವಾಣಿ: 08175-273820**

www.adhyatmaprakasha.org.

email: secretary@adhyatmaprakasha.org

**ಬೆಂಗಳೂರು ಶಾಖೆ :**

ತ್ಯಾಗರಾಜನಗರ, ಬೆಂಗಳೂರು - 560 028.

ದೂ: 080-26765548

email: shankara.bhaskara@gmail.com

**ಅಕ್ಷರ ಜೋಡಣೆ ಮತ್ತು ಮುದ್ರಣ ಸ್ಥಾನ:**

**ಶ್ರೀರಾಮ ಪ್ರಿಂಟರ್ಸ್**

**ನಂ.25, 15ನೇ ಕ್ರಾಸ್, ತ್ರಿನಿಧಿಲೇಔಟ್,**

**ಬೆಂಗಳೂರು - 560 062.**

**ಮೊಬೈಲ್: ೯೮೪೫೩ ೪೬೭೯೨**

# ಪ್ರಕಾಶಕರ ಬಿನ್ನಹ

ವೇದಾಂತ ಮಾನವರನ್ನು ಲೋಕಜೀವನವಿಮುಖರನ್ನಾಗಿಸಿ, ಸಂನ್ಯಾಸಿಯಾಗಿಸಿ ಸಮಾಜವಿರೋಧಿಗಳನ್ನು ತಯಾರಿಸುವಂತದ್ದು ಎಂಬ ಆರೋಪಕ್ಕೆ ಅವಕಾಶವಿರದಂತೆ ವ್ಯವಹಾರ-ಪರಮಾರ್ಥ ಒಂದೇ ನಾಣ್ಯದ ಎರಡು ಮುಖವಿದ್ದಂತೆ ಎಂಬ ತಿಳಿವಳಿಕೆಯನ್ನು ನೀಡಿ ಜನರಲ್ಲಿ 'ಅಧ್ಯಾತ್ಮಪ್ರಕಾಶವನ್ನು' ತುಂಬುವದು. ಅಧ್ಯಾತ್ಮಪ್ರಕಾಶಕಾರ್ಯಾಲಯದ ಪ್ರಧಾನ ಉದ್ದೇಶ. ಆ ಉದ್ದೇಶದಿಂದಲೇ **'ಅಧ್ಯಾತ್ಮಪ್ರಕಾಶ'**ವೆಂಬ ಮಾಸಪತ್ರಿಕೆಯನ್ನು ಆರಂಭಿಸಿ ಉತ್ಕೃಷ್ಟ ಲೇಖನಗಳನ್ನು ಬರೆದು, ಬರೆಯಿಸಿ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರು ಭಾರತಸಂಸ್ಕೃತಿಯನ್ನು ಪ್ರಚುರಪಡಿಸಿದವರಲ್ಲಿ ಅಗ್ರಗಣ್ಯರು. ಭಾರತದ ಸಂಸ್ಕೃತಿಯ ಪ್ರಚಾರಕ್ಕೆ ನೆರವಾಗುವದೇ ಕಾರ್ಯಾಲಯದ ಪ್ರಧಾನ ಉದ್ದೇಶವೂ ಆಗಿದೆ.

ಭಾರತಸಂಸ್ಕೃತಿ ಎಂದರೇನು? -ಎಂದರೆ **"ಮಾನವನ ಅಂತಃಕರಣವು ತನ್ನಲ್ಲಿರುವ ದೋಷಗಳನ್ನು ಪರಿಹರಿಸಿಕೊಂಡು ಗುಣಾಧಾನ ಮಾಡಿಕೊಳ್ಳುತ್ತಾ ಉನ್ನತಿಗೇರುವದಕ್ಕಾಗಿ ಹೊರತೋರಿಕೊಳ್ಳುವ ಬಗೆಯೇ 'ಸಂಸ್ಕೃತಿ'** -ಎಂಬುದು. ಇಂತಹ ಸಂಸ್ಕೃತಿಯ ಜೀವಾಳ ಎಲ್ಲಿದೆ ಎಂದರೆ 'ಸಂಸ್ಕೃತ'ದಲ್ಲಿ ಎಂದು ಧಾರಾಳವಾಗಿ ಹೇಳಬಹುದು. ಆದರೆ ಕೆಲವರು 'ಮೃತಭಾಷೆ' ಎಂದು ಹೀಗಳೆಯುತ್ತಾರೆ. ಪ್ರಾಚೀನಭಾರತ ಸಂಸ್ಕೃತಿಯನ್ನು ನೆನಪಿಗೆ ತಂದುಕೊಳ್ಳುವದಕ್ಕೂ ಭರತಖಂಡದವರು ದೇಶಭಕ್ತಿಯನ್ನು ಬೆಳೆಸಿಕೊಳ್ಳುವದಕ್ಕೂ ಸಂಸ್ಕೃತಭಾಷೆಗಿಂತ ಹೆಚ್ಚು ಅಮೂಲ್ಯವಾಗಿರುವ ಸಾಧನ ಮತ್ತೊಂದಿಲ್ಲವು.

ಸಂಸ್ಕೃತವನ್ನು ಪ್ರೀತಿಸಿದರೆ ಅಂತಃಕರಣಕ್ಕೆ ಸಂಸ್ಕೃತಿಯನ್ನು ಕೊಡಬಲ್ಲದು, ಜೀವನದಲ್ಲಿ ನೆಮ್ಮದಿಯನ್ನು ನೀಡಬಲ್ಲದು, ಇಡಿಯ ವಿಶ್ವವನ್ನೇ ಪರಮಾನಂದ ಸಾಗರವೆಂದು ಮನದಟ್ಟು ಮಾಡಿಕೊಟ್ಟು ನಮ್ಮ ಇಷ್ಟಾರ್ಥಗಳನ್ನೆಲ್ಲ ನೆರವೇರಿಸಬಲ್ಲದು. ಇದು ಪ್ರಾಚೀನತೆ, ವೈಶಾಲ್ಯತೆ, ಗಾಂಭೀರ್ಯ, ಶಬ್ದವೈಪುಲ್ಯವು, ಸರ್ವಸಮತ್ವ ಭಾವನೋತ್ತೇಜಕತೆಯನ್ನು ಹೊಂದಿರುವ ದಿವ್ಯವಾಣಿ. 'ಆಸೇತು ಹಿಮಾಚಲದ'ವರೆಗೆ ಎಲ್ಲಾ ದೇಶಭಾಷೆಗಳಿಗೆ ಅಂತರ್ಗಂಗೆಯಂತಿದೆ. ಇದೊಂದು ವಿಶ್ವಶಕ್ತಿಯು. ಈ ವಿಶ್ವಶಕ್ತಿಯನ್ನು ಸಂಪಾದಿಸಿಕೊಳ್ಳಲು ಸ್ವಲ್ಪವಾದರೂ ಪ್ರಯೋಜನವಾಗುವದೆಂಬ ಭಾವನೆಯಿಂದ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳನ್ನು ಸಂಕಲಿಸಿ "ಸಂಸ್ಕೃತವೂ ಸಂಸ್ಕೃತಿಯೂ" ಎಂಬ ಗ್ರಂಥವನ್ನು ಪ್ರಕಾಶಿಸುತ್ತಿದ್ದೇವೆ.

ಗ್ರಂಥವನ್ನು ಮೂರುಭಾಗಗಳಾಗಿ ವಿಂಗಡಿಸಲಾಗಿದ್ದು:-

(1) ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರು ಬರೆದ 39 ಲೇಖನ

(1948 ರಿಂದ 1971) ಗಳನ್ನು ಭಾಗ-1ರಲ್ಲಿಯೂ; (2) ಶ್ರೀ ಜ್ಞಾನಾನಂದೇಂದ್ರಸರಸ್ವತೀ ಸ್ವಾಮಿಗಳ (ಪೂರ್ವಾಶ್ರಮ ವಿದ್ವಾನ್ ಎಸ್. ವಿಠ್ಠಲಶಾಸ್ತ್ರಿಗಳ) 9 ಲೇಖನಗಳನ್ನು (1932 ರಿಂದ 1956) ಭಾಗ-2ರಲ್ಲಿಯೂ; (3) ಇತರ ವಿದ್ವಾಂಸರುಗಳ ಲೇಖನಗಳು ಎಂಬ ಭಾಗ-3ರಲ್ಲಿ 8 ಶ್ರೇಷ್ಠವಿದ್ವಾಂಸರುಗಳ ಲೇಖನಗಳನ್ನೂ ಸಂಗ್ರಹಿಸಲಾಗಿದೆ. ಶ್ರೀ ಶ್ರೀಗಳವರ ಹಾಗೂ ವಿಠ್ಠಲಶಾಸ್ತ್ರಿಗಳ ಲೇಖನಗಳು ಅಧ್ಯಾತ್ಮಪ್ರಕಾಶ ಮಾಸಪತ್ರಿಕೆಯಿಂದ ಆರಿಸಿದ್ದಾಗಿದ್ದು ಅವುಗಳ ವಿವರಗಳನ್ನು ಮತ್ತು ಉಳಿದ ಲೇಖನಗಳ ವಿವರಗಳನ್ನೂ **ಪರಿಶಿಷ್ಟದಲ್ಲಿ ಕೊಡಲಾಗಿದೆ.**

ಈ ಗ್ರಂಥ ಮುದ್ರಣಕ್ಕೆ 1) ಶ್ರೀ ಅಂತರಂಗಭಕ್ತರು, ಮೈಸೂರು; 2) ಶ್ರೀ ಹೆಚ್. ಎ. ರಾಮಮೋಹನ್‌ಗುಪ್ತ, ಬೆಂ.; 3) ಶ್ರೀ ಬಿ.ಕೆ. ಶ್ರೀಕಂಠಯ್ಯಪ್ಪ, ಬೆಂ.; 4) ಶ್ರೀಮತಿ ಸರೋಜಮ್ಮ ಎಂ. ಬಾಲಯ್ಯ, ಬೆಂ.; (ಶಾರದ ಮತ್ತು ಗಂಗಪ್ಪ ಸ್ಮರಣಾರ್ಥ); 5) ಶ್ರೀ ವೆಂಕಟಸುಬ್ರಹ್ಮಣ್ಯನ್, ಮುಂಬಯಿ; 6) ಶ್ರೀ ಕೆ. ಅನಂತರಾಮಯ್ಯಪ್ಪ, ಬೆಂ.; 7) ಶ್ರೀಮತಿ ಎ.ಎನ್. ಸ್ವರ್ಣಪ್ರಸಾದ್, ಬೆಂ.; 8) ಶ್ರೀ ಎಮ್.ವಿ. ಶ್ರೀಧರ್, ಮೈಸೂರು; 9) ಶ್ರೀಮತಿ ಬಿ. ಲೀಲಾ, ತುಮಕೂರು; 10) ಶ್ರೀ ಎಸ್.ವಿ. ಗಿರೀಶ್, ಬೆಂ.; 11) ಶ್ರೀ ಕೆ. ರಾಮಚಂದ್ರಪ್ಪ, ಬೆಂ.; 12) ಶ್ರೀ ಎನ್. ಶ್ರೀನಿವಾಸಲು, ಬೆಂ.; ಮಹನೀಯರುಗಳು ಸಹಾಯದ್ರವ್ಯವನ್ನು ನೀಡಿರುತ್ತಾರೆ. ಇವರಿಗೆ ಕೃತಜ್ಞತಾಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಸಂಸ್ಕೃತ - ಸಂಸ್ಕೃತಿಯ ಹಿರಿಮೆಯನ್ನು ಸಾರುವ ಈ ಗ್ರಂಥಕ್ಕೆ ತಮ್ಮ ಉತ್ತಮ ಸಂದೇಶಗಳನ್ನು ಬರೆದು ಹಾರೈಸಿರುವ ನಾಡಿನ ಶ್ರೇಷ್ಠವಿದ್ವಾಂಸರುಗಳಾದ ನಾಡೋಜ ಡಾ|| ಎಸ್.ಆರ್. ರಾಮಸ್ವಾಮಿ, ಡಾ|| ಎಸ್. ರಂಗನಾಥ್ ಹಾಗೂ ಡಾ|| ಎಚ್.ವಿ. ನಾಗರಾಜರಾವ್, ಮೈಸೂರು, ಇವರುಗಳಿಗೆ ಕಾರ್ಯಾಲಯದ ಪರವಾಗಿ ಹೃತ್ಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇವೆ.

ಲೇಖನಗಳ ಸಂಕಲನ, ಮುದ್ರಣದೋಷಗಳನ್ನು ತಿದ್ದುವದು, ಅಕ್ಷರ ಸಂಯೋಜನೆ, ಅಂದವಾದ ಮುದ್ರಣ ಕಾರ್ಯಗಳಲ್ಲಿ ಸಹಾಯ ನೀಡಿರುವ ಎಲ್ಲ ಗುರುಬಂಧುಗಳಿಗೂ ಕಾರ್ಯಾಲಯದ ಪರವಾಗಿ ಕೃತಜ್ಞತಾಪೂರ್ವಕ ಧನ್ಯವಾದಗಳು.

ಈ ಕಾರ್ಯವನ್ನು ವಾಚಕರು ಪ್ರೇಮಾದರಗಳಿಂದ ಸ್ವೀಕರಿಸಿ ಹೀಗೆಯೇ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿರುವ ಲೇಖನಗಳನ್ನು ಸಂಕಲಿಸಿ ಗ್ರಂಥರೂಪದಲ್ಲಿ ಪ್ರಕಟಿಸಲು ಪ್ರೋತ್ಸಾಹಿಸಬೇಕೆಂದು ವಿನಂತಿಸುತ್ತೇವೆ.

**ಶ್ರೀ ಶ್ರೀಗಳವರ ಜಯಂತಿ; ಮನ್ಮಥನಾಮಸಂವತ್ಸರ**
**ಮಾರ್ಗಶಿರ ಬಹುಳ ಅಷ್ಟಮಿ** **- ಪ್ರಕಾಶಕರು**
**02-01-2016**

# ಮೊದಲಮಾತು

ವಿಶುದ್ಧ ವೇದಾಂತದರ್ಶನದ ಅಧ್ಯಯನ-ಅಧ್ಯಾಪನ, ಸಾಧನಾನುಸಂಧಾನ, ಜಟಿಲ ವೇದಾಂತಪ್ರಮೇಯಗಳ ಬಗೆಗೆ ಆಳವಾದ ಸಂಶೋಧನೆ, ವಿಪುಲ ಶಾಸ್ತ್ರೀಯ ಬರಹ ಮತ್ತು ಪ್ರಕಟಣೆ, ಈ ವಿವಿಧ ಮಾರ್ಗಗಳ ಮೂಲಕ ಇಡೀ ಭಾರತದಲ್ಲಿಯೆ ಅನನ್ಯವೆನ್ನಬಹುದಾದ ಒಂದು ಪ್ರಜ್ವಲ ವೇದಾಂತಾಭ್ಯಾಸಪ್ರಸ್ಥಾನದ ಪ್ರವರ್ತನೆ -ಈ ಅಗಾಧ ಸಾಧನೆಯ ಕಾರಣದಿಂದ 'ಅಭಿನವ ಶಂಕರ'ರೆಂದೇ ವಿಶ್ರುತರಾದವರು ಬ್ರಹ್ಮೀಭೂತ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು (5-1-1880 ರಿಂದ 8-8-1975). ಅವರಿಂದ ಪ್ರಭಾವಿತರಾಗಿರುವವರು ಲಕ್ಷಾವಧಿ ವೇದಾಂತಾಭ್ಯಾಸಿಗಳು. ಅವರು ಬ್ರಹ್ಮೈಕ್ಯರಾಗಿ ನಾಲ್ಕು ದಶಕಗಳು ಗತಿಸಿದ್ದರೂ ಅವರು ಉಪಕ್ರಮಿಸಿದ್ದ ವೇದಾಂತಾನುಸಂಧಾನಪರಂಪರೆ ಇಂದಿಗೂ ಅವಿಚ್ಛಿನ್ನವಾಗಿ ಮುಂದುವರಿದಿರುವುದು ಅವರ ತಪಸ್ಸಾಧನೆಯ ದಾರ್ಢ್ಯದ ಸೂಚಕವಾಗಿದೆ. ಅವರ ಭಾಷ್ಯಾನುವಾದಗ್ರಂಥಗಳೂ, ಸ್ವತಂತ್ರ ವಿವರಣ-ವ್ಯಾಖ್ಯಾನ ಗ್ರಂಥಗಳೂ ನಿರಂತರ ಬೇಡಿಕೆಯಲ್ಲಿದ್ದು ಸತತವಾಗಿ ಪುನರ್ಮುದ್ರಣಗೊಳ್ಳುತ್ತಿವೆ; ಈಗಲೂ ಶಾಸ್ತ್ರಾಸಕ್ತರಿಗೆ ದೀವಿಗೆಗಳಾಗಿವೆ. ಶ್ರೀ ಶ್ರೀಗಳವರು ಮೂಲ ಶಾಂಕರ ವಾಙ್ಮಯವನ್ನು ಸುಗಮಶೈಲಿಯಲ್ಲಿ ಆದರೆ ಅನ್ಯೂನಾತಿರಿಕ್ತವಾಗಿ ಅನುವಾದ ಮಾಡಿದುದಷ್ಟೆ ಅಲ್ಲಷ್ಟೆ; ವಿವಿಧ ಅಧಿಕಾರಿಭೇದಗಳವರನ್ನು ಅನುಲಕ್ಷಿಸಿ ಶ್ರೇಣೀಕೃತ ರೀತಿಯಲ್ಲಿ ಸ್ವತಂತ್ರ ಪ್ರತಿಪಾದಕ ಬರಹ-ಉಪನ್ಯಾಸಗಳನ್ನು ದಶಕಗಳುದ್ದಕ್ಕೂ ನೀಡಿದ್ದಾರೆ. ಇದಕ್ಕಿಂತ ಮಿಗಿಲಾಗಿ ಅತ್ಯಂತ ಉಪಾದೇಯವೂ ಅಧ್ಯಯನಾರ್ಹವೂ ಆದ ವೇದಾಂತವಿಷಯಕವಾದ ಸ್ವೋಪಜ್ಞ ಸಂಶೋಧನಗ್ರಂಥಗಳನ್ನೂ ರಚಿಸಿದ್ದಾರೆ. ಶ್ರೀ ಶ್ರೀಗಳವರ 'ಶ್ರೀಶಂಕರಭಗವತ್ಪಾದವೃತ್ತಾಂತ ಸಾರಸರ್ವಸ್ವ', 'ವೇದಾಂತವಿಚಾರದ ಇತಿಹಾಸ', 'ಪರಮಾರ್ಥಚಿಂತಾಮಣಿ' – ಇವುಗಳಿಗೆ ಸರಿಗಟ್ಟುವ ಸಂಶೋಧನ ಕೃತಿಗಳು ಇದುವರೆಗೆ ಯಾವುದೇ ಭಾಷೆಯಲ್ಲಿ ಬಂದಿಲ್ಲವೆಂದು ನಿಃಶಂಕವಾಗಿ ಹೇಳಬಹುದು. ವಿವಿಧೆಡೆಗೆ ಚೆದರಿದ್ದ ಅವರ ಅಮೂಲ್ಯ ಬಿಡಿಬರಹಗಳನ್ನೂ ಸಂಕಲಿತ ರೂಪದಲ್ಲಿ ಜಿಜ್ಞಾಸುಗಳಿಗೆ ಲಭ್ಯವಾಗಿಸಿ ಅಧ್ಯಾತ್ಮಪ್ರಕಾಶ ಕಾರ್ಯಾಲಯ ತುಂಬಾ ಉಪಕಾರ ಮಾಡಿದೆ. ಏಕೆಂದರೆ ಜೀವಮಾನದುದ್ದಕ್ಕೂ ಅಹರ್ನಿಶಿ ನಡೆಸಿದ ಮನನ-ನಿದಿಧ್ಯಾಸಗಳ ಮೂಲಕ ಶ್ರೀ ಶ್ರೀಗಳವರು ಗಳಿಸಿಕೊಂಡಿದ್ದ ಒಳನೋಟಗಳು ಅತ್ಯಂತ ದುರ್ಲಭವಾದವು, ಅಮೂಲ್ಯವಾದವು.

ಇಂತಹ ಸಂಕಲಿತ ಕೃತಿಗಳ ಸರಣಿಗೆ ಒಂದು ಗಣನೀಯ ಸೇರ್ಪಡೆ '**ಸಂಸ್ಕೃತವೂ ಸಂಸ್ಕೃತಿಯೂ'** ಎಂಬ ಶೀರ್ಷಿಕೆಯ ಪ್ರಕೃತ ಗ್ರಂಥ. ಇದರಲ್ಲಿನ ಲೇಖನಗಳಷ್ಟೂ ಸಂಸ್ಕೃತಭಾಷೆಯನ್ನೇ ಕುರಿತವು. ವೇದಾಂತದರ್ಶನದ ಉದ್ಗಮ-ವಿಕಾಸಗಳು ಸಂಪೂರ್ಣವಾಗಿ ಸಂಸ್ಕೃತಭಾಷಾಧಾರಿತವೇ ಎಂಬುದು ಸುವಿದಿತವಷ್ಟೆ. ಸಂಸ್ಕೃತ

# ಸಂಸ್ಕೃತವೂ ಸಂಸ್ಕೃತಿಯೂ

ಭಾಷೆಯಲ್ಲಿ ಹೊಮ್ಮಿದ ಆಧ್ಯಾತ್ಮಿಕ ಚಿಂತನೆಯು ಭಾರತೀಯ ಸಂಸ್ಕೃತಿಯ ಹೃದ್ಭಾಗವೆಂಬುದೂ ಸುವಿದಿತವೇ ಆಗಿದೆ. ಈ ಹಿನ್ನೆಲೆಯಲ್ಲಿ ಸಂಸ್ಕೃತಭಾಷೆಯ ವಿಶಿಷ್ಟತೆಯನ್ನು ಕುರಿತೇ ಶ್ರೀ ಶ್ರೀಗಳು ವಿಶಾಲವಾದ ಚಿಂತನೆ ನಡೆಸಿದ್ದುದು ಸ್ವಾಭಾವಿಕ. ಶ್ರೀ ಶ್ರೀಗಳು ಪೂರ್ವಾಶ್ರಮದಲ್ಲಿಯೂ ಬೋಧಕರೇ ಆಗಿದ್ದುದರಿಂದ ಕಲಿಕೆಯೊಡಗೂಡಿದ ಸಂಗತಿಗಳೆಲ್ಲ ಅವರಿಗೆ ನೇರ ಪರಿಚಿತವಾಗಿದ್ದವೇ. ಭಾಷೆಯ ಕಲಿಕೆಗೆ ಪ್ರವೇಶಿಕೆಯ ರೂಪದ 'ಸಂಸ್ಕೃತಭಾಷಾಭ್ಯಾಸ' ಪುಸ್ತಕಸರಣಿಯನ್ನೂ ಪಾಠಕ್ರಮಾನುಸಾರಿಯಾದ ರಘುವಂಶ 1 ಮತ್ತು 10ನೇ ಸರ್ಗಗಳ ಪರಿಚಯ- ಕೈಪಿಡಿಗಳನ್ನೂ ಶ್ರೀಶ್ರೀಗಳು ರಚಿಸಿ ಒದಗಿಸಿದ್ದುದನ್ನು ಇಲ್ಲಿ ಸ್ಮರಿಸಬಹುದು. ಅವುಗಳಿಗೆ ಸಂವಾದಿಯೆಂಬಂತೆ ಸಂಸ್ಕೃತಭಾಷೆಯನ್ನು ಕುರಿತ ಹಲವು ಸಮಕಾಲೀನ ಅಭಿಪ್ರಾಯಗಳ ಮತ್ತು ನಿಲವುಗಳ ಪರಾಮರ್ಶನೆಯನ್ನು ಹಲವಾರು ಲೇಖನಗಳಲ್ಲಿ ಶ್ರೀಶ್ರೀಗಳು 1948 ರಿಂದ 1971ರ ವರ್ಷಗಳಲ್ಲಿ ನಡೆಸಿದ್ದರು. ಆ 39 ಲೇಖನಗಳನ್ನು ಪ್ರಕೃತ ಗ್ರಂಥದ ಪ್ರಥಮಭಾಗದಲ್ಲಿ ನೀಡಲಾಗಿದೆ. ಸಂಸ್ಕೃತಭಾಷೆಯನ್ನು ಕುರಿತ ಇನ್ನು ಕೆಲವು ಪೂರಕ ಬರಹಗಳನ್ನೂ ಉಪಯುಕ್ತತೆಯ ದೃಷ್ಟಿಯಿಂದ ಇಲ್ಲಿ ಅಳವಡಿಸಲಾಗಿದೆ. ಹೀಗೆ ಶ್ರೀಶ್ರೀಗಳ ಸಹಕಾರಿಗಳಾಗಿದ್ದ ಶ್ರೀ ಜ್ಞಾನಾನಂದೇಂದ್ರ ಸರಸ್ವತೀಸ್ವಾಮಿಗಳು (ಪೂರ್ವಾಶ್ರಮದಲ್ಲಿ ವೇದಾಂತಶಿರೋಮಣಿ ವಿದ್ವಾನ್ ಎಸ್. ವಿಠ್ಠಲಶಾಸ್ತ್ರಿಗಳು) 1932-1956ರ ಅವಧಿಯಲ್ಲಿ ಬರೆದ 9 ಲೇಖನಗಳು ಇಲ್ಲಿಯ ದ್ವಿತೀಯಭಾಗದಲ್ಲಿ ಸಂಕಲನಗೊಂಡಿವೆ. ಶ್ರೀಶ್ರೀಗಳವರಲ್ಲಿ ಅತಿಶಯ ಪೂಜ್ಯಭಾವನೆಯನ್ನು ತಳೆದಿದ್ದ ಮಹಾಮಹೋಪಾಧ್ಯಾಯ ವಿದ್ವಾನ್ ಎನ್. ರಂಗನಾಥಶರ್ಮಾ ಅವರು ಬರೆದ 'ಸಂಸ್ಕೃತಸಾಹಿತ್ಯದಲ್ಲಿ ಸಾರ್ವಲೌಕಿಕ ದೃಷ್ಟಿ' ಎಂಬ ವಿಸ್ತಾರವಾದ ಪ್ರಬಂಧವೂ ಅಸ್ಸಾಮ್ ಪ್ರಾಂತ ಪ್ರಾಧ್ಯಾಪಕ ಟಿ.ಕೆ. ಕೃಷ್ಣಸ್ವಾಮಿ ಅಯ್ಯರ್, ಡಾ|| ಹಾ.ಮಾ ನಾಯಕ, ಡಾ|| ಫ್ರೀಡ್ರಿಕ್ ಹೀಲರ್ ಮೊದಲಾದವರ 8 ಲೇಖನಗಳೂ ತೃತೀಯಭಾಗದಲ್ಲಿ ಸೇರಿವೆ.

ಶ್ರೀಶ್ರೀಗಳವರು ತಮ್ಮ ಲೇಖನಗಳಲ್ಲಿ ಸಂಸ್ಕೃತ-ಸಂಸ್ಕೃತಿಗಳ ನಡುವಣ ಜೈವಿಕ ಸಂಬಂಧಗಳನ್ನೂ ಮತ್ತು ಸಂಸ್ಕೃತಭಾಷೆಗೆ ಸಂಬಂಧಿಸಿದಂತೆ ಈಗಲೂ ಎಂದರೆ 21ನೇ ಶತಮಾನದಲ್ಲಿಯೂ ಆಗಿಂದಾಗ ಕೇಳಿಬರುವ ಪ್ರಶ್ನೆಗಳನ್ನೂ ಕುರಿತು ಆಳವಾದ ಪರಾಮರ್ಶನೆಯನ್ನು ನೀಡಿದ್ದಾರೆ. ಸಂಸ್ಕೃತವು 'ಮೃತಭಾಷೆ' ಎನಿಸಿರುವುದರಿಂದ ಆ ಭಾಷೆಯೂ ಅದರಲ್ಲಿರುವ ವಾಙ್ಮಯವೂ ಈಗ ಸಂಗತವೆ? ಸಂಸ್ಕೃತವು ಯಾವ ಕಾರಣಗಳಿಂದ ಅನ್ಯಭಾಷೆಗಳಿಗಿಂತ ಉತ್ತಮವಾದದ್ದು? ಸಂಸ್ಕೃತವು ಪ್ರಾಚೀನವೆಂಬ ಕಾರಣದಿಂದಷ್ಟೆ ಅದನ್ನು ಗೌರವಿಸುವ ಆವಶ್ಯಕತೆ ಇದೆಯೆ? ಸಾಂಪ್ರದಾಯಿಕರು ಹೇಳುವಂತೆ ಸಂಸ್ಕೃತವು ಶ್ರೇಷ್ಠ ಭಾಷೆಯಾಗಿದ್ದರೆ ಅದು ಜನರ ಬಳಕೆಯಿಂದ ತಪ್ಪಿದುದು ಏಕೆ? ಆಧುನಿಕ ಲೌಕಿಕವಿದ್ಯೆಗಳ ಅನುಸಂಧಾನಕ್ಕೆ ಹಳೆಯ ಯುಗದ್ದಾದ ಸಂಸ್ಕೃತವು

ನೆರವಾಗಬಲ್ಲದೆ? ಸಂಸ್ಕೃತಕ್ಕೂ ರಾಷ್ಟ್ರಾಭ್ಯುದಯಕ್ಕೂ ಸಂಬಂಧವಿದೆಯೆ? ಈಗಿನ ಸಾಮಾಜಿಕ ಸನ್ನಿವೇಶದಲ್ಲಿ ಜನಭಾಷೆಯಾಗಿ ಸಂಸ್ಕೃತವನ್ನು ಪ್ರವರ್ತಿಸುವುದು ಶಕ್ಯವೆ? ಸಂಸ್ಕೃತವು ನಮ್ಮ ಎಂದರೆ ಭಾರತದ ಭಾಷೆ ಎಂಬುದಕ್ಕಿಂತ ಮಿಗಿಲಾದ ಅಭಿಮಾನಾಸ್ಪದ ಆಯಾಮಗಳು ಸಂಸ್ಕೃತಕ್ಕೆ ಇವೆಯೆ? ಸಂಸ್ಕೃತಭಾಷೆಯು ಕಲಿಯಲು ಕಷ್ಟವಲ್ಲವೆ? ತತ್ತ್ವಶಾಸ್ತ್ರದ ಭಾಷೆಯಾಗಿರುವ ಸಂಸ್ಕೃತವು ಈಗಿನ ವ್ಯಾವಹಾರಿಕ ಆವಶ್ಯಕತೆಗಳನ್ನು ಪೂರೈಸಬಲ್ಲದೆ? ಸಂಸ್ಕೃತಕ್ಕೆ ಪ್ರಾಧಾನ್ಯ ನೀಡಿದರೆ ಅದು ದೇಶಭಾಷೆಗಳ ಬೆಳವಣಿಗೆಗೆ ಬಾಧಕವಾಗದೆ? ಸಂಸ್ಕೃತವು ಒಂದು ವಿಶಿಷ್ಟ ಜನಾಂಗದ ಭಾಷೆಯಾದುದರಿಂದ ಅದರ ಪ್ರವರ್ತನೆಯು ಸಮಾಜಸಂಘಟನೆಗೆ ಪೋಷಕವೆ? - ಇವೇ ಮೊದಲಾದ ಜನಜನಿತ ಪ್ರಶ್ನೆಗಳನ್ನು ಶ್ರೀಶ್ರೀಗಳವರು ಸತರ್ಕವಾಗಿಯೂ ಅನುಭವಾಧಾರಿತವಾಗಿಯೂ ನಿಷ್ಪಕ್ಷಪಾತವಾಗಿಯೂ ಪರಾಮರ್ಶನೆಗೆ ಒಳಪಡಿಸಿದ್ದಾರೆ. ಅನುದ್ವಿಗ್ನವಾದ ಅವರ ವಿಶ್ಲೇಷಣೆಯನ್ನು ವಿಚಾರವಂತರಾರೂ ಒಪ್ಪದಿರಲು ಸಾಧ್ಯವಿಲ್ಲ. ದೇಶಕಾಲಾತೀತವಾಗಿ ಸರ್ವಲೋಕಪ್ರಯೋಜನಕರವಾದ ತತ್ತ್ವದರ್ಶನವು ಅತ್ಯಂತ ಸಾಂದ್ರವಾಗಿ ನಿವಿಷ್ಟವಾಗಿರುವ ಭಾಷೆ ಎಂಬ ಒಂದೇ ಕಾರಣವೂ ಸಂಸ್ಕೃತದ ಉಪಾದೇಯತೆಗೆ ಸಾಕಾದೀತು. ವಿಶ್ವದಲ್ಲಿಯೆ ಅಗಾಧವಾದ ಜ್ಞಾನರಾಶಿಯು ನಿಕ್ಷಿಪ್ತವಾಗಿರುವುದು ಸಂಸ್ಕೃತದಲ್ಲಿ. ಸಂಸ್ಕೃತಭಾಷೆಯಲ್ಲಿ ಇರುವ ಖಚಿತತೆ ಮತ್ತು ನೂತನಶಬ್ದನಿರ್ಮಾಣ ಸಾಮರ್ಥ್ಯವಂತೂ ಜಗತ್ತಿನಲ್ಲಿಯೆ ಅನನ್ಯವಾದದ್ದು. ಸಂಸ್ಕೃತಭಾಷೆಯು ಹಿಂದಿನವರ ವಿಶೇಷ ಆದರಣೆಗೆ ಪಾತ್ರವಾಗಿದ್ದುದು ಅದರಲ್ಲಿರುವ ಸ್ವಾಭಾವಿಕವಾದ ಹಿರಿಮೆಯಿಂದಲೇ ಹೊರತು ಅದನ್ನು ಯಾವುದೋ ಸಮುದಾಯಗಳವರು ಪ್ರಯತ್ನಪೂರ್ವಕ ಪ್ರಸಾರ ಮಾಡಿದುದರಿಂದಲ್ಲ.

ಅಸಮಗ್ರ ಚಿಂತನೆಯ ಫಲಿತಗಳಾದ ಎಲ್ಲ ಜನಜನಿತ 'ಪ್ರಜ್ಞಾವಾದ'ಗಳನ್ನೂ ಶ್ರೀಶ್ರೀಗಳವರು ಈ ಲೇಖನಗಳಲ್ಲಿ ನಿಕಷಕ್ಕೆ ಒಡ್ಡಿದ್ದಾರೆ. ನಿದರ್ಶನಕ್ಕೆ ಸಂಸ್ಕೃತಭಾಷೆಯ ಉಜ್ಜೀವನವು ಈಗಿನ ಸನ್ನಿವೇಶದಲ್ಲಿ ಅವ್ಯವಹಾರ್ಯ. ಎರಡು ಸಾವಿರ ವರ್ಷಗಳ ಹಿಂದೆ ಪ್ರಾಕೃತಭಾಷೆಯ ಸಹಜ ಪ್ರಸಾರದಿಂದಾಗಿ ಸಂಸ್ಕೃತದ ಪ್ರಾಚುರ್ಯ ಕಡಮೆಯಾಯಿತು -ಎಂಬ ಧಾಟಿಯ ಜವಾಹರಲಾಲ್‌ನೆಹರು ಅವರ ಅಭಿಮತ ಇಲ್ಲಿ ಪ್ರಸ್ತಾವಗೊಂಡಿದೆ. ಇದಕ್ಕೆ ಉತ್ತರವಾಗಿ ನಮ್ಮ ನಾಟಕಪರಂಪರೆಯಲ್ಲಿ ಸಂಸ್ಕೃತ- ಪ್ರಾಕೃತಗಳೆರಡರ ಬಳಕೆಯೂ ಇರುವುದು, ತಥಾಕಥಿತ 'ಮೃತಭಾಷೆ'ಯಲ್ಲಿ ಈಗಲೂ ಸಂಭಾಷಣೆಯನ್ನೂ ಪತ್ರವ್ಯವಹಾರಾದಿಗಳನ್ನೂ ನಡೆಸುತ್ತಿರುವ ಅಸಂಖ್ಯ ಜನರು ಇರುವುದು, ಹೀಬ್ರೂವಿನಂತಹ ದೀರ್ಘಕಾಲ ಅಸ್ತಂಗತವಾಗಿದ್ದ ಭಾಷೆಯನ್ನು ಇತ್ತೀಚೆಗಷ್ಟೆ ಪ್ರಯತ್ನ ಪೂರ್ವಕವಾಗಿ ರಾಷ್ಟ್ರಭಾಷೆಯಾಗಿಸಿರುವುದು- ಮೊದಲಾದ ಸಂಗತಿಗಳಿಗೆ ಶ್ರೀ ಶ್ರೀಗಳವರು

ಗಮನ ಸೆಳೆದಿದ್ದಾರೆ. ದೇಶಭಾಷೆಯೆನಿಸಿರುವ ಹಿಂದೀ ಸಂಸ್ಕೃತ ಶಬ್ದಭೂಯಿಷ್ಠ ವಾಗಿರುವುದು ಸರ್ವವಿದಿತ. ಕನ್ನಡಪರರಾದ ವೀರವ್ರತಿಗಳ ಬರಹವೂ ಸಂಸ್ಕೃತದ ಪ್ರಭಾವವನ್ನು ತಪ್ಪಿಸಿಕೊಳ್ಳಲು ಆಗದಿರುವುದನ್ನು ಕುರಿತು ಶ್ರೀಶ್ರೀಗಳವರು ದೃಷ್ಟಾಂತಗಳೊಡನೆ ಸ್ವಾರಸ್ಯಪೂರ್ಣವಾಗಿ ಬರೆದಿದ್ದಾರೆ. ಜೊತೆಗೇ ಸಾಂದರ್ಭಿಕವಾಗಿ, ಸುಷ್ಠುವೆಂಬ ಭ್ರಮೆಯಲ್ಲಿ ವ್ಯಾಕರಣವಿರುದ್ಧ ಪ್ರಯೋಗಗಳು ಹರಡಿರವುದನ್ನು ಕುರಿತೂ ರೋಚಕವಾಗಿ ವ್ಯಾಖ್ಯೆ ಮಾಡಿದ್ದಾರೆ ('ಅತ್ಯಗತ್ಯ', 'ಅಬದ್ಧ', 'ಅಧ್ವಾನ', 'ಒತ್ತಾಯಪೂರ್ವಕ', ಇತ್ಯಾದಿ). ಶ್ರೀಶ್ರೀಗಳವರ ನಿರ್ಣಾಯಕ ಮಾತುಗಳು ಇವು: "ಭಾರತದೇಶದ ಭಾಷೆಗಳ ನಾಡಿಗಳಲ್ಲೆಲ್ಲ ಸಂಸ್ಕೃತಭಾಷಾರಕ್ತವು ಹರಿಯುತ್ತಿದೆ; ಈಗಲೂ ಸಂಸ್ಕೃತದಿಂದ ಆ ಭಾಷೆಗಳೆಲ್ಲವೂ ಸಾಲತೆಗೆದುಕೊಳ್ಳುತ್ತಲೇ ಇವೆ. ಸಂಸ್ಕೃತಗ್ರಂಥಗಳು ನಾವು ಆ ಭಾಷೆಯನ್ನು ಅನಾದರದಿಂದ ಕಾಣುತ್ತಿರುವ ಈ ಕಾಲದಲ್ಲಿಯೂ ಪ್ರಕಾಶಕ್ಕೆ ಬರುತ್ತಲೇ ಇವೆ. ಆ ಭಾಷೆಯ ಅಭ್ಯಾಸದಿಂದ ನಮ್ಮ ದೇಶಭಾಷೆಗಳೂ ರಾಷ್ಟ್ರಭಾಷೆಗಳೂ ಪುಷ್ಟಿಯಾಗುವುವೇ ಹೊರತು ಅವಕ್ಕೆ ಯಾವ ಹಾನಿಯೂ ಇಲ್ಲಘಿ."

ಇನ್ನು ಸಂಸ್ಕೃತವು ಕಲಿಯಲು ಕಷ್ಟವಾದ ಭಾಷೆ ಎಂಬ ಅನಿಸಿಕೆಯನ್ನು 'ವದತೋ ವ್ಯಾಘಾತ'ವೆಂದಷ್ಟೆ ಹೇಳಬಹುದು. ಫ್ರೆಂಚ್‌ಭಾಷೆಯಾಗಲಿ ಪ್ರೌಢ ಗಣಿತಶಾಸ್ತ್ರವಾಗಲಿ ಕಲಿಯಲು ಸುಲಭ, ಸಂಸ್ಕೃತ ಮಾತ್ರ ಕಷ್ಟ- ಎಂದಲ್ಲಿ ಅದು ಹಾಸ್ಯಾಸ್ಪದವೇ ಆದೀತು.

ವಿವಿಧ ಜ್ಞಾನಾಂಗಗಳನ್ನು ಸಮೃದ್ಧಗೊಳಿಸಿರುವ ಸಂಸ್ಕೃತ ಶಬ್ದಭಂಡಾರ, ಈಚಿನ ಶತಮಾನಗಳಲ್ಲಿ ಸಂಸ್ಕೃತವು ಅವಗಣನೆಗೆ ತುತ್ತಾದುದರ ಇತಿಹಾಸ ಸಂದರ್ಭಗಳು, ಸಂಸ್ಕೃತದ ಹೆಚ್ಚಿನ ಪ್ರಸಾರಕ್ಕೆ ಅವಶ್ಯವಾದ ವ್ಯಾವಹಾರಿಕ ಸಂಗತಿಗಳು -ಇವೇ ಮೊದಲಾದ ಅಂಶಗಳನ್ನು ಲೇಖನಗಳಲ್ಲಿ ಪುಷ್ಟೀಕರಿಸಿದ್ದಾರೆ.

ಈ ಇಡೀ ಸಂಕಲನದಲ್ಲಿಯೆ ಅತ್ಯಂತ ವಿಸ್ತಾರವಾದ ಮಹಾಮಹೋಪಾಧ್ಯಾಯ ವಿದ್ವಾನ್ ಎನ್. ರಂಗನಾಥಶರ್ಮಾರವರ 'ಸಂಸ್ಕೃತ ಸಾಹಿತ್ಯದಲ್ಲಿ ಸಾರ್ವಲೌಕಿಕ ದೃಷ್ಟಿ' ಶೀರ್ಷಿಕೆಯ ಲೇಖನದಲ್ಲಿ ಸಂಸ್ಕೃತಭಾಷೆಯೇ ಎಲ್ಲ ಜ್ಞಾನಾಂಗಗಳಿಗೂ ಪೋಷಕದ್ರವ್ಯವಾಗಿರುವುದನ್ನು ವಿವರಿಸಲಾಗಿದೆ. "ಆಲ್-ಬರೂನಿ, ಫೈಸಿ, ಅಬುಲ್ ಫಸಲ್, ದಾರಾಷಿಕೋ ಮತ್ತಿತರರು ರಾಮಾಯಣ, ಮಹಾಭಾರತ, ಭಗವದ್ಗೀತೆ, ಪಂಚತಂತ್ರಘಿ,ಉಪನಿಷತ್ತು- ಮೊದಲಾದವುಗಳನ್ನು ಪಾರಸೀಭಾಷೆಗೆ ಅನುವಾದ ಮಾಡಿರುವುದು ಇತಿಹಾಸಸಿದ್ಧ ಸಂಗತಿಯಾಗಿದೆ. ಹೀಗೆ ಇವೂ ಇನ್ನಿತರ ಪ್ರಮಾಣಗಳೂ ಎದ್ದು ಕಾಣುತ್ತಿರುವಾಗ, 'ಸಂಸ್ಕೃತವು ಪುರೋಹಿತರ ಭಾಷೆ, ಬ್ರಾಹ್ಮಣರ ಭಾಷೆ' ಎಂಬ ಅರ್ಥವಿಲ್ಲದ, ಆಧಾರವಿಲ್ಲದ ಹರಟೆಗಳನ್ನು ತಿರಸ್ಕರಿಸಬೇಕೇ ಹೊರತು ಇವುಗಳಲ್ಲಿ

ಹುರುಳೇನೂ ಇಲ್ಲ''.... ''ಸಂಸ್ಕೃತವು ಬ್ರಾಹ್ಮಣರ ಸ್ವತ್ತು ಎಂಬುದು ನಿಜವಾಗಿದ್ದ ಪಕ್ಷದಲ್ಲಿ ಬೌದ್ಧಮತೀಯರಾದ ಆರ್ಯದೇವ, ಭಾವಿವೇಕ, ಶಾಂತರಕ್ಷಿತ, ಧರ್ಮಕೀರ್ತಿ, ನಾಗಾರ್ಜುನ, ದಿಙ್ನಾಗ, ಚಂದ್ರಕೀರ್ತಿ- ಮುಂತಾದ ನೂರಾರು ಉದ್ದಾಮ ಪಂಡಿತರು ವಿಪುಲತರ್ಕದಿಂದ ಜಟಿಲವಾದ ಬೌದ್ಧದರ್ಶನ ಗ್ರಂಥಗಳನ್ನು ಸಂಸ್ಕೃತಭಾಷೆಯಲ್ಲಿ ಹೇಗೆ ಬರೆದರು?'' - ಎಂಬ ವಿದ್ವಾನ್ ರಂಗನಾಥಶರ್ಮಾರವರ ವ್ಯಾಖ್ಯೆಯು ಮಾರ್ಮಿಕವಾಗಿದೆ.

ವ್ಯಾವಹಾರಿಕ ವಿವರಗಳಿಗಿಂತ ಮಿಗಿಲಾಗಿ, ಸಂಸ್ಕೃತಭಾಷೆಯ ಲೋಕಹಿತ ಕಾರಕ ಸ್ವರೂಪವನ್ನು ಕುರಿತು ಶ್ರೀಶ್ರೀಗಳವರು ಆಡಿರುವ ಈ ಮಾತುಗಳು ಅತ್ಯಂತ ಮನನಾರ್ಹವಾಗಿವೆ-

''ಸರ್ವಮತಸಾಮರಸ್ಯವೂ, ಸರ್ವಸಹಾನುಭೂತಿ, ಅಹಿಂಸೆ - ಮುಂತಾದ ಉದಾತ್ತಭಾವನೆಗಳನ್ನು ಹೃದಯದಲ್ಲಿ ಎಬ್ಬಿಸುವ ಮೂಲಭಾಷೆ ಎಂದರೆ ಸಂಸ್ಕೃತವೇ. ಈ ಭಾಷೆಯಲ್ಲಿರುವ ತತ್ತ್ವಗ್ರಂಥಗಳಲ್ಲಿಯೂ ನೀತಿಗ್ರಂಥಗಳಲ್ಲಿಯೂ ಕಾಣಬರುವ ವಿಶ್ವವ್ಯಾಪಕಸಂದೇಶವೂ ಎಲ್ಲ ಜನರನ್ನೂ ಆಕರ್ಷಣಗೊಳಿಸುವಂಥದ್ದಾಗಿದೆ. ಮನುಷ್ಯನೂ ಪ್ರಾಣಿಗಳೂ ಪರಮಾತ್ಮನ ಅಂಶಗಳೇ ಆಗಿರುತ್ತಾರೆಂದೂ ಇಡಿಯ ವಿಶ್ವವೇ ಪರಮಾತ್ಮರೂಪದಿಂದ ಒಂದಾಗಿರುತ್ತದೆಯೆಂದೂ ಉಪದೇಶಿಸಿರುವ ವಿಶಾಲತತ್ತ್ವವು ಈ ಭಾಷೆಯಲ್ಲಲ್ಲದೆ ಮತ್ತೆ ಯಾವ ಭಾಷೆಯಲ್ಲಿಯೂ ಅಷ್ಟು ಸುಷ್ಪಷ್ಟವಾಗಿ ಇರುವುದಿಲ್ಲವು.''

ಭಾರತೀಯ ಸಂಸ್ಕೃತಿಯ ಬಗೆಗೂ ಸಂಸ್ಕೃತಭಾಷೆಯ ಬಗೆಗೂ ಆಸಕ್ತರಾದ ಎಲ್ಲರಿಗೂ ಅತ್ಯಂತ ಪ್ರಯೋಜನಕರವಾದ ಮತ್ತು ಸಂಸ್ಕೃತಸಂಬಂಧವಾದ ಹಲವಾರು ಪ್ರಶ್ನೆಗಳಿಗೆ ತಾರ್ಕಿಕ ಸಮಾಧಾನ ನೀಡಿರುವಂಥವೂ ಆದ ಈ ''ಸಂಸ್ಕೃತವೂ ಸಂಸ್ಕೃತಿಯೂ'' ಲೇಖನಸಂಗ್ರಹವನ್ನು ಸಂಯೋಜಿಸಿ ಹೊರತಂದಿರುವ ಅಧ್ಯಾತ್ಮ ಪ್ರಕಾಶ ಕಾರ್ಯಾಲಯ ಅಭಿನಂದನೀಯವಾಗಿದೆ. ಸಮಸ್ತ ಜನತೆಯ ಮೇಲೆ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳ ಅನುಗ್ರಹ ಸದಾ ಇರಲೆಂದು ಹಾರೈಸುತ್ತೇನೆ.

**- ಡಾ|| ಎಸ್.ಆರ್. ರಾಮಸ್ವಾಮಿ**

ಶ್ರೀ ಮನ್ಮಥನಾಮ ಸಂವತ್ಸರ
ಕಾರ್ತಿಕ ಶುದ್ಧ ಪಾಡ್ಯಮಿ
ಬಲಿಪಾಡ್ಯಮಿ; ವಿಕ್ರಮಶಕಾರಂಭ
12-11-2015

# ಮುನ್ನುಡಿ

''ಸಂಸ್ಕೃತ'' ಎಂಬ ಪದಕ್ಕೆ ''ಸಂಸ್ಕರಿಸಲ್ಪಟ್ಟ'', ''ಪರಿಶುದ್ಧವಾದ'' ''ಸಂಸ್ಕಾರದಿಂದ ಕೂಡಿರುವ'', ''ಸಂಸ್ಕೃತಿಯನ್ನು ಪ್ರತಿಬಿಂಬಿಸುವ'' ''ಪ್ರಶಸ್ತವಾದ'' ಎಂಬ ಹತ್ತು ಹಲವಾರು ವ್ಯಾಖ್ಯೆಗಳಿದ್ದು ಅರ್ಥಗರ್ಭಿತವಾದ, ಸುಶಿಕ್ಷಿತರ, ಸಂಸ್ಕಾರವಂತರ ಭಾಷೆ ಎಂದು ಪರಿಗಣಿಸಲ್ಪಟ್ಟಿದೆ. ''ದೇವವಾಣೀ, ಅಮರವಾಣೀ'' ಇತ್ಯಾದಿ ಹೆಸರುಗಳಿಂದ ಕೂಡಿರುವ ಈ ಭಾಷೆ ಭಾರತೀಯ ಸಂಸ್ಕೃತಿ, ಸದಾಚಾರ, ಆಚಾರ-ವಿಚಾರ, ರೀತಿ-ನೀತಿಗಳ ಗಣಿಯಾಗಿದೆ. ಆದ್ದರಿಂದಲೇ ಸಂಸ್ಕೃತ ಮತ್ತು ಸಂಸ್ಕೃತಿ ಭಾರತದ ಎರಡು ಪ್ರತಿಷ್ಠೆಗಳೆಂದು ಹೆಸರುಗಳಿಸಿದೆ. ಭಾಷೆಗಳಲ್ಲಿ ಮಧುರವೂ, ದಿವ್ಯವೂ ಆದುದೇ ಈ ಗೀರ್ವಾಣವಾಣಿ.

ಸಂಸ್ಕೃತ ಭಾಷೆಯ ಸಾಹಿತ್ಯವನ್ನು ವೈದಿಕಸಾಹಿತ್ಯ ಹಾಗೂ ಲೌಕಿಕ ಸಾಹಿತ್ಯವೆಂದು ಇಬ್ಭಾಗವಾಗಿ ವಿಭಜಿಸಬಹುದು. ವೇದ ವಿಶ್ವದಲ್ಲೇ ಅತ್ಯಂತ ಪ್ರಾಚೀನವಾದುದಾಗಿದ್ದು ಅಪೌರುಷೇಯವಾಗಿದೆ. ಋಷಿಮುನಿಗಳು ತಮ್ಮ ತಪಃಶಕ್ತಿಯಿಂದ ಕಂಡುಕೊಂಡ ಈ ಮಂತ್ರಗಳು ಅನೇಕ ಸಾವಿರ ವರ್ಷಗಳಿಂದಲೂ ಸಹ ಪಾರಂಪರಿಕವಾಗಿ ಗುರುವಿನಿಂದ ಶಿಷ್ಯರಿಗೆ, ತಂದೆಯಿಂದ ಮಗನಿಗೆ ಮೌಖಿಕರೂಪದಲ್ಲಿ ಹರಿದು ಬಂದಿದೆಯಾದ್ದರಿಂದಲೇ ತನ್ನ ನಿರ್ದಿಷ್ಟತೆ, ನಿರ್ದುಷ್ಟತೆ, ನಿಖರತೆಗಳನ್ನು ಉಳಿಸಿಕೊಂಡು ಬಂದಿದೆ. ಕಿವಿಯಿಂದ ಕೇಳಿದ್ದರಿಂದಲೇ ಇದಕ್ಕೆ ''ಶ್ರುತಿ'' ಎಂದು ಹೆಸರಾಯಿತು. ಈ ವೇದ ವಾಙ್ಮಯ ಸಂಹಿತೆ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತು ಎಂಬುದಾಗಿ ವಿಭಜಿತವಾಗಿದ್ದು ಬ್ರಹ್ಮಚರ್ಯಘಿ, ಗೃಹಸ್ಥಘಿ, ವಾನಪ್ರಸ್ಥ ಹಾಗೂ ಸಂನ್ಯಾಸಾಶ್ರಮಗಳ ಪ್ರತೀಕವಾಗಿದೆ. ವೇದಾಂತ, ಧರ್ಮಶಾಸ್ತ್ರಘಿ, ವ್ಯಾಕರಣ, ನ್ಯಾಯಶಾಸ್ತ್ರ ಮುಂತಾದ ಅನೇಕ ಶಾಸ್ತ್ರಗಳಲ್ಲಿ ಎಲ್ಲ ಕಾಲಕ್ಕೂ ನಿಲ್ಲತಕ್ಕ ಮೂಲ ಸೂತ್ರಗಳ ರಚನೆ ಸಂಸ್ಕೃತ ಭಾಷೆಯಲ್ಲಿ ಅಡಗಿದೆ. ಶೃತಿ, ಸ್ಮೃತಿ, ಇತಿಹಾಸ, ಪುರಾಣಗಳು, ಶಾಸ್ತ್ರಗ್ರಂಥಗಳು ಹೇಗೋ ಹಾಗೆಯೇ ಅಪೂರ್ವವಾದ ರಸವತ್ಕಾವ್ಯಗಳ ಸಮೃದ್ಧಿ ಸಂಸ್ಕೃತ ಸಾಹಿತ್ಯದ ವೈಶಿಷ್ಟ್ಯವಾಗಿದೆ. ಶೃತಿ, ಸ್ಮೃತಿಗಳಿಂದ ಈ ಸಾಹಿತ್ಯ ಹೇಗೆ ಪೂಜ್ಯವಾಗಿದೆಯೋ ಹಾಗೆಯೇ ಕಾವ್ಯ ಸಮೃದ್ಧಿಯಿಂದ ಪ್ರಿಯವೂ ಆಗಿದೆ. ಪದ್ಯಘಿ, ಗದ್ಯಘಿ, ಚಂಪೂ, ನಾಟಕ, ಸುಭಾಷಿತ, ಮುಕ್ತಕ, ಮುಂತಾದ ಅನೇಕ ಮುಖಗಳಲ್ಲಿ ಹೊರಹೊಮ್ಮಿರುವ ಅಕ್ಷಯವಾದ ಈ ಕಾವ್ಯಪ್ರವಾಹ ಸುರಭಾರತಿಯ ವಿಲಾಸವಾಗಿ ಬೆಳೆದಿದೆ. ವಿಶ್ವದ ಅತ್ಯುತ್ತಮ ಕೋಟಿಯ ಕೃತಿಗಳಲ್ಲಿ ಸೇರತಕ್ಕ ಮಹತ್ವವನ್ನು ಇವುಗಳಲ್ಲಿ ಅನೇಕ ಕೃತಿಗಳು ಹೊಂದಿದೆ. ವೈದ್ಯಶಾಸ್ತ್ರಘಿ, ನಕ್ಷತ್ರಶಾಸ್ತ್ರಘಿ, ಶಿಲ್ಪಘಿ, ಅರ್ಥಶಾಸ್ತ್ರಘಿ, ರಾಜನೀತಿ, ಅಲಂಕಾರ, ಗಣಿತ, ಕಾಮಶಾಸ್ತ್ರಘಿ, ರೇಖಾಶಾಸ್ತ್ರಘಿ, ಸಂಗೀತ, ನರ್ತನ ಮುಂತಾದವುಗಳಲ್ಲಿ ಆಧಾರಯುತವಾದ ಪ್ರಮುಖ ಗ್ರಂಥಗಳು ಈ ಭಾಷೆಯಲ್ಲಿ ರಚಿತವಾಗಿದೆ. ಪಾಣಿನಿ,

**ಪತಂಜಲಿ, ವರರುಚಿ, ಮುಂತಾದ ವಯ್ಯಾಕರಣಿಗಳೂ, ಉದಯನಾಚಾರ್ಯರೂ, ಗಂಗೇಶೋಪಾಧ್ಯಾಯ, ರಘುನಾಥ ಶೀರೋಮಣಿ ಮುಂತಾದ ನೈಯ್ಯಾಯಿಕರು, ಶಂಕರಾಚಾರ್ಯರೂ, ರಾಮಾನುಜಾಚಾರ್ಯರೂ, ಮಧ್ವಾಚಾರ್ಯರ ವೇದಾಂತಗ್ರಂಥಗಳು, ಭಾಸ್ಕರಾಚಾರ್ಯರೂ, ಆರ್ಯಭಟ, ಸುಶ್ರುತ, ಚರಕ ಮುಂತಾದ ಸುಪ್ರಸಿದ್ಧ ವಿಜ್ಞಾನಿಗಳೂ, ಶಾಮಾಶಾಸ್ತ್ರಿ ಮುಂತಾದ ಅರ್ಥಶಾಸ್ತ್ರಜ್ಞರೂ, ವಾಲ್ಮೀಕಿ, ವ್ಯಾಸ, ಕಾಳಿದಾಸ, ಭಾಸ, ಭಾರವಿ, ಮಾಘ, ಹರ್ಷ, ಭವಭೂತಿ, ವಿಶಾಖದತ್ತರೂ, ಭಟ್ಟನಾರಾಯಣ, ಭರ್ತೃಹರಿ, ಭರ್ತೃಮೇಂಠ, ಭರತ ಮುಂತಾದ ಕವಿಗಳೂ, ದಾರ್ಶನಿಕರೂ, ವಿಶ್ವನಾಥ, ಜಗನ್ನಾಥ, ಕಲ್ಹಣ, ಬಿಲ್ಹಣ, ಕಯ್ಯಟ, ಮಲ್ಲಟ, ಅಭಿನವಗುಪ್ತರೂ, ಕುಂತಕ, ಕ್ಷೇಮೇಂದ್ರರೂ, ವಿಶ್ವನಾಥ, ರುದ್ರಟ, ವಾಮನ, ಜಗನ್ನಾಥ ಮುಂತಾದ ಅಲಂಕಾರ ಶಾಸ್ತ್ರಜ್ಞರೂ ಸಂಸ್ಕೃತ ಶಾಸ್ತ್ರಸಾಹಿತ್ಯವನ್ನು ಪುಷ್ಟೀಕರಿಸಿದ್ದಾರೆ.**

**ಇಷ್ಟೆಲ್ಲಾ ವಿಪುಲವಾದ ವೈದಿಕ ಲೌಕಿಕ ಸಾಹಿತ್ಯವಿದ್ದರೂ ಇಂದಿಗೆ ಈ ಸಂಸ್ಕೃತ ಪ್ರಸ್ತುತವೇ? ಇದು ಆಡುಭಾಷೆಯಾಗಿತ್ತೇ? ಇದು ಮೃತಭಾಷೆಯೇ, ಜೀವಂತ ಭಾಷೆಯೇ ಎಂಬ ವಾದವಿವಾದಗಳು ನಡೆದಿದೆ. ನಡೆಯುತ್ತಲೂ ಇದೆ. ಸಂಸ್ಕೃತ ಭಾರತೀ ಈ ವಿಷಯದಲ್ಲಿ ಮಹತ್ತರವಾದ ಕಾರ್ಯ ಕೈಗೊಂಡಿದೆ. ಸಂಸ್ಕೃತ ಜೀವಂತ ಭಾಷೆ, ಆಡುಭಾಷೆ ಎಂದು ತೋರಿಸಲು ಸಂಭಾಷಣ ಶಿಬಿರಗಳು, ಸಾಪ್ತಾಹಿಕ ಮಿಲನಗಳು, ಸಂಸ್ಕೃತಗ್ರಾಮ, ಸಂಸ್ಕೃತ ಕುಟುಂಬ ಇತ್ಯಾದಿ ಹತ್ತು ಹಲವಾರು ಯೋಜನೆಗಳಡಿಯಲ್ಲಿ ಕಳೆದ** ೩ ದಶಕಗಳಿಂದಲೂ ಶ್ರಮಿಸುತ್ತಾ ಬಂದಿದೆ. ಬೆಂಗಳೂರಿನಿಂದ ಪ್ರಕಟವಾಗುತ್ತಿರುವ ಸಂಭಾಷಣ ಸಂದೇಶ ಮಾಸಪತ್ರಿಕೆ ಪತ್ರಿಕೋದ್ಯಮದಲ್ಲಿ ಂದು ದಾಖಲೆಯನ್ನೇ ಸೃಷ್ಟಿಸಿದೆ. ಸಂಸ್ಕೃತ ಜೀವಂತಭಾಷೆ ಎನ್ನುವುದಕ್ಕೆ ಈ ಕೆಳಗಿನ ಕೆಲವು ಕಾರಣಗಳನ್ನು ಕೊಡಬಹುದು.

**1. ಸಂಸ್ಕೃತ ಪತ್ರಿಕೋದ್ಯಮ:-** "ಸಂಸ್ಕೃತ ವರ್ತಮಾನತ್ವಂ" ಎಂಬ ಬರೋಡಾದಿಂದ ಪ್ರಕಟವಾಗುತ್ತಿರುವ ದೈನಂದಿನ, "ಯುಗಗತಿಃ" ಎಂಬ ಗೋರಖಪುರದಿಂದ ಪ್ರಕಟವಾಗುತ್ತಿರುವ ಸಾಪ್ತಾಹಿಕ, ಕಾನ್ಪುರದಿಂದ ಪ್ರಕಟವಾಗುತ್ತಿರುವ "ಪಾರಿಜಾತಂ" ಎಂಬ ಮಾಸಿಕ, ತ್ರಿಶೂರಿನಿಂದ ಪ್ರಕಟವಾಗುತ್ತಿರುವ "ಭಾರತಮುದ್ರಾ" ಎಂಬ ದ್ವೈಮಾಸಿಕ, ದಿಲ್ಲಿಯಿಂದ ಪ್ರಕಟವಾಗುತ್ತಿರುವ "ಸಂಸ್ಕೃತಮಂಜರಿ" ಎಂಬ ತ್ರೈಮಾಸಿಕ, ಮೇಲು ಕೋಟೆಯಿಂದ ಪ್ರಕಟವಾಗುತ್ತಿರುವ "ಛಂದಸ್ವತೀ" ಎಂಬ ಷಾಣ್ಮಾಸಿಕಗಳೇ ಅಲ್ಲದೆ ಜಾಹ್ನವೀ, ವಿಶ್ವವಾಣೀ, ಸಂಸ್ಕೃತವರ್ತಮಾನಪತ್ರಂರೂ, ವಿಶ್ವಸ್ಯ ವೃತ್ತಾಂತಂ ಎಂಬ ಈ ಜರ್ನಲ್ಸ್ ಸಹ ಇಂದು ಸಂಸ್ಕೃತದಲ್ಲಿ ಪ್ರಕಟವಾಗುತ್ತಿದೆ.

**2. ಸಂಸ್ಕೃತದಲ್ಲಿ ಆತ್ಮಕಥೆ:-** ಸಮಸಾಮಯಿಕ ಸಂಸ್ಕೃತ ಕವಿಗಳಲ್ಲಿ ಓಗೇಟಿ ಪರಿಕ್ಷಿತ್ ಶರ್ಮರವರು "ಕಾಲಾಯಿತಸ್ಮೈ ನಮಃ" ಎಂಬ ಆತ್ಮಕಥೆ ಬರೆದು ಪುಣೆಯಿಂದ ಪ್ರಕಟವಾಗಿದ್ದರೆ, ಪ್ರಥಮ ಜ್ಞಾನಪೀಠ ಪುರಸ್ಕೃತರಾದ ಸತ್ಯವ್ರತಶಾಸ್ತ್ರಿಗಳು

"ಭವಿತವ್ಯಾನಾಂ ದ್ವಾರಾಣಿ ಭವಂತಿ ಸರ್ವತ್ರ" ಎಂಬ ತಮ್ಮ ಆತ್ಮಕಥೆಯನ್ನು ಬರೆಯುತ್ತಿದ್ದಾರೆ.

**3. ಅನುವಾದಗಳು:-** ಸರಸ್ವತೀ ಸಮ್ಮಾನ್ ಪುರಸ್ಕೃತರಾದ ಭೈರಪ್ಪನವರ "ಸಾರ್ಥ", "ತಬ್ಬಲಿ ನೀನಾದೆ ಮಗನೇ", "ಗೃಹಭಂಗ", "ಪರ್ವ" ಕೃತಿಗಳು, ಕುವೆಂಪು ಅವರ "ರಾಮಾಯಣ ದರ್ಶನ", ಮಾಸ್ತಿಯವರ "ಸುಬ್ಬಣ್ಣ", ಹಾಮಾನಾಯಕರ "ಮಕ್ಕಳ ಮನಸ್ಸು" ಇತ್ಯಾದಿ ಕೃತಿಗಳು ಕನ್ನಡದಿಂದ ಸಂಸ್ಕೃತಕ್ಕೂ, ಷೇಕ್ಸ್‌ಪಿಯರ್ ನ ಹ್ಯಾಮ್ಲೆಟ್, ಮರ್ಚೆಂಟ್ ಆಫ್ ವೆನಿಸ್, ರೋಮಿಯೋ ಅಂಡ್ ಜೂಲಿಯಟ್, ಆಂಗ್ಲದಿಂದ ಸಂಸ್ಕೃತಕ್ಕೂ, ರಾಮಚರಿತಮಾನಸ ಹಿಂದಿಯಿಂದ ಸಂಸ್ಕೃತಕ್ಕೂ ಅನುವಾದಗೊಂಡಿದ್ದೂ, ಅನುವಾದಸಾಹಿತ್ಯವನ್ನು ಸಮೃದ್ಧಿಗೊಳಿಸಿದೆ. ಬೈಬಲ್ ಹಾಗೂ ಖುರಾನ್ ಸಹ ಸಂಸ್ಕೃತಕ್ಕೆ ಅನುವಾದವಾಗಿದೆ.

**4. ಪ್ರವಾಸಕಥನಗಳು:-** ಸಂಸ್ಕೃತದಲ್ಲಿ ಇಂದೂ ಸಹ ಪ್ರವಾಸಕಥನಗಳು ಹೊರಹೊಮ್ಮುತ್ತಿದೆ. ಸತ್ಯವ್ರತಶಾಸ್ತ್ರಿಗಳ ಥಾಯ್‌ಲ್ಯಾಂಡ್, ಜರ್ಮನಿಯ ಅನುಭವಗಳು, ರಮಾಕಾಂತಶುಕ್ಲಾ ಅವರ ಮೌರೀಷಿಯಸ್ ಅನುಭವಗಳು, ರೇವಾಪ್ರಸಾದ ದ್ವಿವೇದಿಯವರ ಅಮೇರಿಕಾ ಅನುಭವಗಳು, ಅಭಿರಾಜ ರಾಜೇಂದ್ರ ಮಿಶ್ರಾ ಅವರ ಬಾಲಿ ಇಂಡೋನೇಶೀಯಾ ಅನುಭವಗಳು, ಓಂಪ್ರಕಾಶ್ ಪಾಂಡೇ ಅವರ ಪ್ಯಾರೀಸ್ ಅನುಭವಗಳು, ದಿಗಂಬರಮಹಾಪಾತ್ರ ಅವರ ರಷ್ಯಾದೇಶದ ಅನುಭವಗಳು ಸಂಸ್ಕೃತದಲ್ಲಿ ರಚಿತವಾಗಿದೆ.

**5. ರಾಷ್ಟ್ರನಾಯಕರ ಬಗ್ಗೆ ಕಾವ್ಯಗಳು :-** ಮಹಾತ್ಮಾಗಾಂಧೀ, ಜವಹರಲಾಲ್ ನೆಹರು, ವಲ್ಲಭಭಾಯಿಪಟೇಲ್, ರಾಮಕೃಷ್ಣ ಪರಮಹಂಸ, ವಿವೇಕಾನಂದ, ರಾಜೇಂದ್ರ ಪ್ರಸಾದ್, ಇಂದಿರಾಗಾಂಧಿ, ರಾಜೀವಗಾಂಧಿ, ಮದನಮೋಹನ ಮಾಳವೀಯ ಅವರ ಬಗ್ಗೆ ಸಂಸ್ಕೃತದಲ್ಲಿ ಮಹಾಕಾವ್ಯಗಳು, ಖಂಡಕಾವ್ಯಗಳು, ನಾಟಕಗಳು ರಚನೆಗೊಂಡಿದೆ.

**6. ಮಹಿಳಾ ಸಾಹಿತ್ಯ :-** ಬಿಲಾಸಪುರದ ಪುಷ್ಪಾದೀಕ್ಷಿತ್, ಕಾನ್ಪುರದ ನಳಿನೀಶುಕ್ಲಾ, ಜಮ್ಮುವಿನ ವೇದಕುಮಾರಿ ಘಾಯ್, ನಾಗಪುರದ ಲೀನಾರಸ್ತೋಗಿ, ಕಾಶಿಯ ಕಮಲಾ ಪಾಂಡೇಯ, ಬರೋಡಾದ ಉಮಾ ದೇಶಪಾಂಡೇ, ಬರೇಲಿಯ, ಸಾವಿತ್ರೀದೇವಿ ಶರ್ಮಾ, ಗಾಝಿಯಾಬಾದ್‌ನ ಅಂಬೂರಾನಿ, ಪಾಟ್ನಾವಿನ ಮಿಥಿಲೇಶಕುಮಾರೀ ಮಿಶ್ರಾ, ಉತ್ಕಲದ ಪರಾಂಬಾ ಶ್ರೀ ಯೋಗಮಾಯಾ, ಮೈಸೂರಿನ ರೂಪಾ, ಲಖನೌನ ರಾಕಾಜೈನ್, ಬೆಂಗಳೂರಿನ ಅನಂತಲಕ್ಷ್ಮಿ ನಟರಾಜನ್ ಅವರು ಶೀಲಾ, ವಿಜ್ಜಿಕಾ, ವಿಜ್ಞಾ, ಮಾರಿಲಾ, ಮೋರಿಕಾಂಬಾ, ರಾಮಭದ್ರಾಂಬ ಅವರ ಪರಂಪರೆಯನ್ನು ಇಂದೂ ಸಹ ಮುನ್ನಡೆಸುತ್ತಾ ಬಂದಿದ್ದಾರೆ.

7. ಸಂಸ್ಕೃತ ಕಂಪ್ಯೂಟರ್ ಅಳವಡಿಕೆಗೆ ಅತ್ಯಂತ ಸೂಕ್ತವೆಂದು ಪರಿಗಣಿಸಲಾಗಿದೆ.

ಇದಕ್ಕೆ ಭಾಷಾ ನಿಖರತೆ, ವೈಜ್ಞಾನಿಕತೆಯೇ ಮುಖ್ಯ ಕಾರಣ. ಆದ್ದರಿಂದಲೇ ''ನೋಂಭಾಂಸ್ಕಿ'' ಮುಂತಾದವರು ಅಮೇರಿಕಾದಲ್ಲಿ ಇದರ ಬಗ್ಗೆ ವಿಶೇಷ ಅಧ್ಯಯನ ಕೈಗೊಂಡಿದ್ದಾರೆ.

**8.** ಕಳೆದ ವರ್ಷ ಸಾಹಿತ್ಯ ಅಕಾಡೆಮಿ ಪುರಸ್ಕೃತಿ ಪ್ರಶಸ್ತಿಯು ''ಚಲದ್ ದೂರವಾಣೀ''-ಮೊಬೈಲ್ ಫೋನಿನಿಂದಾಗುವ ದುಷ್ಪರಿಣಾಮಗಳು-ಎಂಬ ಕೃತಿಗೆ ಲಭಿಸಿದೆ.

ಇಂದೂ ಸಹ ರಾಮಾಯಣ, ಮಹಾಭಾರತ, ಮೇಘದೂತ ಆಧಾರಿತ ಕಾವ್ಯಗಳು ವಿಪುಲವಾಗಿ ರಚಿತವಾಗುತ್ತಿದೆ. ಅಮೇರಿಕದ ಜಾರ್ಜ್ ಕಾರ್ಡೋಿನ, ರಾಬರ್ಟ್ ಗೋಲ್ಡ್‌ಮನ್, ಹ್ಯಾನ್ಸ್ ಹೆನ್ರಿಷ್ ಹಾಕ್, ಷೆಲ್ಡಂಪೊಲಾಕ್ ಮುಂತಾದವರು ಮ್ಯಾಕ್ಸ್ ಮುಲ್ಲರ್, ವಿಂಟರ್ ನಿಡ್ಸ್‌ಫಿ, ಕೋಲ್ ಬ್ರೂಕ್, ವಿಟ್ನೀಫಿ, ಕೀತ್ ಮುಂತಾದವರ ಪರಂಪರೆಯನ್ನು ಮುನ್ನಡೆಸುತ್ತಿದ್ದಾರೆ.

ಉರ್ದು ಭಾಷೆಯ ''ಗಜಲ್'', ವಿದೇಶೀಯ ಭಾಷೆಗಳಾದ ಹೈಕೂ, ಜೀಜಿಟ್ಸುಗಳಲ್ಲಿಫಿ, ಮರಾಠಿಯ ''ಓವಿ'' ಹಾಗೂ ತೆಲುಗುವಿನ ''ಸೀಸಂ'' ವೃತ್ತಗಳಲ್ಲಿ ಸಂಸ್ಕೃತದಲ್ಲಿ ಕಾವ್ಯರಚನೆ ಆಗುತ್ತಿದೆ. ಮಹಾಭಾಷ್ಯದಲ್ಲಿ ಸಂಸ್ಕೃತ ಆಡುಭಾಷೆ ಎನ್ನುವುದಕ್ಕೆ ಉಲ್ಲೇಖವಿರುವಂತೆಯೇ ಸಂಸ್ಕೃತಗ್ರಾಮ ಎಂದೇ ಪ್ರಖ್ಯಾತವಾದ ಮತ್ತೂರಿನಲ್ಲಿ ಪ್ರತಿಯೊಬ್ಬರೂ ಸಂಸ್ಕೃತದಲ್ಲಿ ವ್ಯವಹರಿಸುತ್ತಾರೆ.

ಪ್ರಾಯಶಃ ಈ ಮುನ್ನುಡಿಯನ್ನು ಈ ಎರಡು ಆಂಗ್ಲ ಹೇಳಿಕೆಗಳಿಂದಲೇ ಪುಷ್ಟಿಗೊಳಿಸಬಹುದು:-

1. Sanskrit language has a wonderful structure, more perfect than Greek, more copious than Latin and more exquisitly refined than Greek and Latin put together - **Sir William Jones.**

2. Sanskrit is like the river Ganga for our languages, I always feel that if it were to dry up, the regional languages would loose its vitality and power. It seems to me that elementary knowledge of Sanskrit is essential for all - **Mahatma Gandhi.**

ಈ ಹಿನ್ನೆಲೆಯಲ್ಲಿ ಸಂಸ್ಕೃತವೂ ಸಂಸ್ಕೃತಿಯೂ ಗಮನಾರ್ಹವಾದ ಕೊಡುಗೆಯಾಗಿದೆ.

**ಸಂಸ್ಕೃತವೂ- ಸಂಸ್ಕೃತಿಯೂ :- ಸಚ್ಚಿದಾನಂದೇಂದ್ರ ಸರಸ್ವತೀ, ಜ್ಞಾನಾನಂದೇಂದ್ರ ಸರಸ್ವತೀ ಸ್ವಾಮಿಗಳು.**

ಈ ಗ್ರಂಥವು ಮೂರು ಭಾಗಗಳಲ್ಲಿ ವಿಂಗಡಿತವಾಗಿದೆ. ಭಾಗ 1 ರಲ್ಲಿ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು ಬರೆದ 39 ಲೇಖನಗಳು, ಭಾಗ 2ರಲ್ಲಿ ಶ್ರೀ ಜ್ಞಾನಾನಂದೇಂದ್ರಸರಸ್ವತೀಸ್ವಾಮಿಗಳು ಬರೆದ 9ಲೇಖನಗಳು ಭಾಗ 3ರಲ್ಲಿ ಇತರೆ ವಿದ್ವಾಂಸರುಗಳಿಂದ ಬರೆದ 8 ಲೇಖನಗಳು ಸೇರ್ಪಡೆಯಾಗಿದೆ.

**ಸಂಸ್ಕೃತವೂ- ವೇದಾಂತವೂ - ನವೆಂಬರ್ 1948:-** ಸಂಸ್ಕೃತ ಭಾಷೆಯ ಅಪರಿಮಿತ ಶಬ್ದಭಂಡಾರ, ಸಂಸ್ಕೃತದ ಉತ್ತಮ ವ್ಯಾಕರಣದಿಂದ ತುಲನಾತ್ಮಕ ಭಾಷಾಶಾಸ್ತ್ರಫಿ, ತುಲನಾತ್ಮಕ ಧರ್ಮಶಾಸ್ತ್ರಫಿ, ತುಲನಾತ್ಮಕ ಪುರಾಣಗಳ ಬೆಳವಣಿಗೆ, ಆಡುಭಾಷೆಯಾಗಿ ಸಂಸ್ಕೃತ, ಸಂಸ್ಕೃತದ ಸಿರಿ ವೇದಾಂತ, ವ್ಯಕ್ತಿಗೆ ಶಾಂತಿ, ಸಮಾಜಕ್ಕೂ ದೇಶಕ್ಕೂ ವೇದಾಂತದಿಂದಲೇ ಶಾಂತಿ, ಪಾಶ್ಚಾತ್ಯರ ಮೇಲೆ ಉಪನಿಷತ್ತುಗಳ ಪ್ರಭಾವ ಇತ್ಯಾದಿ ವಿಷಯಗಳನ್ನು ಕುರಿತು ಈ ಲೇಖನದಲ್ಲಿ ಸ್ವಾಮಿಗಳು ಮನದಟ್ಟು ಮಾಡಿದ್ದಾರೆ.

**ರಷಿಯಾ ದೇಶದಲ್ಲಿ ಸಂಸ್ಕೃತದ ಅಭ್ಯಾಸ :-** ಈ ಲೇಖನ ಅತ್ಯಂತ ಉಪಯುಕ್ತವಾದ ಮಾಹಿತಿಯನ್ನು ನೀಡುತ್ತದೆ. ರಷ್ಯಾದೇಶದವರು ಸಂಸ್ಕೃತಕ್ಕೆ ನೀಡಿರುವ ಕೊಡುಗೆಯನ್ನು ಈ ಲೇಖನ ಸಾದರಪಡಿಸುತ್ತದೆ. ವೆಟ್ಲಿಂಗ್ ವಿದ್ವಾಂಸನಿಂದ ರಚಿತವಾದ 7 ಸಂಪುಟಗಳ ಸಂಸ್ಕೃತ ನಿಘಂಟು, ವಾರನ್ನಿಕಾ ವಿಜ್ಞಾನಶಾಸ್ತ್ರದ ಸಂಸ್ಕೃತ ಅಭ್ಯಾಸ, ಕೌಟಿಲ್ಯನ ಅರ್ಥಶಾಸ್ತ್ರದ ಸವ್ಯಾಖ್ಯಾನದ ಅನುವಾದ ಮುಂತಾದ ಉಪಯುಕ್ತ ಮಾಹಿತಿಯನ್ನು ಸ್ವಾಮಿಗಳು ಸೋವಿಯಟ್ ದೇಶ ಎಂಬ ಡಿಸೆಂಬರ್ 5ನೇ ತಾರೀಖಿನ ಸಂಚಿಕೆಯಿಂದ ಸಂಗ್ರಹಿಸಿ ಮಾಹಿತಿ ನೀಡಿದ್ದಾರೆ. ಈ ವಿಷಯಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಆರ್.ಹೆಚ್. ಸ್ಟೇಸಿ ಅವರಿಂದ ರಚಿತವಾದ ಇಂಡಿಯಾ ಇನ್ ರಷ್ಯನ್ ಲಿಟರೇಚರ್ 1985 ಮೋತೀಲಾಲ್ ಬನಾರಸಿದಾಸ್‌ನಿಂದ ಪ್ರಕಟವಾದ ಪುಸ್ತಕದಿಂದಲೂ ಪಡೆಯಬಹುದು.

## ಸಂಸ್ಕೃತ ಭಾಷೆ

ಸಂಸ್ಕೃತ ಭಾರತದ ರಾಷ್ಟ್ರಭಾಷೆಯಾಗಲು ಸರ್ವದಾ ಯೋಗ್ಯವೆಂದು ಸಿತಾರಾಮಯ್ಯಫಿ, ಪಣಿಕ್ಕರ್, ಜನರಲ್ ಕಾರಿಯಪ್ಪಫಿ, ಪ್ರಕಾಶ್ ಅವರ ಅಭಿಪ್ರಾಯಗಳ ಹಿನ್ನಲೆಯಲ್ಲಿ ಸ್ವಾಮೀಜಿಯವರು ಈ ಕೆಲವು ಪ್ರಬಲವಾದ ಕಾರಣಗಳನ್ನು ಕೊಡುತ್ತಾರೆ:-

(i) ಸಂಸ್ಕೃತ ಅತ್ಯಂತ ಪುರಾತನವಾದ ಭಾಷೆ.

(ii) ಸಮಾಜಶಾಸ್ತ್ರದ ದೃಷ್ಟಿಯಿಂದ ಸಂಸ್ಕೃತವನ್ನು ಮನ್ವಾದಿ ಸ್ಮೃತಿಗಳ ಹಿನ್ನೆಲೆಯಲ್ಲಿ ಅಭ್ಯಸಿಸಬೇಕು.

(iii) ಸಂಸ್ಕೃತದ ನಿರುಕ್ತ ವ್ಯಾಕರಣದ ಹಿನ್ನೆಲೆಯಲ್ಲಿ ತುಲನಾತ್ಮಕ ಧರ್ಮವಿಚಾರ, ತುಲನಾತ್ಮಕ ಭಾಷಾಶಾಸ್ತ್ರಗಳ ಅಧ್ಯಯನಕ್ಕೆ ಸಹಾಯಕವಾಗುವುದು.

(iv) ಸಂಸ್ಕೃತಭಾಷೆಯ ವಿಸ್ತೃತ ವಾಙ್ಮಯ.

(v) ಭಾರತೀಯ ಸಂಸ್ಕೃತಿಯ ಇತಿಹಾಸವನ್ನು ತಿಳಿಯಲು ಸಂಸ್ಕೃತದ ರಾಮಾಯಣ, ಮಹಾಭಾರತಗಳು ಅವಶ್ಯಕ.

(vi) ದೇಶಭಾಷೆಗಳಿಗೆ ಶಬ್ದಭಂಡಾರ ಒದಗಿಸುತ್ತಿರುವ ಭಾಷೆ ಸಂಸ್ಕೃತ.

(vii) ಹೊಸ ಶಬ್ದಗಳ ನಿರ್ಮಾಣ ಶಕ್ತಿ ಸಂಸ್ಕೃತಕ್ಕಿದೆ.

(viii) ಸಮಗ್ರ ಹಿಂದೂಜನರನ್ನು ಒಂದುಗೂಡಿಸುವ ಭಾಷೆ ಸಂಸ್ಕೃತ.

(ix) ಸರ್ವಮತ ಸಾಮರಸ್ಯ, ಸರ್ವಸಹಾನುಭೂತಿ, ಅಹಿಂಸೆ ಮೊದಲಾದ ಭಾವನೆಗಳನ್ನು ಹುಟ್ಟಿಸುವ ಭಾಷೆ ಸಂಸ್ಕೃತ.

**ಸಂಸ್ಕೃತದ ವಿಷಯಕ್ಕೆ ಅನಾದರ:-** ಮೆಕಾಲೆ ವರದಿ, ಸಂಸ್ಕೃತ ಕಲಿಯಲು ಕಷ್ಟ ಎಂಬ ಹಿನ್ನೆಲೆಯಲ್ಲಿ ಈ ಲೇಖನದಲ್ಲಿ ಸಂಸ್ಕೃತ ಮೃತಭಾಷೆಯಲ್ಲ, ಅದು ಇಂದಿಗೂ ಸಹ ಉಪಯುಕ್ತವಾದ ಭಾಷೆ. ತ್ರಿಕಾಲಮಿತಿ, ಬೀಜಗಣಿತ, ಸ್ಥಿತಿ ವಿಜ್ಞಾನ, ಗತಿ ವಿಜ್ಞಾನ ಮುಂತಾದ ವೈಜ್ಞಾನಿಕ ಅಂಶಗಳು ಇಂದಿಗೂ ಪ್ರಸ್ತುತ ಎನ್ನುವುದು ಈ ಲೇಖನದಲ್ಲಿ ಸ್ಪಷ್ಟೀಕರಿಸಲಾಗಿದೆ.

**ಸಂಸ್ಕೃತವನ್ನು ಕೊಂಡಾಡುವವರು:-** ಅಸ್ಸಾಮಿನ ಗೌಹತಿಯ ಪ್ರಿನ್ಸಿಪಾಲ್ ಜಿ. ಎಸ್.ಬೋರಾ, ರಾಜೇಂದ್ರಪ್ರಸಾದರ ಅಭಿಪ್ರಾಯ, ಬಂಗಾಲದ ಹರೇಂದ್ರನಾಥ ಚೌಧರಿ ಅವರ ಅಭಿಪ್ರಾಯ, ಮದರಾಸಿನ ಸಂತಾನಂ ಅವರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಈ ಲೇಖನ ಬೆಳಕು ಚೆಲ್ಲುತ್ತದೆ.

**ಸಂಸ್ಕೃತವೊಂದು ವಿಶ್ವಶಕ್ತಿ:-** ಸಂಸ್ಕೃತ ಭಾಷೆಯ ಒಂದೊಂದು ಮಾತೂ ಮಹಾಮಂತ್ರವು. ಸಂಸ್ಕೃತ ಶಬ್ದಗಳನ್ನು ಎಡಬಿಡದೆ ಜಪಿಸಿ, ಭಾಷಾ ವೈಶಾಲ್ಯವನ್ನು ತಿಳಿಸಿಕೊಡಿ, ವಿಶ್ವಶಕ್ತಿ ಸಂಪಾದಿಸಿಕೊಂಡು ನಿರ್ಭೀತಿಯಿಂದ ಆನಂದದಿಂದ ಬಾಳಿರಿ ಎಂಬ ಸಂದೇಶವನ್ನು ಕಾಕಾಸಾಹೇಬ್ ಕಾಲೇಲ್‌ಕರ್ ಅವರ ರೇಡಿಯೊ ಭಾಷಣದ ಹಿನ್ನೆಲೆಯಲ್ಲಿ ಈ ಲೇಖನ ಮನದಟ್ಟು ಮಾಡುತ್ತದೆ.

**ಸಂಸ್ಕೃತ ಭಾಷೆ :-** ಸಂಸ್ಕೃತ ಗ್ರಂಥಗಳೊಂದಿಗೆ ಕಾಣುವ ಭಾವದ ವೈವಿಧ್ಯವು, ಬೆಳೆಯುವ ಸಾಮರ್ಥ್ಯವು, ಸಂಸ್ಕೃತ ಗ್ರಂಥಕರ್ತರ ವಿಚಾರದ ವಿಶಾಲತೆ, ಸಂಸ್ಕೃತ ಭಾಷೆಯ ವಿಚಾರಗಳು ಇಹಪರಗಳೆರಡಕ್ಕೂ ದಾರಿತೋರಿಸುವ ವ್ಯಾಪಕತೆಯಿಂದಲೇ ಅದರ ಮಹತ್ವ ಎಂಬ ವಿಷಯ ಇಲ್ಲಿ ಪ್ರತಿಪಾದಿತವಾಗಿದೆ.

**ಸಂಸ್ಕೃತ ಸರಕಾರಿ ಭಾಷೆಯಾದೀತೇ? :-** ಹಿಂದೆ ಹೇಗೆ ಸಂಸ್ಕೃತ ಸರಕಾರೀ ಭಾಷೆಯಾಗಿತ್ತೆಂದೂ ಈಗಲೂ ಅದು ಅದೇ ಸ್ಥಾನದಲ್ಲಿ ಮುಂದುವರೆಯಲು ಯಾವ ಬಾಧಕವೂ ಇಲ್ಲವೆಂಬುದೇ ಈ ಲೇಖನದ ಸಾರ.

**ಅಖಿಲ ಭಾರತ ಸಂಸ್ಕೃತ ಪ್ರಚಾರ ಸಭಾ:-** ಕಾಲಡಿಯಲ್ಲಿ 15-5-59ರಲ್ಲಿ

ನಡೆದ ಅಖಿಲ ಭಾರತ ಸಮ್ಮೇಳನದ ಸಾರ ಈ ಕೆಲವು ಅಂಶಗಳಲ್ಲಿ ಮಂಡಿಸಲಾಗಿದೆ. (1) ಸಂಸ್ಕೃತ ಪ್ರಧಾನ ಭಾಷೆಗಳಲ್ಲಿ ಅಗ್ರಸ್ಥಾನದಲ್ಲಿರುವ ಭಾಷೆ. (2) ಸಂಸ್ಕೃತ ಭಾಷೆಗಳಿಗೆಲ್ಲಾ ಮಾತೃಸ್ಥಾನ. (3) ಸಂಸ್ಕೃತ ಭರತಖಂಡದ ಭಾಷೆಗಳಲ್ಲೆಲ್ಲಾ ಹಾಸುಹೊಕ್ಕಾಗಿದೆ. (4) ಸಂಸ್ಕೃತಕ್ಕೆ ಸರಕಾರಿಯ ಭಾಷೆ ಅಡ್ಡ ಬರಬಾರದು (6) ಸಂಸ್ಕೃತ ಕಲಿಯಲು ಕಷ್ಟ ಎಂಬ ಭ್ರಾಂತಿ ನಿವಾರಣೆಯಾಗಬೇಕು. (7) ವಾರಪತ್ರಿಕೆ ಮಾಸಪತ್ರಿಕೆ, ತ್ರೈಮಾಸಿಕ ಪತ್ರಿಕೆಯನ್ನು ಹೊರಡಿಸಿ ದೇವನಾಗರೀ ಲಿಪಿಯನ್ನು ಪ್ರಚಾರಗೊಳಿಸುವುದು. (8) ವಿದೇಶದಲ್ಲಿ ಸಂಸ್ಕೃತ ಪ್ರಚಾರಕ್ಕಾಗಿ ಸಂಸ್ಕೃತ ಇಂಗ್ಲೀಷ್ ಪತ್ರಿಕೆಗಳನ್ನು ಹೊರಡಿಸುವುದು.

**ಭಾಷೆ ನನಗೆ ಹೇಗೆ ಹೊಸದಾಯಿತು:-** ಈ ಲೇಖನದಲ್ಲಿ ಶಂಕರಾಚಾರ್ಯರ ಗುರ್ವಷ್ಟಕದಹಿನ್ನೆಲೆಯಲ್ಲಿ ಸಂಸ್ಕೃತ ಕಲಿಯಲು ಕಷ್ಟವಲ್ಲ ಎಂಬುದು ಪ್ರತಿಪಾದಿತವಾಗಿದೆ.

**ಸಂಸ್ಕೃತದ ಹಿರಿಮೆ:-** ಭಾರತದ ಹಿಂದಿನ ಸಂಸ್ಕೃತಿಗೂ ಇಂದಿನ ಸಂಸ್ಕೃತಿಗೂ ಸಂಬಂಧ ತೋರಿಸುವ ಭಾಷೆ ಸಂಸ್ಕೃತವೊಂದು ಎಂದು ಈ ಲೇಖನದಲ್ಲಿ ಮನದಟ್ಟು ಮಾಡಲಾಗಿದೆ.

**ಅಮರವಾಣಿ:-** ಸಂಸ್ಕೃತದಿಂದಲೇ ಮಾಗಽ, ಅರ್ಧಮಾಗದಿ, ಪಾಳಿ, ಪಾಕೃತ ಹುಟ್ಟಿದವು. ಅದರ ರೂಪಾಂತರವೇ ಹಿಂದಿ, ಬಂಗಾಳೀ, ಗುಜರಾತೀ, ಮಹಾರಾಷ್ಟ್ರೀ. ಸಂಸ್ಕೃತವೇ ನಮ್ಮ ಜೀವನದ ಗಾಳಿ ಎಂದು ಇಲ್ಲಿ ಎಲ್ಲಾ ಭಾಷೆಗಳಿಗೂ ಸಂಸ್ಕೃತವೇ ಬುಡ ಎಂದು ಪ್ರತಿಪಾದಿಸಲಾಗಿದೆ.

**ಸಂಸ್ಕೃತ ಭಾಷೆಗೇ ಮೀಸಲಾದ ಲೇಖನಗಳು:-** ಸಂಸ್ಕೃತ ಭಾಷೆ ಉರ್ದು ವಿಗೂ ಮೂಲ, ಸಂಸ್ಕೃತಕ್ಕೂ ಟರ್ಕಿ ಭಾಷೆಗೂ ಇರುವ ನಿಕಟ ಸಂದರ್ಭ, ಸಂಸ್ಕೃತ ಬೌದ್ಧರಿಗೂ ಧಾರ್ಮಿಕ ಭಾಷೆ, ಸಂಸ್ಕೃತ ಎಲ್ಲರ ಭಾಷೆಯಾಯಿತೆಂದರೆ ಸಾಮಾಜಿಕ, ಧಾರ್ಮಿಕ ಐಕ್ಯತೆಗಳು ತಾವಾಗಿಯೇ ಬಂದು ಸೇರಿಕೊಳ್ಳುವುದು, ಸಂಸ್ಕೃತದಲ್ಲಿ ವಿಶ್ವಧರ್ಮವಿದೆ. ಸಂಸ್ಕೃತ ಹೇಗೆ ವೈಯಕ್ತಿಕವಾಗಿರದೆ, ಸಾರ್ವತ್ರಿಕ ಎಂಬ ಭಾವನೆಯನ್ನು 1962ರಲ್ಲಿ ನಡೆದ ವಿಶ್ವಪರಿಷತ್ತಿನ ರಾಧಾಕೃಷ್ಣನ್ ಅವರ ಮಾತನ್ನು ಉಲ್ಲೇಖಿಸಿರುವುದು ಗಮನಾರ್ಹ. ಶ್ರೀಮಂತರು ಸಂಸ್ಕೃತ ಪಾಠಶಾಲೆಗಳನ್ನು ತೆರೆಯಬೇಕೆಂಬ ಸೂಚನೆಯೂ ಇಲ್ಲಿದೆ.

ಸಂಸ್ಕೃತ ಪದಗಳು ಎಷ್ಟು ಹಾಸುಹೊಕ್ಕಾಗಿ ಕನ್ನಡದೊಂದಿಗೂ ಬೆರತಿದೆಯೆನ್ನುವುದಕ್ಕೆ ಬೇರೆ ಉದಾಹರಣೆಗಳನ್ನು ಇಲ್ಲಿ ನೀಡಲಾಗಿದೆ. ನವೀನ ಸಂಸ್ಕೃತ ವಿಧಾನ ಸಮಿತಿಯ ಕರ್ತವ್ಯಗಳು ಸಂಸ್ಕೃತ ಸ್ತುತ್ಯಾಭಾಸ ಎಂಬ ಲೇಖನದಲ್ಲಿ ಸಂಸ್ಕೃತ ಮೃತ ಭಾಷೆ ಅಲ್ಲ ಎಂಬ ವಿಷಯ ದೃಢೀಕರಿಸಲಾಗಿದೆ. ಸಂಸ್ಕೃತದಲ್ಲಿ ಭಕ್ತಿ ಲೇಖನದಲ್ಲಿ ಹಿಂದೀ ಪ್ರಚಾರಸಭೆಯಂತೆಯೇ ಸಂಸ್ಕೃತ ಪ್ರಚಾರಿಣೀ ಸಭಾ ಮಾಡಬೇಕೆಂದು ಅಭಿಪ್ರಾಯ ವ್ಯಕ್ತಗೊಳಿಸಲಾಗಿದೆ.

ಸಂಸ್ಕೃತ, ಸದಾಚಾರ, ಸತ್ಸಂಗ, ಸರ್ವಕರ್ಮ ಫಲತ್ಯಾಗ, ಸತ್ಯಫಿ, ಸಹಸ್ರನಾಮ ಎಂಬ ಆರು 'ಸ'ಕಾರಾದಿಗಳನ್ನು ಮನಸ್ಸಿನಲ್ಲಿಟ್ಟುಕೊಂಡರೆ ಇಹವೂ, ಪರವೂ ಸಿದ್ಧವಾಗುವುದೆಂದು 'ಭಾಷೆಗಳಗದ್ದಲ' ಲೇಖನದಲ್ಲಿ ಆಂಗ್ಲಪದಗಳಿಗೆ ಸಂವಾದಿಯಾಗ ಬಹುದಾದ ಸಂಸ್ಕೃತ ಪದಗಳನ್ನು ಇಲ್ಲಿ ನೀಡಲಾಗಿದೆ. ಉದಾ:-Accusation ಅಭಿಯಾನ, adhoc-ತದರ್ಥ, adoption - ದತ್ತಕಗ್ರಹಣ, advice- ಮಂತ್ರಣಾ ಇತ್ಯಾದಿ. ದೇಶ ಭಾಷೆಗಳಿಗೆ ಸಂಸ್ಕೃತದ ನೆರವು ಲೇಖನದಲ್ಲಿ ಹಿಂದಿಯಲ್ಲಿ ಬಳಸಲ್ಪಟ್ಟಿರುವ ಸಂಸ್ಕೃತ ಪದಗಳ ಪಟ್ಟಿಯನ್ನೇ ನೀಡಲಾಗಿದೆ. ಕನ್ನಡ ಕಾವ್ಯಗಳಲ್ಲಿ ಸಂಸ್ಕೃತ ಲೇಖನದಲ್ಲಿ ಕನ್ನಡದ ಜಗನ್ನಾಥವಿಜಯ, ಗಿರಿಜಾಕಲ್ಯಾಣ ಮೊದಲಾದ ಕಾವ್ಯಗಳಿಂದ ಪದ್ಯ ತೆಗೆದು ಅದು ಎಷ್ಟು ಸಂಸ್ಕೃತಭೂಯಿಷ್ಠ ಎಂಬುದನ್ನು ತೋರಿಸಲಾಗಿದೆ. "ಈಗಿನ ಕನ್ನಡವೂ, ಸಂಸ್ಕೃತವೂ" ಲೇಖನದಲ್ಲಿ ನಡೆಗನ್ನಡ ವಾಕ್ಯಗಳಲ್ಲಿ ಬಳಸಿರುವ ಸಂಸ್ಕೃತ ಶಬ್ದಗಳ ಗತಿಯನ್ನು ಸೋದಾಹರಣಸಹಿತವಾಗಿ ನೀಡಲಾಗಿದೆ. ಸಂಸ್ಕೃತವೋ ಕನ್ನಡವೋ ಲೇಖನದಲ್ಲಿ ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಈ ಮೂರು ಬಗೆಯ ಕನ್ನಡಗಳಲ್ಲೂ ಸಂಸ್ಕೃತದ ಬೆರಕೆ ಅನಿವಾರ್ಯ ಎಂದು ತೋರಿಸಲಾಗಿದೆ. "ಸಂಸ್ಕೃತದೊಡನೆ ಉಳಿಯಿರಿ, ಇಲ್ಲವೆ ಅಳಿಯಿರಿ" ಲೇಖನದಲ್ಲಿ ಸಂಸ್ಕೃತದ ಹಿನ್ನೆಲೆಯಿಲ್ಲದೆ ಮಿಕ್ಕ ಪ್ರಾಂತೀಯ ಭಾಷೆಗಳು ಉಳಿಯಲಾರವು ಎಂಬ ಸಂದೇಶವಿದೆ. "ಸಂಸ್ಕೃತವೂ ಬ್ರಾಹ್ಮಣರೂ" ಲೇಖನದಲ್ಲಿ ಬ್ರಾಹ್ಮಣರು ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಿ ಜನಸಾಮಾನ್ಯಕ್ಕೆ ಆ ಭಾಷೆಯನ್ನು ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಬೇಕೆಂದು ಕರೆ ನೀಡಲಾಗಿದೆ. ಸಂಸ್ಕೃತ ಭಾಷೆಯಲ್ಲಿ ಸಂಭಾಷಣೆ ಮಾಡುವ ಪದ್ಧತಿಯನ್ನು ಆಚರಣೆಗೆ ತರಬೇಕು. ಸಂಸ್ಕೃತಕ್ಕೆ ಸ್ಥಳವೆಲ್ಲಿ ? ಲೇಖನದಲ್ಲಿ ಲಾಲ್‌ಬಹದ್ದೂರ್‌ಶಾಸ್ತ್ರೀಯವರು ಹಿಂದೂ ಬಾಲಕರಿಗೆ ಸಂಸ್ಕೃತ ಬರುವುದಿಲ್ಲವೆಂದರೆ ಹಿಂದೂ ಧರ್ಮಕ್ಕೆ ಕಳಂಕ ಎಂದು ಹೇಳಿದ್ದನ್ನು ಉದ್ಧರಿಸಿ ಭಾರತೀಯ ಸಂಸ್ಕೃತಿಯ ಜೀವಾಳ ಸಂಸ್ಕೃತವನ್ನು ತಳ್ಳಿಹಾಕಬೇಡಿರಿ. ಹಿಂದಿಗೂ ಕಸಿ ಮಾಡಿ ಸಂಸ್ಕೃತ ಸೇರಿಸಿಕೊಂಡು ಭಾರತದೇಶದ ಸಂಸ್ಕೃತಿಯ ಉಜ್ಜೀವನಗೊಳಿಸಿ ಎಂಬ ಸಂದೇಶ ನೀಡಲಾಗಿದೆ. ಸಂಸ್ಕೃತ ಭಾಷೆಯ ಪ್ರಚಾರ ಲೇಖನದಲ್ಲಿ ಎಲ್ಲಾ ಬಗೆಯ ಜನರನ್ನು ಒಟ್ಟುಗೂಡಿಸಿ ವಿದ್ಯಾಭ್ಯಾಸ ಮಾಡಿಸುವ ಪದ್ಧತಿಯಿರಬೇಕೆಂದು ಧರ್ಮಶಾಸ್ತ್ರದ ಅಭ್ಯಾಸ, ಅಧ್ಯಾತ್ಮ ವಿದ್ಯೆಯ ವಿವಿಧ ಜ್ಞಾನ ಎಲ್ಲರಲ್ಲೂ ಮೂಡಬೇಕೆಂದು ತಿಳಿಸಲಾಗಿದೆ.

**ಭಾಗ- 2 ವಿಠ್ಠಲಶಾಸ್ತ್ರಿಗಳ ಲೇಖನಗಳು:-**

ಸಂಸ್ಕೃತ ಭಾಷೆಯಲ್ಲೆ ಬೌದ್ಧಫಿ, ಜೈನ, ವೀರಶೈವ ಮತಗಳಿಗೆ ಸಂಬಂಧಪಟ್ಟ ಗ್ರಂಥಗಳಿವೆಯೆದೂ ಪ್ರತಿಪಾದಿಸಲಾಗಿದೆ. ಸಂಸ್ಕೃತವೇಕೆ ಖಿಲವಾಗುತ್ತಿದೆ? ಎಂಬ ಲೇಖನದಲ್ಲಿ ಮಹಮ್ಮದೀಯರ ಆಕ್ರಮಣದಿಂದ ಪರ್ಶಿಯನ್, ಇಂಗ್ಲೀಷಿನವರ ಆಕ್ರಮಣದಿಂದ ಆಂಗ್ಲ, ಮೆಕಾಲೆ ವರದಿ, ಸಂಸ್ಕೃತದ ಬಗ್ಗೆ ಜನಸಾಮಾನ್ಯರ ಮೌಢ್ಯಫಿ,

ಅಸಡ್ಡೆಯೇ, ಕಾರಣವೆಂದು ವರ್ಣಿಸಲಾಗಿದೆ. ನಲಂದ ವಿಶ್ವವಿದ್ಯಾಲಯ ಲೇಖನದಲ್ಲಿ ಅಂದಿನ ನಲಂದಾದ ಪ್ರಾಮುಖ್ಯತೆ, ಜಪಾನ್, ಚೀನಾ, ಕೋರಿಯಾ, ಮಂಗೋಲಿಯಾ ಪ್ರಾಂತಗಳಿಂದ ಬಂದು ಓದುತ್ತಿದ್ದ ವಿದ್ಯಾರ್ಥಿಗಳ ವರದಿ ಹ್ಯೂಯನ್‌ಸ್ಯಾಂಗ್ ಇತ್ಸಿಂಗರ ವರದಿಯ ಆಧಾರದ ಮೇಲೆ ಮಂಡಿತವಾಗಿದೆ. ಶಾಂತಿ ಸಂದೇಶದಿಂದ ಪರದೇಶದ ವಿದ್ವಾಂಸರ ಬುದ್ಧಿಯನ್ನು ಸೂರೆಗೈದ ಕೀರ್ತಿ ನಲಂದಾ ವಿಶ್ವವಿದ್ಯಾಲಯಕ್ಕಿದೆ. ಸಂಸ್ಕೃತ ಸರ್ವರ ಭಾಷೆಯಾದೀತು ಎಂಬ ಲೇಖನದಲ್ಲಿ ಸಂಸ್ಕೃತ ಬ್ರಾಹ್ಮಣರ ಭಾಷೆ, ಕಲಿಯುವುದಕ್ಕೆ ಕಷ್ಟವಾದಭಾಷೆ ಬ್ರಾಹ್ಮಣರಭಾಷೆ ಇತ್ಯಾದಿ ಪೂರ್ವಪಕ್ಷಗಳನ್ನೆತ್ತಿ ಅದಕ್ಕೆ ಯೋಗ್ಯ ಸಮಾಧಾನ ನೀಡಿ ಸಂಸ್ಕೃತ ಸರ್ವರ ಭಾಷೆಯೆಂದು ಪ್ರತಿಪಾದಿಸಲಾಗಿದೆ. ಸಂಸ್ಕೃತ ಭಾಷೆಯ ಸೇವೆ ಲೇಖನದಲ್ಲಿ ನೆಹರೂರವರ ಅಭಿಪ್ರಾಯ ದಾಖಲಿಸಲಾಗಿದೆ. ಭರತಖಂಡದಲ್ಲಿರುವ ಮಹಾಭಾಗ್ಯನಿಧಿ ಯಾವುದು, ಈ ದೇಶದವರ ಅತ್ಯಂತ ಉತ್ತಮವಾದ ಆಸ್ತಿ ಯಾವುದೆಂದು ಯಾರಾದರೂ ಕೇಳಿದರೆ ನಾವು ಸ್ವಲ್ಪವೂ ಹಿಂದು ಮುಂದು ನೋಡದೆ ಕೊಡುವ ಉತ್ತರವೆಂದರೆ ಸಂಸ್ಕೃತ ಭಾಷೆಯೇ. ಸಂಸ್ಕೃತದ ಪ್ರಚಾರ ಲೇಖನದಲ್ಲಿ ವ್ಯಾಕರಣದ ಕಷ್ಟಗಳನ್ನು ಮುಂದಕ್ಕೆ ತರದೆ ಭಾಷೆಯನ್ನೆ ಪ್ರಧಾನವಾಗಿ ಕಲಿಸುವಂತೆ ಮಾಡಬೇಕೆಂಬ ಸಲಹೆ ನೀಡಲಾಗಿದೆ. ಸಂಸ್ಕೃತಕ್ಕೆ ತಕ್ಕ ಸ್ಥಾನಕೊಡಿ ಲೇಖನದಲ್ಲಿ ಸಂಸ್ಕೃತ ತಜ್ಞರ ಸಮಿತಿಯೊಂದನ್ನು ಏರ್ಪಡಿಸಿ ರಾಜನೀತಿಗೆ ಸಂಬಂಧಪಟ್ಟ ಸಂಸ್ಕೃತ ಪಾರಿಭಾಷಿಕಶಬ್ದಗಳನ್ನು ಸಂಕಲನ ಮಾಡಬೇಕೆಂದು ಸೂಚಿಸಲಾಗಿದೆ. ಹಾಗೆಯೇ ಸಂಸ್ಕೃತದಲ್ಲಿ ಅಡಗಿರುವ ಸಂಸ್ಕೃತಿ ಜನರ ಕಣ್ಣು ಮುಂದೆ ನಿಂತಿರುವಂತೆ ಅಖಿಲ ಭಾರತೀಯ ದೈನಂದಿನ ಪತ್ರಿಕೆ ನಿರ್ಮಾಣವಾಗಬೇಕೆಂದೂ ಸೂಚಿಸಲಾಗಿದೆ. ನವಗ್ರಂಥಗಳ ನಿರ್ಮಾಣಕ್ಕೆ ವಿದ್ವಾಂಸರಿಗೆ ಪ್ರೋತ್ಸಾಹ ದೊರೆಯಲೆಂದು "ಭಾರತ ಸಂಸ್ಕೃತಿಯೂ ಸಂಸ್ಕೃತವೂ" ಲೇಖನದಲ್ಲಿ ಸಂಸ್ಕೃತ ಭಾಷೆಯಲ್ಲಿ ಹುದುಗಿರುವ ವೈದ್ಯ, ಸಂಗೀತ, ಜ್ಯೋತಿಷ ಪರಿಚಯವನ್ನು ಜನಸಾಮಾನ್ಯರಿಗೆ ತಲುಪುವಂತಾಗಬೇಕೆಂಬ ಸೂಚನೆಯಿದೆ. ಕರ್ಮ, ಉಪಾಸನಾ, ಜ್ಞಾನಕ್ಕೆ ಸಂಬಂಧಿಸಿದಂತೆ ಚಿಕ್ಕ ಚಿಕ್ಕ ಗ್ರಂಥಗಳನ್ನು ಬರೆಯುವ ಅದನ್ನು ಕನ್ನಡಕ್ಕೆ ಅನುವಾದ ಮಾಡಿಸುವುದು ಮುಖ್ಯ ಕೆಲಸ. ಸಂಸ್ಕೃತಕ್ಕೆ ಸ್ಥಾನವುಂಟೇ ಲೇಖನದಲ್ಲಿ ಪ್ರಪಂಚದಲ್ಲಿ ತಲೆಯೆತ್ತಿರುವ ಚಾರ್ವಾಕ ವಾದಕ್ಕೆ ದಿವ್ಯೌಷಧ ಸಂಸ್ಕೃತದಿಂದಲೇ ಎಂದು ವಿಶದೀಕರಿಸಲಾಗಿದೆ.

**ಭಾಗ- 3. ಸಂಸ್ಕೃತವೂ ಹಿಂದಿಯೂ - ಟಿ. ಕೆ. ಕೃಷ್ಣಸ್ವಾಮಿ ಅಯ್ಯರ್:-**

ಶಾಲೆಗಳಲ್ಲಿ ಸಂಸ್ಕೃತವೇ ತೃತೀಯ ಭಾಷೆಯಾಗಬೇಕೆಂದೂ **U.N.O.**ದಂತಹ ಸಂಸ್ಥೆಗಳಿಗೆ ಸಂಸ್ಕೃತ ಕಿವಿಗೆ ಬೀಳುವಂತೆ ಆಗಬೇಕೆಂದೂ ಇಲ್ಲಿ ತಿಳಿಸಲಾಗಿದೆ. ಮಕ್ಕಳಿಗೆ ಹಿಂದೀ ಸೀಸೆಯ ಹಾಲುಕುಡಿಸುವುದನ್ನು ಬಿಟ್ಟು ಭಾರತಾಂಬೆಯ ಸಂಸ್ಕೃತ ಸ್ತನ್ಯಪಾನ ಮಾಡಿಸೋಣ ಎಂಬುದೇ ಈ ಲೇಖನದ ಆಶಯ.

**ಸಂಸ್ಕೃತ ಸಾಹಿತ್ಯದಲ್ಲಿ ಸಾರ್ವಲೌಕಿಕ ದೃಷ್ಟಿ:- ಎನ್. ರಂಗನಾಥ ಶರ್ಮ :-**ಸಂಸ್ಕೃತ ಬ್ರಾಹ್ಮಣರ ಸ್ವತ್ತುಷಿ, ಪುರೋಹಿತರ ಭಾಷೆ ಎಂಬ ಆರೋಪಕ್ಕೆ ಇಲ್ಲಿ ಶರ್ಮರು ಉತ್ತರಿಸಿದ್ದಾರೆ. ವಿದುರನು ಶೂದ್ರನಾಗಿದ್ದರೂ ಧೃತರಾಷ್ಟ್ರನಿಗೆ ನೀತಿಬೋಧಿಸಿದ. ಜೈನ, ಬೌದ್ಧ ಗ್ರಂಥಗಳು ಸಂಸ್ಕೃತದಲ್ಲಿ ಬಂದದ್ದು ಹೇಗೆ? ಅಲ್ ಬರೂನಿ, ದಾರಾಶಿಕೋ ಮುಂತಾದವರು ಮಾಡಿರುವ ಸೇವೆ ಮರೆಯುವಂತಿಲ್ಲಷಿ. ಸಂಸ್ಕೃತದಲ್ಲಿ ಕೆತ್ತನೆ, ಬೇಸಾಯ, ಧಾತುವಾದದ ಬಗ್ಗೆಯೂ ಗ್ರಂಥಗಳಿವೆ.

**ಸರ್ವ ಭಾಷಾ ಸರಸ್ವತೀ - ಹಾ.ಮಾ.ನಾ. ಲೇಖನದಿಂದ ಆಯ್ದ ಭಾಗ :-** ಭಾಷೆ ಇಲ್ಲದೆ ಬದುಕಿಲ್ಲಷಿ. ಸಂವಹನಗುಣವೇ ಭಾಷೆಯ ಪ್ರಮುಖ ಲಕ್ಷಣ. ಸರಸ್ವತೀ ಸಕಲ ಭಾಷಾತ್ಮಕಳು. ಯಾವುದೇ ಒಂದು ಭಾಷೆಗೆ ಮೀಸಲಾದವಳಲ್ಲ" "ಅಮರಭಾರತೀ" ಲೇಖನದಲ್ಲಿ ಹೇಗೆ ಭಾಷಾ ವಿಕಾಸಕ್ಕೆ ದೇವಭಾಷಾ ಸಹಾಯ ಅವಶ್ಯವಾಗಿ ಬೇಕು ಎಂಬುದು ಸಂಸ್ಕೃತದ ಬಗ್ಗೆ ಹಾ.ಮಾ. ನಾಯಕರು, ಸ್ವಪ್ನದಲ್ಲಿ ಕಂಡ ವಿಚಾರ. 'ಸಂಸ್ಕೃತಕ್ಕೆ ಆಘಾತ' ಲೇಖನದಲ್ಲಿ ಬರವಣಿಗೆಯಲ್ಲಿ ಬಳಸುವ ಕನ್ನಡ ಭಾಷೆಯಲ್ಲಿ ಹೆಚ್ಚು ಹೆಚ್ಚು ಸಂಸ್ಕೃತ ಶಬ್ದಗಳಿದೆಯೆಂದು ತೋರಿಸಲಾಗಿದೆ. ಪರಿಶಿಷ್ಟ ಶಾಸನ, ಅಧ್ಯಕ್ಷಷಿ, ಸಂಪ್ರದಾಯ, ಇತ್ಯಾದಿ. ಸಂಸ್ಕೃತದ "ಸಂಸ್ತುತಿ" ಲೇಖನದಲ್ಲಿ FREDRICH HEALER ಅವರ ಸಂಸ್ಕೃತಾಭಿಮಾನ ಅಭಿವ್ಯಕ್ತಿಗೊಂಡಿದೆ:- "EVERY SANSKRIT VERSE IS HEAVENLY MUSIC FOR MY EARS. I LOVE SANSKRIT AS THE MOST PERFECT LANGUAGE OF THE WORLD."

ಒಟ್ಟಿನಲ್ಲಿ ಹೇಳುವುದಾದರೆ ಈ ಕಿರುಹೊತ್ತಿಗೆಯಲ್ಲಿ ಪ್ರಕಟವಾಗುತ್ತಿರುವ ಎಲ್ಲಾ ಲೇಖನಗಳೂ ಒಂದಕ್ಕೊಂದು ಪೂರಕವಾಗಿದ್ದುಷಿ, ಸಂಸ್ಕೃತ- ಸಂಸ್ಕೃತಿ ಎಂಬ ವಿಷಯಕ್ಕೆ ಬದ್ಧವಾಗಿದ್ದು ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳ 39 ಲೇಖನಗಳೂ, ಜ್ಞಾನಾನಂದೇಂದ್ರ ಸರಸ್ವತೀಸ್ವಾಮಿಗಳ 9 ಲೇಖನಗಳೂ, ಇತರೆ ವಿದ್ವಾಂಸರಗಳ ಲೇಖನಗಳಿಂದಲೂ ಕೂಡಿದ್ದು ವೇದಗಳಿಂದ ಹಿಡಿದು ಕಂಪ್ಯೂಟರ್ ಯುಗಕ್ಕೆ ಸಂಸ್ಕೃತ ಎಂಬ ವಿಶಾಲವಾದ ವ್ಯಾಪ್ತಿಯಿಂದ ಕೂಡಿದ್ದು ಇಂದಿನ ಸಂಸ್ಕೃತಜ್ಞರಿಗೆ, ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ, ಸಂಸ್ಕೃತಾಸಕ್ತರಿಗೆ ದಾರಿದೀವಿಗೆಯಂತಿದ್ದು ಅವರು ಯಾವ ದಿಸೆಯಲ್ಲಿ ಮುನ್ನಡೆದರೆ ಶ್ರೇಯಸ್ಕರವೆಂಬ ಸಂದೇಶವನ್ನು ನೀಡುವಂತಿದೆ. ಈ ಲೇಖನಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸಲು ಮುಂದಾಗಿರುವ ಅಧ್ಯಾತ್ಮಪ್ರಕಾಶಕಾರ್ಯಾಲಯದ ಪದಾಧಿಕಾರಿಗಳ ಪ್ರಯತ್ನ ಸ್ತುತ್ಯಾರ್ಹ ಹಾಗೂ ಅಭಿನಂದನಾರ್ಹ. ಈ ಕೃತಿಯ ಪ್ರಯೋಜನ ಎಲ್ಲರಿಗೂ ಲಭಿಸಲೆಂದು ಮನಸಾರೆ ಆನಿಸುತ್ತೇನೆ.

**ಬೆಂಗಳೂರು** **- ಡಾ|| ಎಸ್. ರಂಗನಾಥ್**

**3-11-2015**

# ನುಡಿ ನಮನ

ಪ್ರಪಂಚದ ಪ್ರಾಚೀನತಮ ವಾಙ್ಮಯವಾದ ವೇದಗಳಿಂದ ಆರಂಭಗೊಂಡು ಇಂದಿನ ಸಾಹಿತ್ಯದವರೆಗೂ ಅನುಸ್ಯೂತವಾಗಿ ಹರಿದು ಬರುತ್ತಿರುವ ಸಂಸ್ಕೃತಭಾಷೆಯ ಬಗೆಗೆ ಅನೇಕರಿಗೆ ಗೌರವ, ಹಲವರಿಗೆ ಅದರಲ್ಲಿ ಉತ್ಕಟವಾದ ಪ್ರೀತಿ, ಕೆಲವರಿಗೆ ಅನಾದರ. ಅದರ ಅಧ್ಯಯನವನ್ನೇ ಮಾಡದೆ, ಅದರಲ್ಲಿ ಏನಿದೆಯೆಂದು ತಿಳಿಯದೆ ಅದನ್ನು ತಿರಸ್ಕರಿಸುವ ಮಹಾನುಭಾವರೂ ನಮ್ಮ ದೇಶದಲ್ಲಿದ್ದಾರೆ. ಸಂಸ್ಕೃತ ಸಾಹಿತ್ಯದಲ್ಲಿರುವುದೆಲ್ಲ ಅರ್ಥರಹಿತ ಮಂತ್ರಗಳು ಮತ್ತು ಹುಚ್ಚು ಕಲ್ಪನೆಯ ಪುರಾಣಗಳು ಮಾತ್ರ ಎಂದು ನಂಬಿರುವ ಜನರೂ ಇಲ್ಲಿದ್ದಾರೆ. ಸಂಸ್ಕೃತ ಅದ್ಭುತವಾದ ಭಾಷೆ, ಆದರೆ ವ್ಯಾಕರಣಜಟಿಲವಾದುದರಿಂದ ಅದು ನಮಗೆ ಎಟುಕುವದಲ್ಲ ಎಂದು ತಾವಾಗಿ ನಿರಾಶರಾದವರನ್ನೂ ನಾವು ಕಂಡಿದ್ದೇವೆ.

ಭಾರತದೇಶದಲ್ಲಿ ಸಾವಿರಾರು ವರ್ಷಗಳ ಕಾಲ ಋಷಿಗಳೂ ಕವಿಗಳೂ ವಿಜ್ಞಾನಿಗಳೂ ದಾರ್ಶನಿಕರೂ, ಮಾಡಿದ ಚಿಂತನೆಗಳ ಸಾರವು ಇರುವುದು ಸಂಸ್ಕೃತ ಗ್ರಂಥಗಳಲ್ಲಿಯೆ. ವೇದ, ಉಪನಿಷತ್ತುಗಳು, ಇತಿಹಾಸ, ಪುರಾಣ, ನಾಟ್ಯಶಾಸ್ತ್ರವು, ವೈದ್ಯಶಾಸ್ತ್ರವು, ಸಂಗೀತಶಾಸ್ತ್ರವು, ಖಗೋಳಶಾಸ್ತ್ರವು, ಗಣಿತಶಾಸ್ತ್ರವು, ಕಾವ್ಯ, ನಾಟಕ, ದರ್ಶನ- ಇತ್ಯಾದಿ ಅಸಂಖ್ಯ ಶಾಖೆಗಳನ್ನುಳ್ಳ ವಾಙ್ಮಯವೃಕ್ಷ ಹುಟ್ಟಿ ಬೆಳೆದದ್ದು ಈ ಭಾಷೆಯಲ್ಲಿ. ಪ್ರಪಂಚದ ಜ್ಞಾನನಿಧಿಗೆ ಭಾರತದ ಕೊಡುಗೆ ಏನೆಂದು ಯಾರಾದರೂ ಕೇಳಿದರೆ ಆ ಪ್ರಶ್ನೆಗೆ ಉತ್ತರವನ್ನು ಕೊಡಲು ಎಲ್ಲರೂ ಸಂಸ್ಕೃತದ ಕಡೆಗೆ ಗಮನವನ್ನು ಹರಿಸಬೇಕು. ವಾಲ್ಮೀಕಿ, ವ್ಯಾಸ, ಕಾಳಿದಾಸ ಮುಂತಾದ ಸಾಹಿತ್ಯಬ್ರಹ್ಮರ ವಿಷಯವನ್ನು ತಿಳಿಯದವರು ಭಾರತದ ಸಂಸ್ಕೃತಿಯ ಬಗೆಗೆ ಏನನ್ನು ತಾನೆ ಹೇಳಬಲ್ಲರು? ಈ ಸತ್ಯವನ್ನರಿತು ಸಂಸ್ಕೃತಸಾಹಿತ್ಯಸಾಗರದಲ್ಲಿ ತಲಸ್ಪರ್ಶಿಯಾದ ಅವಗಾಹನವನ್ನು ಮಾಡಿ ಅದರ ವೈಶಾಲ್ಯವನ್ನೂ ಗಾಂಭೀರ್ಯವನ್ನೂ ಅರಿತು ಅದರಲ್ಲಿ ಸಂಪೂರ್ಣ ಪ್ರಭುತ್ವವನ್ನು ಗಳಿಸಿ, ತಮ್ಮ ಚಿಂತನೆಗಳ ಅಭಿವ್ಯಕ್ತಿಗಾಗಿ ಸಂಸ್ಕೃತವನ್ನೇ ಸಮರ್ಥವಾಗಿ ಬಳಸಿದ ಮಹಾಮಹಿಮರು **ಪೂಜ್ಯ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಮಹಾಸ್ವಾಮಿಗಳು.** ಸಂಸ್ಕೃತಸಾಹಿತ್ಯಕ್ಕೆಯೆ, ಅದರಲ್ಲೂ ಅದ್ವೈತ ದರ್ಶನಕ್ಕೆ ಅವರಷ್ಟು ಕಾಣಿಕೆಯನ್ನು ನೀಡಿದ ಮತ್ತೊಬ್ಬರು ಕಾಣಿಸುವದಿಲ್ಲವು. ಅವರಿಗೆ ಸಂಸ್ಕೃತಭಾಷೆಯಲ್ಲಿ ಅಪಾರವಾದ ವಾತ್ಸಲ್ಯವೂ ಒಲವೂ ಇದ್ದುವು. ಸಾಮಾನ್ಯ ಜನರಿಗೆ, ವಿಶೇಷತಃ ಕನ್ನಡಿಗರಿಗೆ ಸಂಸ್ಕೃತದ ಸೊಬಗನ್ನೂ ಚೆಲುವನ್ನೂ ಗರಿಮೆಯನ್ನೂ ಅದರ ಅಧ್ಯಯನದ ಪ್ರಯೋಜನವನ್ನೂ ತಿಳಿಸಿಕೊಡಲು ಅವರು '**ಅಧ್ಯಾತ್ಮಪ್ರಕಾಶ**'ದಲ್ಲಿ ಹಲವಾರು ಲೇಖನಗಳನ್ನು ಬರೆದರು.

ಅದೇ ಪತ್ರಿಕೆಯಲ್ಲಿ ಕೆಲವು ಲೇಖನಗಳನ್ನು ಬರೆದ ಮತ್ತೊಂದು ಹಿರಿಯಚೇತನ ಪ್ರಾಜ್ಞರಾಗಿದ್ದ ವಿದ್ವಾನ್ ರಂಗನಾಥಶರ್ಮರು, ಅದ್ವೈತವೇದಾಂತ ಪಾರಂಗತರಾಗಿದ್ದ ವಿದ್ವಾನ್ ವಿಠ್ಠಲಶಾಸ್ತ್ರಿಯವರೂ ದೇವಭಾಷೆಯ ಉಪಾಸಕರಾಗಿದ್ದು ಅದರ ಮಹತ್ತ್ವದ ಬಗೆಗೆ ಲೇಖನಗಳನ್ನು ರಚಿಸಿದ್ದಾರೆ. ಇಂಥ ಹಲವರು ಕೀಮಂತರ ಆಲೋಚನಾಂತರಂಗಗಳನ್ನೆಲ್ಲ ಒಂದು ಹೊತ್ತಿಗೆಯ ರೂಪದಲ್ಲಿ ಈಗ ಬೆಳಕಿಗೆ ತರುತ್ತಿರುವುದು ಶ್ಲಾಘ್ಯವಾದ ಕಾರ್ಯ. ಈ ಲೇಖನಗಳು ಮೊದಲು ಪ್ರಕಟವಾಗಿದ್ದು ಇಪ್ಪತ್ತನೆಯ ಶತಮಾನದಲ್ಲಿ. ನಾವೀಗ ಇಪ್ಪತ್ತೊಂದನೆಯ ಶತಮಾನದಲ್ಲಿ ಹದಿನಾಲ್ಕು ವರ್ಷಗಳ ಅವಕಯನ್ನು ಕಳೆದಿದ್ದೇವೆ. ಪ್ರತಿಯೊಂದು ಕ್ಷೇತ್ರದಲ್ಲೂ ಸಾಕಷ್ಟು ಬದಲಾವಣೆಗಳಾಗಿವೆ.

ಭಾರತದೇಶದಲ್ಲಿ ಓದುಬರಹಗಳನ್ನು ಬಲ್ಲವರ ಸಂಖ್ಯೆ ಬೆಳೆದಿದೆ. ಈಚೆಗೆ ಅನೇಕ ಸಂಸ್ಕೃತ ವಿಶ್ವವಿದ್ಯಾನಿಲಯಗಳು ಅಸ್ತಿತ್ವಕ್ಕೆ ಬಂದಿವೆ. ಆದರೂ ಹಿಂದೆ ನಾವು ಕಂಡಿದ್ದ ಅಖಂಡಪಾಂಡಿತ್ಯವನ್ನೂ ಸರಸಕವಿತಾವಿಲಾಸವನ್ನೂ ಇಂದು ಕಾಣುವದು ಕಷ್ಟಷಿ. ಶಾಸ್ತ್ರಪಾಂಡಿತ್ಯದ ಪರಂಪರೆಯನ್ನು ಉಳಿಸಿಕೊಂಡು ಅದಕ್ಕೆ ಆಧುನಿಕ ಜ್ಞಾನದ ಮೆರುಗನ್ನೂ ನೀಡುವುದು ಇಂದಿನ ಅವಶ್ಯಕತೆ. ಹಾಗಾಗಬೇಕಾದರೆ ಸಾಮಾನ್ಯ ಜನರಿಗೂ ಸಂಸ್ಕೃತದ ಅವಶ್ಯಕತೆ ಮನದಟ್ಟಾಗಬೇಕು. ಈ ದಿಕ್ಕಿನಲ್ಲಿ **'ಸಂಸ್ಕೃತವೂ ಸಂಸ್ಕೃತಿಯೂ'** ಎಂಬ ಕಿರುಹೊತ್ತಿಗೆ ಉಪಕಾರಕವಾಗಬಲ್ಲದು ಎಂದು ನನ್ನ ದೃಢವಾದ ನಂಬಿಕೆ. ಸಂಸ್ಕೃತವನ್ನು ತಿಳಿದವರು ಮತ್ತು ತಿಳಿಯದವರು- ಇಬ್ಬರೂ ಈ ಪುಸ್ತಕವನ್ನು ಓದಬೇಕು. ಆಗ ದೇವಭಾಷೆಯ ಬಗೆಗೆ ಇರುವ ತಪ್ಪುಕಲ್ಪನೆಗಳು ದೂರ ಸರಿಯುತ್ತವೆ. ಅದರಿಂದ ನಮಗೂ ದೇಶಕ್ಕೂ ಆಗುವ ಪ್ರಯೋಜನಗಳು ಸ್ಪಷ್ಟವಾಗುತ್ತವೆ.

ಇಂಥ ಪುಸ್ತಕಗಳ ಪ್ರಕಟನಕಾರ್ಯ ಸುಕರವಲ್ಲ. ಕಥೆ, ಕಾದಂಬರಿಗಳನ್ನು ಓದುಗರು ಕೊಂಡು ಓದುತ್ತಾರೆ. ಆದರೆ ವೈಚಾರಿಕ ಗ್ರಂಥಗಳಿಗೆ ಗ್ರಾಹಕರು ವಿರಳ. ಹೀಗಿದ್ದರೂ ಜ್ಞಾನಪ್ರೀತಿಯಿಂದ ಈ ಪುಸ್ತಕವನ್ನು ಪ್ರಕಟಿಸಿರುವವರಿಗೆ ನಾವೆಲ್ಲರೂ ಋಣಿಗಳಾಗಿರಬೇಕು. ಅವರ ಉದ್ದೇಶ ಸಫಲವಾಗಲೆಂದು ಹಾರೈಸುತ್ತೇನೆ. ಪೂಜ್ಯ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರ ಪಾದಾರವಿಂದಗಳಿಗೆ ಪ್ರಣಾಮ ಗಳನ್ನು ಅರ್ಪಿಸುತ್ತೇನೆ.

ಮೈಸೂರು **- ಎಚ್.ವಿ. ನಾಗರಾಜರಾವ್**

# ವಿಷಯಾನುಕ್ರಮಣಿಕೆ



## ಭಾಗ - 1

## ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರ ಲೇಖನಗಳು (1-106)

**ಭಾಗ - 2**

**ಆಸ್ಥಾನ ವಿದ್ವಾನ್, ವೇದಾಂತ ಶಿರೋಮಣಿ**

**ಶ್ರೀಯುತ ಎಸ್. ವಿಠ್ಠಲಶಾಸ್ತ್ರಿಗಳ ಲೇಖನಗಳು (107-137)**

**(ಶ್ರೀ ಶ್ರೀಜ್ಞಾನಾನಂದೇಂದ್ರಸರಸ್ವತೀ ಸ್ವಾಮಿಗಳು)**

## ಭಾಗ - 3

## ಇತರೆ ವಿದ್ವಾಂಸರುಗಳ ಲೇಖನಗಳು (139-165)



* * * * *

# ಸಂಸ್ಕೃತವೂ ಸಂಸ್ಕೃತಿಯೂ

## ಭಾಗ - 1

## ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರ ಲೇಖನಗಳು

## 1. ಸಂಸ್ಕೃತವೂ ವೇದಾಂತವೂ[1]

ಈಗ ಲೋಕದಲ್ಲಿ ಎಲ್ಲೆಲ್ಲಿಯೂ ಅಶಾಂತಿ, ಜಗಳ, ಕ್ಷಾಮ, ರೋಗ-ಇವುಗಳೇ ಹರಡಿರುತ್ತವೆ. ಈಗ ನಾವು ಪದ್ಧತಿಯ ಪ್ರಕಾರವಾಗಿ ನಡೆಯಿಸುತ್ತಿರುವ ಇಂಥ ಅನುಷ್ಠಾನಗಳಿಂದ ಈ ವಿಷಮಕಾಲಕ್ಕೆ ಯಾವದಾದರೂ ಪ್ರಯೋಜನವಿದೆಯೇ? ಎಂಬ ಪ್ರಶ್ನೆಯು ಸಹಜವಾಗಿ ಹುಟ್ಟಿಕೊಳ್ಳುತ್ತದೆ. ನಾವು ಬ್ರಿಟಿಷರ ಸಂಪರ್ಕದ ವಿದ್ಯಾಭ್ಯಾಸವನ್ನು ಪಡೆದವರು. ಅವರು ''ದೃಷ್ಟವಾದ ಸಂಕಟಗಳಿಗೆ ದೃಷ್ಟವಾದ ಉಪಾಯವನ್ನು ಕೈಕೊಳ್ಳಬೇಕು; ಅದರಂತೆ ದೃಷ್ಟವಾದ ಸಂಕಟಗಳಿಗೆ ದೃಷ್ಟವಾದ ಉಪಾಯಗಳಿಂದಲೇ ಪರಿಹಾರವು ದೊರಕೀತೇ ಹೊರತು ಇಂಥ ಅನುಷ್ಠಾನಗಳಿಂದ ಯಾವ ಉಪಯೋಗವೂ ಆಗಲಾರದು'' ಎಂದು ಈ ಹಳೆಯ ಪದ್ಧತಿಯನ್ನು ಹಳಿಯುವ ಬುದ್ಧಿಯನ್ನು ನಮಗೆ ಕಲಿಸಿದರು. ಅವರು ಸ್ಕೂಲುಗಳು, ವೃತ್ತಾಂತ ಪತ್ರಿಕೆಗಳು, ಕೈಗಾರಿಕೆ, ವಿಮಾನ, ವೈದ್ಯ-ಮುಂತಾದ ಕೆಲವು ಯೋಜನೆಗಳನ್ನು ನಮ್ಮ ಬುದ್ಧಿಗೆ ತಗುಲಿಸಿದರು. ಈಗ ಬ್ರಿಟಿಷರ ರಾಜ್ಯವು ಕೊನೆಗೊಂಡು ದೇಶಕ್ಕೆ ಸ್ವಾತಂತ್ರ್ಯವು ಬಂದಿದೆ. ಜನರಲ್ಲಿ ಎಲ್ಲೆಲ್ಲಿಯೂ ಉತ್ಸಾಹವು ಉಕ್ಕುತ್ತಿದೆ. ಜನರು ದೇಶಭಕ್ತಿಯಿಂದ ಕೆಲವು ಹಳೆಯ ಆಚಾರಗಳನ್ನೂ ಪದ್ಧತಿಗಳನ್ನೂ ಉಜ್ಜೀವನಗೊಳಿಸಿಕೊಳ್ಳುವ ಯತ್ನವನ್ನು ಜನರಲ್ಲಿ ಹರಡಬೇಕು! -ಎಂಬ ಕೂಗೂ ಅಲ್ಲಲ್ಲಿ ಕೇಳಬರುತ್ತಿದೆ. ಹೊಸದಾಗಿ ಸ್ವಾತಂತ್ರ್ಯವನ್ನು ಕಂಡ ಹುರುಪಿನಲ್ಲಿ ಅಧಿಕಾರಿಗಳೂ ಜನರೂ ಹಲವು ಸೂಚನೆಗಳನ್ನು ಕೊಡುತ್ತಿದ್ದಾರೆ; ಅಂಥ ಸೂಚನೆಗಳಲ್ಲಿ ಇದೂ ಒಂದೊ, ಅಥವಾ ಇದರಲ್ಲೇನಾದರೂ ವೈಶಿಷ್ಟ್ಯವಿದೆಯೊ? ಈಗಿನ ನಮ್ಮ ಕಷ್ಟಗಳ ನಿವಾರಣೆಗೆ ಸಂಸ್ಕೃತವೂ ವೇದಾಂತವೂ ಏನಾದರೂ ಉಪಾಯವನ್ನು ಸೂಚಿಸಿಯಾವೋ ಅಥವಾ ''ಇವುಗಳನ್ನು ನಾವು ಅನುಸರಿಸಿದ್ದು ಹುರುಳಿಲ್ಲದ ದೇಶಭಕ್ತಿಯ ಫಲವು ಮಾತ್ರ'' ಎಂದು ಕಾಲಾನುಕಾಲಕ್ಕೆ ಇವುಗಳನ್ನು ಕೈಬಿಡಬೇಕಾಗಿಬಂದಿತೋ? ಇದೀಗ ಇಂದಿನ ಉಪನ್ಯಾಸದ ವಿಷಯವು.

---

1. ಲೇಖನಗಳ ಮೂಲದ ವಿವರವನ್ನು ಕೊನೆಯಲ್ಲಿ ಪರಿಶಿಷ್ಟದಲ್ಲಿ ಕೊಡಲಾಗಿದೆ.

ಕೆಲವರು ಹೇಳುತ್ತಿರುವದು ಏನೆಂದರೆ, ವೇದಾಂತವು ಹಳೆಯ ಕಾಲದ ಆಚಾರ್ಯರುಗಳ ಸಿದ್ಧಾಂತವು; ಅದು ಮೃತಭಾಷೆಯಾದ ಸಂಸ್ಕೃತದಲ್ಲಿದೆ. ಆ ಭಾಷೆಯಾಗಲಿ, ಅದರಲ್ಲಿರುವ ವೇದಾಂತವಾಗಲಿ ಈಗಿನ ಜನತೆಯ ಸಮಸ್ಯೆಗಳನ್ನು ಬಿಡಿಸಲಾರವು. ಈಗಿನವರ ಆಶೋತ್ತರಗಳನ್ನು ಪೂರ್ಣಗೊಳಿಸಲಾರವು. ಆದ್ದರಿಂದ ಸಂಸ್ಕೃತವನ್ನು ಮೃತಸಂಜೀವಿನೀ ಮಂತ್ರಪುರಶ್ಚರಣದಿಂದ ಎಬ್ಬಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಅದೃಷ್ಟಫಲವನ್ನು ಹೇಳುವ ವೇದಾಂತವಂತೂ ಈ ಕಾಲಕ್ಕೆ ಯಾವ ಪ್ರಯೋಜನಕ್ಕೂ ಬರುವ ಹಾಗಿಲ್ಲ. ಆದ್ದರಿಂದ ಈಗ್ಗೆ ಅವುಗಳನ್ನು ಕೈ ಬಿಡುವುದೇ ಒಳ್ಳೆಯದು.

ಈ ಅಭಿಪ್ರಾಯವನ್ನು ಸ್ವಲ್ಪ ವಿಮರ್ಶೆಮಾಡೋಣ. ಮೊದಲು ಭಾಷೆಯ ವಿಚಾರವನ್ನು ತೆಗೆದುಕೊಳ್ಳೋಣ. ವೇದಾಂತದಲ್ಲಿ ಅಮೋಘವಿಷಯಗಳಿದ್ದರೂ ಅದನ್ನು ಸಂಸ್ಕೃತದಲ್ಲಿಯೇ ಕಲಿಯಬೇಕಾದದ್ದೇನು? ಈಗಿನ ದೇಶಭಾಷೆಗಳು ಸಾಲದೆ? ಎಂದು ಯಾರಾದರೂ ಕೇಳಬಹುದು. ದೇಶಭಾಷೆಗಳು ನಿರುಪಯೋಗವೆಂದಾಗಲಿ, ಅವುಗಳನ್ನು ಕೆಳಕ್ಕೆ ಇಳಿಸಬೇಕೆಂದಾಗಲಿ ಯಾರೂ ಹೇಳುವುದಿಲ್ಲ. ಆದರೆ ಸಂಸ್ಕೃತದ ಸ್ಥಾನವು ಯಾವದು? ವೇದಾಂತಕ್ಕೆ ಅದರ ಅವಶ್ಯಕತೆಯೇನು? ಎಂಬುದನ್ನು ನಾವು ತಿಳಿದುಕೊಳ್ಳುವದು ಅವಶ್ಯವಾಗಿದೆ. ಜನರು ಆಡುವ ಭಾಷೆಯಲ್ಲಿ ಅವರ ಮನನಧಾರೆಯೂ ಆಶೋತ್ತರಗಳ ಸ್ವರೂಪವೂ ಅಡಕವಾಗಿರುತ್ತದೆ. ಯಾವ ಭಾಷೆಗೆ ಸ್ವಂತ ಲಿಪಿಯಿದೆಯೋ, ವ್ಯಾಕರಣವಿದೆಯೋ, ಕೋಶಗಳಿವೆಯೋ, ಕಾವ್ಯನಾಟಕಾದಿಗಳಿವೆಯೋ, ಶಾಸ್ತ್ರಗಳಿವೆಯೋ, ಅಂಥ ಭಾಷೆಯನ್ನು ಬೇಡವೆಂದರೆ ಅದರಲ್ಲಿ ಅಡಗಿರುವ ಸಂಸ್ಕೃತಿಯನ್ನೇ ತಳ್ಳಿಹಾಕಿದಂತೆ ಆಗುತ್ತದೆ.

ಸಂಸ್ಕೃತವು ಈಗ ಎಲ್ಲರ ಮೆಚ್ಚುಗೆಗೂ ಪಾತ್ರವಾಗಿಲ್ಲ. ಈಗ ಅದರಲ್ಲಿ ಅಷ್ಟಾಗಿ ಹೊಸಗ್ರಂಥಗಳು ರಚಿತವಾಗುತ್ತಿಲ್ಲ. ಆದರೂ ನಮ್ಮ ಪ್ರಾಚ್ಯಕೋಶಾಗಾರಗಳಲ್ಲಿ ಇನ್ನೂ ಅಚ್ಚಾಗದೆ ಇರುವ ಸಾವಿರಗಟ್ಟಲೆಯ ಗ್ರಂಥಗಳು ಓಲೆಗರಿಯಲ್ಲಿದ್ದು ಬೆಳಕನ್ನು ನಿರೀಕ್ಷಿಸಿಕೊಂಡು ಕುಳಿತಿವೆ. ಅದರಲ್ಲಿ ಕಾವ್ಯಗಳಿವೆ, ನಾಟಕಗಳಿವೆ, ಅಲಂಕಾರ ಗ್ರಂಥಗಳಿವೆ, ಜ್ಯೋತಿಷ್ಯವೂ ಗಣಿತವೂ ಇದೆ, ವೈದ್ಯಶಾಸ್ತ್ರ ರಾಜನೀತಿಗಳಿವೆ, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಕಾಮಶಾಸ್ತ್ರಗಳಿವೆ. ಲೋಕವ್ಯವಹಾರಕ್ಕೆ ಬೇಕಾದ ಇನ್ನೂ ಕೆಲವು ವಿಷಯಗಳಿವೆ. ತತ್ತ್ವಶಾಸ್ತ್ರಗಳೂ ಹಲವು ಇರುತ್ತದೆ. ಇಷ್ಟು ಗ್ರಂಥಸಂಪತ್ತುಳ್ಳ ಭಾಷೆಯನ್ನು ನಾವು ತಿರಸ್ಕರಿಸಬಹುದೆ?

ಸಂಸ್ಕೃತಭಾಷೆಯ ಶಬ್ದಭಂಡಾರವು ಅಪರಿಮಿತವಾಗಿದೆ. ಇಂದಿಗೂ ಅದಕ್ಕೆ ಇಪ್ಪತ್ತೈದು- ಮೂವತ್ತು ಕೋಶಗಳಿವೆ. ಅಮರಕೋಶದಂಥ ಒಂದು ಕೋಶವನ್ನು ಪರೀಕ್ಷಿಸಿದರೂ ಸಾಕು. ಒಂದೊಂದು ವಸ್ತುವನ್ನು ಹೇಳುವುದಕ್ಕೇ ಪ್ರವೃತ್ತಿ ನಿಮಿತ್ತಭೇದದಿಂದ ಹಲವು ಪರ್ಯಾಯಶಬ್ದಗಳಿರುವದು ಕಾಣುವದು. ವಿರುದ್ಧಾರ್ಥ ವನ್ನು ಹೇಳುವ ಶಬ್ದಗಳೂ ಬೇಕಾದಷ್ಟಿವೆ. ಸೂಕ್ಷ್ಮಾರ್ಥಗಳನ್ನು ತಿಳಿಸುವ ಶಬ್ದಗಳಿವೆ. ನವರಸಗಳನ್ನೂ ನವಿರಾಗಿ ತಿಳಿಸುವದಕ್ಕೂ ಶಬ್ದಸೌಕರ್ಯವಿದೆ. ಅಧ್ಯಾತ್ಮವಿಚಾರದ ಶಬ್ದಗಳು ತುಂಬಿತುಳುಕಾಡುತ್ತಿವೆ. ಶಬ್ದಗಳು ಪ್ರಕೃತಿ, ಪ್ರತ್ಯಯ, ಉಪಸರ್ಗ- ಇವುಗಳಿಂದ ಕೂಡಿರುವುದರಿಂದ ಅವಯವಾರ್ಥವೂ ಒಟ್ಟರ್ಥವೂ ಸ್ಪಷ್ಟವಾಗಿ ತೋರುವುದಕ್ಕೆ ಅವಕಾಶವಿರುತ್ತದೆ. ಇಂಗ್ಲಿಷು ಭಾಷೆಯಲ್ಲಿ ಶಬ್ದಸಂಪತ್ತಿಗೇನೂ ಕಡಿಮೆಯಿಲ್ಲ. ಆದರೆ ಅದರಲ್ಲಿ ಗ್ರೀಕ್, ಲ್ಯಾಟಿನ್ -ಎಂಬ ಪುರಾತನಭಾಷೆಗಳಿಂದ ಶಾಸ್ತ್ರೀಯ ಶಬ್ದಸಂಪತ್ತನ್ನು ಎರವಲಾಗಿ ತೆಗೆದುಕೊಳ್ಳಬೇಕಾಗಿದೆ. ವ್ಯವಹಾರದ ಶಬ್ದಗಳನ್ನು ಎಲ್ಲಾ ಭಾಷೆಗಳಿಂದಲೂ ಸಾಲವಾಗಿ ತೆಗೆದುಕೊಂಡಿರುತ್ತದೆ. ಅದು ನಮ್ಮ ದೇಶದ ಭಾಷೆಯಲ್ಲ. ನಮ್ಮ ದೇಶದ ಸಂಸ್ಕೃತಿಯನ್ನು ಸೂಚಿಸುವ ಶಬ್ದಗಳಂತೂ ಅದರಲ್ಲಿ ಸಿಕ್ಕಲೇ ಆರವು.

ಸಂಸ್ಕೃತಕ್ಕೆ ಉತ್ತಮವಾದ ವ್ಯಾಕರಣದ ಸಹಾಯವಿದೆ. ಪ್ರತಿಯೊಂದು ಶಬ್ದವೂ ಒಂದೊಂದು ಧಾತುವಿನಿಂದ ಬಂದಿದೆ- ಎಂಬುದು ಪಾಶ್ಚಾತ್ತ್ಯ ವಿದ್ವಾಂಸರಿಗೆ ಸಂಸ್ಕೃತದ ಪರಿಚಯದಿಂದಲೇ ಗೊತ್ತಾಗಬೇಕಾಯಿತು. ಇದರಿಂದ ತುಲನಾತ್ಮಕಭಾಷಾಶಾಸ್ತ್ರ (Comparative Philology) ಎಂಬ ಹೊಸಶಾಸ್ತ್ರವೊಂದು ನಿರ್ಮಾಣವಾಯಿತು.

ಈ ಭಾಷೆಯಲ್ಲಿ ಪೃಥ್ವಿಯ ಧಾರ್ಮಿಕ ವಾಙ್ಮಯದಲ್ಲೆಲ್ಲ ಅತ್ಯಂತ ಪುರಾತನ ವಾದ ವೇದವಿದೆ. ಪುರಾಣಗಳಿವೆ. ವಿವಿಧ ವಿಷಯಗಳಿಂದ ಕೂಡಿದ ಅತ್ಯಂತ ವಿಸ್ತಾರವಾದ ರಾಮಾಯಣ-ಮಹಾಭಾರತಗಳೆಂಬ ಇತಿಹಾಸಗಳಿವೆ. ಸನಾತನ ಆರ್ಯರ, ಜೈನರ, ಬೌದ್ಧರ, ತತ್ತ್ವದರ್ಶನಗಳಿವೆ. ವೈದಿಕವಾಙ್ಮಯವನ್ನು ಇತರ ಧಾರ್ಮಿಕವಾಙ್ಮಯಗಳಿಗೆ ಹೋಲಿಸಲಾಗಿ ತುಲನಾತ್ಮಕ ಧರ್ಮಶಾಸ್ತ್ರ (Comparative Religion) ತುಲನಾತ್ಮಕ ಪುರಾಣ (Comparative Mythology) ಇವುಗಳು ಹುಟ್ಟಿ ಬೆಳೆದುಕೊಂಡಿವೆ.

ಪ್ರಾಚೀನಾರ್ಯರ ಸಂಸ್ಕೃತಿಯನ್ನು ನೆನಪಿಗೆ ತಂದುಕೊಳ್ಳುವದಕ್ಕೂ ಭರತಖಂಡದವರ ದೇಶಭಕ್ತಿಯನ್ನು ಬೆಳೆಯಿಸಿಕೊಳ್ಳುವುದಕ್ಕೂ ರಾಮಾಯಣ

ಭಾರತಗಳಿರುವ ಸಂಸ್ಕೃತಭಾಷೆಗಿಂತ ಹೆಚ್ಚು ಅಮೂಲ್ಯವಾಗಿರುವ ಸಾಧನವು ಮತ್ತೊಂದು ದೊರೆಯಲಾರದು. ಆದ್ದರಿಂದ ಅವನ್ನು ತಳ್ಳಿಹಾಕಬಾರದು.

ಸಂಸ್ಕೃತವು ಅತ್ಯಂತ ಪುರಾತನರಾದ ಋಷಿಗಳ ಕಾಲದಲ್ಲಿ ಜನರು ಆಡುವ ಭಾಷೆಯಾಗಿತ್ತು. ನಮ್ಮ ಪ್ರಸಿದ್ಧರಾದ ರಾಜರುಗಳ ಕಾಲದಲ್ಲಿ ಜನರ ನಾಲಗೆಯ ಮೇಲೆ ನಲಿದಾಡುತ್ತಿತ್ತು. ಮೊಗಲರು ಚಕ್ರಾಕಪತಿಗಳಾಗಿದ್ದಾಗಲೂ ಬಹುಜನರು ಇದನ್ನು ಆದರಿಸುತ್ತಿದ್ದರು. ಈಚೆಗೆ ಬ್ರಿಟಿಷರು ಈ ದೇಶವನ್ನು ಆಳುವದಕ್ಕೆ ಬಂದಮೇಲೆ ಇಂಗ್ಲಿಷು ಇದರ ಸ್ಥಳವನ್ನು ಆಕ್ರಮಿಸಿಕೊಂಡರೂ ಇದರ ಪ್ರಭಾವವು ಕಡಿಮೆಯಾಗಲಿಲ್ಲ. ಇದು ಕೆಲವು ಪ್ರಾಕೃತಭಾಷೆಗಳನ್ನು ಹಡೆದು ಹಲವು ದೇಶಭಾಷೆಗಳಿಗೆ ಅಜ್ಜಿಯಾಯಿತು. ಇನ್ನು ಕೆಲವು ಭಾಷೆಗಳಿಗೆ ಸಾಕುತಾಯಿಯಾಯಿತು. ಇದರ ಋಣವನ್ನು ತೀರಿಸುವ, ಹಾಗೂ ಇದರ ಹಂಗೇ ಇಲ್ಲದ ದೇಶಭಾಷೆಯೆಂಬುದೇ ಇಲ್ಲ. ಧಾರ್ಮಿಕದೃಷ್ಟಿಯಿಂದ ನೋಡಿದರಂತೂ ಕನ್ಯಾಕುಮಾರಿಯಿಂದ ಹಿಮಾಲಯದವರೆಗೂ ಈ ಭಾಷೆಯ ಮಂತ್ರಗಳನ್ನು ಉಚ್ಚರಿಸಿಕೊಂಡು ಕರ್ಮಗಳನ್ನು ಮಾಡುವದು, ದೇವತೆಗಳನ್ನು ಪ್ರಾರ್ಥಿಸುವದು- ಇವು ಭರತಖಂಡನಿವಾಸಿಗಳಲ್ಲಿ ಮುಕ್ಕಾಲು ಪಾಲು ಜನರ ನಿತ್ಯಕರ್ತವ್ಯವಾಗಿದೆ.

ಸಂಸ್ಕೃತದ ಸಿರಿಯನ್ನು ಇಷ್ಟೊಂದು ವರ್ಣನೆಮಾಡಿರುವದೇಕೆಂದರೆ **ವೇದಾಂತವೆಂಬ** ಅಮೂಲ್ಯವಾದ ರತ್ನವನ್ನು ರಕ್ಷಿಸಿಕೊಂಡು ಬಂದಿರುವ ಪೆಟ್ಟಿಗೆಯಿದು. ಈ ವೇದಾಂತರತ್ನವನ್ನು ಪರೀಕ್ಷಿಸಿದರಂತೂ ಅದಕ್ಕೆ ನಮ್ಮ ಚಿತ್ತವು ಸೂರೆಯಾಗುವದು. **ದಾರಾಷಿಕೊ** ಕಾಲದಲ್ಲಿ ಈ ವೇದಾಂತದ ಸೆಳೆತಕ್ಕೆ ಸಿಕ್ಕಿದ ಮುಸಲ್ಮಾನರು ಹಲವು ಉಪನಿಷತ್ತುಗಳನ್ನು ಪರ್ಷಿಯನ್ ಭಾಷೆಗೆ ಪರಿವರ್ತನೆಮಾಡಿಕೊಂಡರು. ಅದರ ಲ್ಯಾಟಿನ್ ಅನುವಾದವನ್ನು ಓದಿದ **ಷೋಪನ್ ಹ್ಯಾವರ್**-ಎಂಬ ಪಾಶ್ಚಾತ್ತ್ಯತತ್ತ್ವವಿಚಾರಕನು ಅದನ್ನು ಹೀಗೆ ಕೊಂಡಾಡುತ್ತಾನೆ; ''ಪ್ರಪಂಚದ ವಾಙ್ಮಯಗಳಲ್ಲೆಲ್ಲ ಉಪನಿಷತ್ತುಗಳ ಸಿದ್ಧಾಂತಕ್ಕೆ ಸಮಾನವಾದದ್ದು ಮತ್ತೊಂದಿಲ್ಲಫ; ಉಪನಿಷತ್ತುಗಳೇ ನನ್ನ ಬಾಳಿಗೆ ಸಮಾಧಾನವನ್ನು ಇತ್ತಿವೆ. ಅವೇ ನನ್ನ ಮರಣಕಾಲದಲ್ಲಿ ನನಗೆ ಸಮಾಧಾನವನ್ನೀಯುವವು!'' ಇನ್ನು ಎಮರ್‌ಸನ್, ಕಾರ್ಲೈಲ್- ಮುಂತಾದ ಪಾಶ್ಚಾತ್ತ್ಯತತ್ತ್ವ ಪರಿಶೀಲಕರೂ ಸಹ ವೇದಾಂತವನ್ನು ಹಾಡಿ ಹೊಗಳಿರುತ್ತಾರೆ. ಮ್ಯಾಕ್ಸ್‌ಮುಲ್ಲರ್, ಡಾಯ್ಸನ್, ಮುಂತಾದವರು ಇದನ್ನು ಮೆಚ್ಚಿ ತಲೆದೂಗಿ ಪಾಶ್ಚಾತ್ತ್ಯರಿಗೆ ತಿಳಿಯುವ ಭಾಷೆಗಳಲ್ಲಿ ಪರಿವರ್ತನೆಮಾಡಿರುತ್ತಾರೆ.

ಅಂತೂ ಸಂಸ್ಕೃತಕ್ಕೂ ಅದರಲ್ಲಿ ಹುದುಗಿರುವ ವೇದಾಂತಕ್ಕೂ ಈಗಲೂ ಒಂದು ಮಹತ್ವದ ಸ್ಥಾನವಿದೆ. ದೇಶಕಾಲಗಳ ಭೇದವಿಲ್ಲದೆ ಎಲ್ಲರೂ ಇದನ್ನು ಹೃದಯಕ್ಕೆ ಅಪ್ಪಿಕೊಳ್ಳುತ್ತಿದ್ದಾರೆ.

ಆದರೆ ಈಗಿನ ಸನ್ನಿವೇಶದಲ್ಲಿ ವೇದಾಂತದಿಂದ ನಮಗೆ ಆಗಬಹುದಾದ ಉಪಕಾರವು ಯಾವದು? ಎಂದರೆ ಈಗಿನ ಸ್ಥಿತಿಯನ್ನು ಸ್ವಲ್ಪ ಕಣ್ಣೆಟ್ಟು ನೋಡಿರಿ. ಇಡಿಯ ಭೂಮಂಡಲವು ಒಂದು ಶ್ವಾನಸಮಾರಾಧನೆಯ ಸ್ಥಳವಾಗಿಬಿಟ್ಟಿದೆ. ಈ ಲೋಕದ ಪ್ರಮುಖ ರಾಷ್ಟ್ರಗಳೆಲ್ಲವೂ ಅನ್ನಸಂತರ್ಪಣೆಯ ಎಂಜಲು ಹಾಳೆಗಳಿಗೆ ಗುರುಗುಟ್ಟುತ್ತಲೂ ಬೊಗಳುತ್ತಲೂ ಒಂದರೊಡನೊಂದು ಕಚ್ಚಾಡಿ ಸೋತು ದೂರದೂರವಾಗಿ ನಾಲಗೆಯನ್ನು ಚಾಚಿಕೊಂಡು ಬಿದ್ದಿರುವ ನಾಯಿಗಳಂತೆ ಕಾಣುತ್ತಿವೆ. ಅವೆಲ್ಲವೂ ಯಾರ ಸ್ವತ್ತಿಗೊ ಕಾದಾಡಿ ಅಥವಾ ಕಾದಾಟಕ್ಕೆ ನೆರವಾಗಿ ಸೋತುಸೊರಗಿಕೂತಿವೆ. ರಾಷ್ಟ್ರವಿಸ್ತಾರದಾಹವು ಇನ್ನೂ ಅಡಗಿಲ್ಲ. ಶಾಂತಿಗೆ ಏರ್ಪಾಟುಮಾಡುವ ಸಂಯುಕ್ತಜನಾಂಗಗಳ ಸಭೆಯಲ್ಲಿ ಪ್ರತಿನಿಧಿಗಳು ಒಬ್ಬರಮೇಲೊಬ್ಬರು ದೂರುಹೊರಿಸುತ್ತಾ ಮೂರನೆಯ ಮಹಾಯುದ್ಧದ ಭೀಕರ ಸೂಚನೆಯನ್ನು ಆಗಾಗ್ಗೆ ಮಾಡುತ್ತಲೇ ಇದಾರೆ. ಶಾಂತಿಗೆಂದು ಅವರು ಮಾಡುವ ಸೂಚನೆಗಳು ವಿಲಕ್ಷಣವಾಗಿರುತ್ತವೆ. ತೋಳ, ಕರಡಿ, ಹುಲಿ, ಸಿಂಹ- ಮುಂತಾದ ಹಿಂಸ್ರಮೃಗಗಳು ಮಿಕ್ಕಪ್ರಾಣಿಗಳ ಕ್ಷೇಮಚಿಂತನೆಗೆಂದು ಸಭೆಸೇರಿ ಕರಡಿಯು ಉಗುರನ್ನು ತೆಗೆಯಿಸಿಕೊಳ್ಳಬೇಕೆಂದು ಹುಲಿಯೂ, ಹುಲಿಯು ಹಲ್ಲನ್ನು ಕೀಳಿಸಿಕೊಳ್ಳಬೇಕೆಂದು ತೋಳನೂ, ತೋಳನ ಕಾಲು ಊನವಾಗಬೇಕೆಂದು ಕರಡಿಯೂ, ಸಿಂಹವು ದೂರವಾದ ಅರಣ್ಯಕ್ಕೆ ಹೋದರಾದೀತೆಂದು ಮಿಕ್ಕ ಸಭಿಕರೂ ಸೂಚಿಸುವಂತೆ, ರಾಷ್ಟ್ರಪ್ರತಿನಿಧಿಗಳು ಸೈನ್ಯವನ್ನು ಕಡಿಮೆಮಾಡುವದು, ಶಸ್ತ್ರಾಸ್ತ್ರಗಳನ್ನು ನಾಶಪಡಿಸುವದು- ಮುಂತಾದ ಮಂತ್ರಗಳನ್ನು ಪರಸ್ಪರವಾಗಿ ಉಪದೇಶಿಸುತ್ತಿರುವರು!

ಲೋಕಕ್ಕೆ ಕಲ್ಯಾಣವು ಹೇಗಾದೀತು? ಜನರ ಮನಸ್ಸಿಗೆ ಶಾಂತಿಯು ಹೇಗೆ ದೊರಕೀತು? ಮಾನವನ ಮನಸ್ಸು ಎಂದಿಗೆ ನಿತ್ಯಸುಖವನ್ನು ಕಂಡುಕೊಂಡೀತು? ಎಂಬೀ ತೆರನಾದ ಪ್ರಶ್ನೆಗಳನ್ನೇ ಏಕಾಂತದಲ್ಲಿ ಅರಣ್ಯದಲ್ಲಿ ಕುಳಿತು ಚರ್ಚಿಸುತ್ತಿದ್ದ ನಿಸ್ವಾರ್ಥರಾದ, ಪರಮವಿರಕ್ತರಾದ ಕರುಣಾಳುಗಳಾದ ಋಷಿಗಳ ಮನನವನ್ನು ಒಳಗೊಂಡಿರುವ ವೇದಾಂತವು ಈಗಿನ ಕಾಲಕ್ಕೆ ಉಪಯೋಗಕ್ಕೆ ಬಂದೀತೋ, ಇಲ್ಲವೊ- ನೀವೇ ಯೋಚಿಸಿಕೊಳ್ಳಬಹುದು. ''ಯಾವನು ನಿತ್ಯನಾಗಿ ಚೇತನರುಗಳಿಗೆ

ಚೇತನವಾಗಿ ಆತ್ಮನಾಗಿದ್ದುಕೊಂಡಿರುವನೋ ಅವರವರ ಇಷ್ಟಾರ್ಥಗಳನ್ನು ಈಡೇರಿಸಿಕೊಡುತ್ತಿರುವನೋ ಆ ಪರಮಾತ್ಮನನ್ನು ತನ್ನ ಹೃದಯದಲ್ಲಿರುವನೆಂದು ಯಾರು ಕಂಡುಕೊಳ್ಳುವರೋ ಅವರಿಗೇ ಶಾಂತಿಯು ದೊರಕುವದು, ಮಿಕ್ಕವರಿಗಲ್ಲ!" ಎಂದು ಸಾರಿರುವ ಉಪನಿಷತ್ತುಗಳ ಉಪದೇಶವನ್ನೂ "ಸರ್ವಭೂತಗಳಲ್ಲಿಯೂ ಸಮನಾಗಿಯೇ ಇದ್ದುಕೊಂಡು ಎಂದಿಗೂ ನಾಶವಾಗದಿರುವ ಪರಮಾತ್ಮನನ್ನು ಕಂಡುಕೊಂಡವರಿಗೆ ಎಲ್ಲರೂ ತನ್ನ ಆತ್ಮನೆ ಆಗಿರುವದರಿಂದ ಅವನು ಯಾರನ್ನೂ ಹಿಂಸಿಸುವದಿಲ್ಲ. ಆತನಿಗೆ ಸದ್ಗತಿಯಾಗುವದು" ಎಂಬ ಗೀತೆಯ ಇಂಪಿನ ಗಾನವನ್ನೂ ಕೇಳುವದರಿಂದ ಜನರಿಗೆ ಎಷ್ಟರಮಟ್ಟಿಗೆ ಶಾಂತಿಯಾದೀತು! ಇಂಥ ಉದಾತ್ತತತ್ತ್ವವನ್ನು ಅಡಗಿಸಿಕೊಂಡಿರುವ ಸಂಸ್ಕೃತಭಾಷೆಯ ಉಪಯೋಗದಿಂದ ಮನಸ್ಸಿಗೆ ಎಂಥ ಉತ್ತಮವಾದ ಸಂಸ್ಕಾರವು ಬಂದೀತು?- ಎಂಬುದನ್ನು ನೀವೆಲ್ಲರೂ ಈಗ ಮನದಂದುಕೊಳ್ಳಬಹುದು.

ವ್ಯಕ್ತಿಗೆ ಶಾಂತಿಯೂ ಸಮಾಜಕ್ಕೂ ದೇಶಕ್ಕೂ ಹಾಗೂ ಇಡಿಯ ಪ್ರಪಂಚಕ್ಕೂ ಶಾಂತಿಯೂ ವೇದಾಂತದಿಂದಲೇ ಬರಬೇಕಾಗಿದೆಯಲ್ಲದೆ ಮಕ್ಕಳ ಕೈಯೊಳಗಿನ ಪಂಜಿನಂತೆಯೂ ಬಾಕುವಿನಂತೆಯೂ ಇರುವ ಪಾಶ್ಚಾತ್ಯರ ಆಟಂಬಾಂಬು, ವಿನಾಶಕ ವಿಮಾನವೇ ಮುಂತಾದ ಯುದ್ಧ ಸಾಮಾಗ್ರಿಗಳಿಂದ ಶಾಂತಿಯು ಎಂದಿಗೂ ಬರಲಾರದು. ಇಂಥ ಉತ್ತಮ ಪರಿಣಾಮಕಾರಿಯಾದ ವೇದಾಂತ ವಿಚಾರವು ಭೂಲೋಕದಲ್ಲೆಲ್ಲ ಹರಡಲೆಂದು ಹಾರೈಸೋಣ. ಅದರಲ್ಲಿ ಹೇಳಿರುವಂತೆ ಎಲ್ಲರ ಆತ್ಮನೂ ಆಗಿರುವ ಪರಮಾತ್ಮನನ್ನು ಅರಿಯುವದಕ್ಕೆಂದು ವೇದಾಂತದ ಪರಿಚಯುವನ್ನು ಮಾಡಿಕೊಳ್ಳೋಣ. ಸಂಸ್ಕೃತ ಗ್ರಂಥಗಳನ್ನು ಪಾರಾಯಣ ಮಾಡೋಣ. ಸಂಸ್ಕೃತ ಭಾಷೆಯನ್ನು ಹೆಚ್ಚುಹೆಚ್ಚಾಗಿ ಬಳಕೆಗೆ ತಂದುಕೊಳ್ಳೋಣ.

* * * * *

## 2. ರಷಿಯದೇಶದಲ್ಲಿ ಸಂಸ್ಕೃತದ ಅಭ್ಯಾಸ

ಇಲ್ಲಿರುವ ವಿಷಯುಗಳನ್ನು Soviet Land (ಸೋವಿಯಟ್ ದೇಶ) ಎಂಬ ಪಾಕ್ಷಿಕಪತ್ರಿಕೆ ಡಿಸೆಂಬರ್ 5ನೆಯ ತಾರೀಖಿನ ಸಂಚಿಕೆಯಿಂದ ಸಂಗ್ರಹಿಸಿದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ರಷಿಯದ ಬೆಟ್ಲಿಂಗ್ ಎಂಬ ವಿದ್ವಾಂಸನು ಏಳು ಸಂಪುಟದ **ಸಂಸ್ಕೃತನಿಘಂಟ**ವನ್ನು ಪ್ರಕಟಿಸಿದನು. ಮಿನಯಿವ್ ಎಂಬಾತನೂ

ಅವನ ಶಿಷ್ಯರಾದ ಓಲ್ಡಿನ್‌ಬರ್ಗ್ ಮತ್ತು ಷೆಡಬಾಟ್ಸ್ಕೊಯಿ ಎಂಬುವರೂ ಇಂಡಿಯಾದ **ಬೌದ್ಧಮತದ ತತ್ತ್ವ**ಗಳನ್ನೂ ಭಾರತ ಸಂಸ್ಕೃತಿಯ ವಿಚಾರಗಳನ್ನು ಬೆಳಕಿಗೆ ಹಿಡಿದರು.

ಷೆಡ್‌ಬಾಟ್ಸ್ಕೊಯಿಯು ಬೌದ್ಧಮತದಲ್ಲಿನ ಕಥಾಸಂಗ್ರಹಗಳನ್ನು ಲಕ್ಷ್ಯದಲ್ಲಿಟ್ಟುಕೊಂಡಿದ್ದಲ್ಲದೆ, **ಭಾರತದ ತರ್ಕಶಾಸ್ತ್ರ**ವನ್ನೂ ಅಭ್ಯಸಿಸಿದನಂತೆ. ಮೇಲೆ ಹೇಳಿದ ವಿದ್ವಾಂಸರುಗಳಿಬ್ಬರೂ ಬೌದ್ಧವಿಚಾರಗಳ ಗ್ರಂಥಮಾಲಿಕೆಯೊಂದನ್ನು ಹೊರಡಿಸಿದರು. ಓಲ್ಡಿನ್‌ಬರ್ಗನ ಪ್ರೋತ್ಸಾಹದಿಂದಾಗಿ ಹತ್ತೊಂಬತ್ತನೆಯ ಶತಕದ ಕೊನೆಯಲ್ಲಿ ಮತ್ತು ಇಪ್ಪತ್ತನೆಯ ಶತಮಾನದ ಆದಿಯಲ್ಲಿ **ಪಂಚತಂತ್ರ**ದಲ್ಲಿ ರಷಿಯದವರಿಗೆ ಆಸಕ್ತಿಯುಂಟಾಯಿತು. ಬಾರನ್ನಿಕೌ ಎಂಬಾತನು ವಿಜ್ಞಾನಶಾಸ್ತ್ರಗಳ ಸದಸ್ಯನಾದಮೇಲೆ ಸಂಸ್ಕೃತದ ಅಭ್ಯಾಸವು ಅಲ್ಲಿ ಬಲವಾಯಿತು. ಹಿಂದಿ, ಬಂಗಾಳಿ, ಮರಾಠಿ, ಪಂಜಾಬಿ- ಮುಂತಾದ ದೇಶಭಾಷೆಗಳ ಚಿಂತನೆಯೂ ಪ್ರಾರಂಭವಾಯಿತು. ಈಗ ಮಹಾಭಾರತದ ಕಡೆಗೆ ಆ ದೇಶದವರ ಮನಸ್ಸು ಹೊರಳಿದೆ. ಇಷ್ಟರಲ್ಲಿ ಹಿಂದಿ-ರಷಿಯನ್, ರಷಿಯನ್-ಹಿಂದಿ ನಿಘಂಟುವೊಂದನ್ನು ಆ ದೇಶದವರು ಪ್ರಕಟಮಾಡುವದರಲ್ಲಿರುತ್ತಾರಂತೆ. ಕೌಟಿಲ್ಯನ **ಅರ್ಥಶಾಸ್ತ್ರದ ಸವ್ಯಾಖ್ಯಾನವಾದ ಅನುವಾದ**ವೊಂದು ಇಷ್ಟರಲ್ಲಿಯೆ ಬೆಳಕಿಗೆ ಬರಲಿದೆಯಂತೆ.

ನಮ್ಮ ದೇಶದಲ್ಲಿ ಈಗೀಗ ರಷ್ಯದವರ ಅನುಕರಣೆಯು ಬೇರೆಬೇರೆಯ ರೀತಿಗಳಿಂದ ಹೆಚ್ಚಾಗುತ್ತಿರುವದು ಕಂಡುಬರುತ್ತಿದೆ. ಆದರೆ ನಾವು ರಷಿಯನ್ ಭಾಷೆಯಲ್ಲಿರುವ ಉತ್ತಮವಿಚಾರದ ಗ್ರಂಥಗಳ ಅಭ್ಯಾಸವನ್ನು ಮಾಡುವದು ಹಾಗಿರಲಿ, ನಮ್ಮ ದೇಶದ ಭಾಷೆಗಳಿಗೆಲ್ಲ ಶಬ್ದಭಂಡಾರವನ್ನೂ ವಿಚಾರಧಾರೆಯನ್ನೂ ಬೆಳೆಯಿಸುವ ದೇವಭಾಷೆಯಾದ ಸಂಸ್ಕೃತದ ಅಭ್ಯಾಸವನ್ನಾದರೂ ಮಾಡುವ ಕಡೆಗೆ ಕಣ್ಣು ಹೊರಳಿಸಬಾರದೆ? ಆ ಭಾಷೆಯಲ್ಲಿರುವ ಸಾಹಿತ್ಯ, ವ್ಯಾಕರಣ, ಅರ್ಥಶಾಸ್ತ್ರ, ವೈದ್ಯ, ಸಂಗೀತ- ಮುಂತಾದ ಶಾಸ್ತ್ರಗಳ ಪರಿಚಯುವನ್ನೂ ವೇದ, ವೇದಾಂಗ, ಸ್ಮೃತಿ, ಪುರಾಣ, ಇತಿಹಾಸ, ದರ್ಶನಗಳು- ಮುಂತಾದ ಉತ್ತಮಸಂಸ್ಕೃತಿಯ ಆಧಾರ ಗ್ರಂಥಗಳ ಪರಿಚಯವನ್ನೂ ಒಂದಿಷ್ಟಾದರೂ ಮಾಡಿಕೊಳ್ಳಬೇಡವೆ?

* * * * *

# 3. ಸಂಸ್ಕೃತಭಾಷೆ

ಅನೇಕ ಕಾರಣಗಳಿಂದ ಸಂಸ್ಕೃತಭಾಷೆಯ ಅಭ್ಯಾಸವು ನಮ್ಮ ದೇಶದಲ್ಲಿ ಹಿಂದಕ್ಕೆ ಬಿದ್ದಿರುತ್ತದೆ. ಆದರೆ ಅಂಥ ಕಾರಣಗಳ ಕೋಟಿಯಲ್ಲಿ ಆ ಭಾಷೆಯಲ್ಲಿರುವ ಯಾವ ದೋಷವೂ ಸೇರಿರುವದಿಲ್ಲ. ಸಂಸ್ಕೃತಭಾಷೆಯು ನಿರ್ದುಷ್ಟವೆಂಬುದು ಹಾಗಿರಲಿ, ಈಗಲೂ ಅದು ಎಲ್ಲಾ ಬಗೆಯಿಂದಲೂ ಪರಿಪೂರ್ಣವಾಗಿರುವ, ವಿಶಾಲವಾದ, ಈಗಿನ ಕಾಲದ ಮಾನವವರ್ಗಕ್ಕೆ ಅತ್ಯಂತ ಅವಶ್ಯವಾದ, ವಿಚಾರಗಳನ್ನು ಒಳಗೊಂಡ ಅತ್ಯುತ್ತಮ ಭಾಷೆಗಳಲ್ಲಿ ಒಂದಾಗಿದೆ. ಅಥವ ಅಗ್ರಸ್ಥಾನಕ್ಕೆ ಅರ್ಹವಾದ ಭಾಷೆಯಾಗಿದೆ -ಎಂಬುದರಲ್ಲಿ ಸಂಶಯವಿಲ್ಲ.

ನಮ್ಮ ದೇಶದಲ್ಲಿ ನಮ್ಮ ಇಡಿಯ ಜನಾಂಗದ ಭಾಷೆಯು ಯಾವದಾಗಿರಬೇಕೆಂಬುದು ಸದ್ಯದಲ್ಲಿ ವಾದಗ್ರಸ್ತವಾದ ವಿಷಯವಾಗಿರುತ್ತದೆ. ರಾಷ್ಟ್ರಘಟನೆಯ ಶಾಸನಕ್ಕೆ ಅನುಸಾರವಾಗಿ 1965ರ ಒಳಗಾಗಿ ಹಿಂದಿಯೇ ಸರಕಾರದ ಭಾಷೆಯಾಗಬೇಕೆಂದು ನಿರ್ಣಯವಾಗಿರುತ್ತದೆ. ಹಿಂದಿಯನ್ನು ಮಾತನಾಡುವವರೂ ರಾಜ್ಯ ಶಾಸನಕ್ಕೆ ಯತ್ನವಿಲ್ಲದೆ ತಲೆಬಾಗಿರುವವರೂ ಹಿಂದಿಯ ವಿಷಯಕ್ಕೆ ಸ್ವಾಭಾವಿಕವಾಗಿ ಉತ್ಸಾಹಶೀಲರೇ ಆಗಿರುತ್ತಾರೆ. ಆದರೆ ದಕ್ಷಿಣ ಭಾರತದಲ್ಲಿ ಕೆಲವು ಜನರು ''ಇಂಗ್ಲಿಷುಭಾಷೆಯೇ ಸರಕಾರದ ಭಾಷೆಯಾಗಿದ್ದುಕೊಂಡಿರಲಿ, ಹಿಂದಿಯು ಆಚರಣೆಗೆ ಬಂದರೆ ಹಿಂದಿಜನರ ವರ್ಚಸ್ಸು ಮಿಕ್ಕವರಮೇಲೆಲ್ಲ ಕೂರಬಹುದು'' ಎಂದು ಹುಯಿಲೆಬ್ಬಿಸಿರುತ್ತಾರೆ. ಉತ್ತರದೇಶದಲ್ಲಿಯೂ ಬಂಗಾಳಿಯೇಕೆ ಹಿಂದಿಗೆ ತಲೆಬಾಗಬೇಕು? -ಎಂದು ಕೇಳುವವರಿದಾರೆ. ಪಂಜಾಬಿನಲ್ಲಿ ಪಂಜಾಬಿಯನ್ನು ಹಿಂದಿಯ ಜೊತೆಗೆ ಕಲಿಯುಬೇಕೆನ್ನುವ ಅವಕಾಶವನ್ನು ಕಲ್ಪಿಸಬೇಕಾಗಿಬಂದಿದೆ. ಮೈಥಿಲಿ, ಅವಿಕ, ರಾಜಸ್ಥಾನಿ- ಮುಂತಾದ ಭಾಷೆಗಳವರು ತಮ್ಮ ಮಾತೃಭಾಷೆಯು ಹಿಂದಿಯೆಂದು ಎಣಿಸುವದು ತಪ್ಪೆಂದು ಕೂಗುತ್ತಿದ್ದಾರೆ.'' ಈ ಗದ್ದಲದಲ್ಲಿ ಸಂಸ್ಕೃತವನ್ನೇಕೆ ರಾಷ್ಟ್ರಭಾಷೆಯಾಗಿ ಮಾಡಬಾರದು? ಭಾಷಾವಾರುಪ್ರಾಂತಗಳನ್ನು ಏರ್ಪಡಿಸಿದಂದಿನಿಂದ ದೇಶಭಾಷೆಗಳ ಭಕ್ತಿಯ ನೆಪದಲ್ಲಿ ಜನರಿಗೆ ಮಾರಾಮಾರಿಯು ಕೂಡ ಆಗಿರುತ್ತದೆ. ಸಂಸ್ಕೃತಭಾಷೆಯನ್ನು ರಾಷ್ಟ್ರಭಾಷೆಯಾಗಿ ಮಾಡಿದರೆ ಈ ಗದ್ದಲವೆಲ್ಲ ನಿಂತುಹೋಗಬಹುದಲ್ಲ!'' -ಎಂದು ಸಂಸ್ಕೃತಾಭಿಮಾನಿಗಳು ಅನೇಕರು ಒಂದು ಚಳುವಳಿಯನ್ನು ಆರಂಭಿಸಿರುತ್ತಾರೆ. ಇದಕ್ಕೆ ಪೋಷಕವಾಗುವಂಥ ಅಭಿಪ್ರಾಯಗಳನ್ನು ಅನೇಕರು ಆಗಿಂದಾಗ್ಗೆ ಕೊಡುತ್ತಾ ಬಂದಿರುತ್ತಾರೆ. ಆಂಧ್ರದೇಶದ

ಸೀತಾರಾಮಯ್ಯನವರು ಐದಾರುವರ್ಷಗಳ ಹಿಂದೆಯೇ ಸಂಸ್ಕೃತದ ಪರವಾಗಿ ವಾದಿಸಿದ್ದರು. ಕೇರಳದ ಪಣಿಕ್ಕರ್ ಎಂಬವರು ಹಿಂದಿಯು ಭಾರತದ ಜನಸಾಮಾನ್ಯ ಭಾಷೆಯಾಗಬಹುದು; ಆದರೆ ಸಂಸ್ಕೃತವೇ ನಮ್ಮ ರಾಷ್ಟ್ರಭಾಷೆಯಾಗುವದಕ್ಕೆ ಅರ್ಹವಾದದ್ದು ಎಂದಿದಾರಂತೆ. ನಮ್ಮ ದೇಶದಲ್ಲಿ ಜನರಲ್ ಕಾರಿಯಪ್ಪನವರು 'ಸಂಸ್ಕೃತವನ್ನು ಒತ್ತಾಯದಿಂದ ನಮ್ಮ ಹುಡುಗರಿಗೆ ಕಲಿಸಬೇಕು' ಎಂದಿದಾರಂತೆ. ಸಂಸ್ಕೃತಭಾಷಾ ಕಮಿಷನ್ನಿನ ಸದಸ್ಯರಲ್ಲೊಬ್ಬರು ಪಶ್ಚಿಮಭಾರತದಲ್ಲಿರುವ ಭಾಷಾ ಸಮಸ್ಯೆಗಳಿಗೆ ಸಂಸ್ಕೃತವು ರಾಷ್ಟ್ರಭಾಷೆಯಾಗುವದೇ ಪರಿಹಾರವೆಂದು ಅನೇಕರು ಅಭಿಪ್ರಾಯಪಟ್ಟಿರುವರೆಂದು ಹೇಳಿದ್ದಾಗಿ ತಿಳಿದುಬಂದಿದೆ. ಬೊಂಬಾಯಿ ಗವರ್ನರರಾದ ಶ್ರೀ ಪ್ರಕಾಶರವರೂ ಇಂಥ ಸಾಕ್ಷ್ಯವನ್ನು ಕೊಟ್ಟವರಲ್ಲಿ ಒಬ್ಬರೆಂದು ಆ ಸದಸ್ಯರು ಹೇಳಿದ್ದಾರಂತೆ. ಹೀಗೆ ಉನ್ನತಸ್ಥಾನದಲ್ಲಿರುವ ಅನೇಕರು ಸಂಸ್ಕೃತವನ್ನೇ ರಾಷ್ಟ್ರಭಾಷೆಯಾಗಿ ಮಾಡಬೇಕೆಂದೂ ಅವಶ್ಯವಾದರೆ ಹಿಂದಿ ಇಂಗ್ಲಿಷುಗಳನ್ನು ರಾಷ್ಟ್ರ ಭಾಷೆಗಳಾಗಿ ಕೆಲವು ಜನರಿಗಾಗಿ ಇಟ್ಟುಕೊಳ್ಳಬಹುದೆಂದೂ ಕೆಲವರು ಹೇಳಹೊರಟಿರು ತ್ತಾರೆ. ಈ ವಿಷಯದಲ್ಲಿ ಅಖಿಲಭಾರತ ಸಂಸ್ಕೃತ ರಾಷ್ಟ್ರಭಾಷಾಸಮ್ಮೇಲನವೊಂದು ಇಷ್ಟರಲ್ಲಿಯೇ (ಮೇ 17-18-1958ರಲ್ಲಿ) ಕಲಕತ್ತೆಯಲ್ಲಿ ಜರುಗಲಿರುವದಂತೆ.

ಈ ಪೀಠಿಕೆಯನ್ನು ನಾನು ಇಲ್ಲಿ ಬರೆದಿರುವದು ರಾಜಕಾರಣದ ಚಳುವಳಿ ಯಲ್ಲಿ ಸೇರಿರುವವರ ದೃಷ್ಟಿಯಿಂದಲ್ಲಷ್ಟೆ. ಸಂಸ್ಕೃತವನ್ನು ಈಗಲೂ ಭಾರತದ ಜನರು ಇಷ್ಟೊಂದು ಆದರದಿಂದ ಕಾಣುವದಕ್ಕೆ ಆ ಭಾಷೆಯಲ್ಲಿ ಯಾವ ಹೆಚ್ಚುಗಾರಿಕೆ ಯಿರಬೇಕು? ಎಷ್ಟೋ ಕಾಲದಿಂದ ತನ್ನನ್ನು ಮಾತಾಡುವವರ ಸಂಖ್ಯೆಯು ಕಡಿಮೆಯಾಗುತ್ತಲೇ ಇದ್ದರೂ, ಸರಕಾರದವರ ಪ್ರೋತ್ಸಾಹವು ತನಗೆ ಒಂದಿಷ್ಟೂ ಇಲ್ಲದಿದ್ದರೂ, ಎದುರಾಳಿಯಾದ ಫಾರಸಿ, ಇಂಗ್ಲಿಷು, ಹಿಂದಿ- ಮುಂತಾದವುಗಳು ಬಹಿರಂಗವಾದ ಪ್ರೋತ್ಸಾಹದಿಂದ ಮೆರೆಯುತ್ತಿದ್ದರೂ, ಈ ಭಾಷೆಯು ಇನ್ನೂ ಉಳಿದುಕೊಂಡದ್ದೇ ಅಲ್ಲದೆ, ಈಗಲೂ ಭಾರತೀಯಸಂಸ್ಕೃತಿಯಲ್ಲಿ ಉಚ್ಚತರಗತಿಗೆ ಸೇರಿದ ಎಲ್ಲರ ಮೆಚ್ಚುಗೆಯನ್ನೂ ಪಡೆದಿರುವದಕ್ಕೆ ಕಾರಣವಾಗಿರುವ ಅದರಲ್ಲಿರುವ ಮಹತ್ತು ಎಂಥದ್ದುಷ್ಟೆ? ಇದನ್ನು ಇಲ್ಲಿ ಒಂದಿಷ್ಟು ನಾವು ವಿಮರ್ಶಿಸೋಣ.

1. ಸಂಸ್ಕೃತವೆಂಬುದು ಈ ಲೋಕದ **ಅತ್ಯಂತ ಪುರಾತನ ಭಾಷೆಗಳಲ್ಲಿ ಒಂದಾಗಿರುತ್ತದೆ.** ಭೂಮಂಡಲದ ಅತ್ಯಂತ ಪುರಾತನ ಇತಿಹಾಸಕ್ಕೆ ಬೇಕಾದ ವಿಷಯಗಳನ್ನು ಅಡಗಿಸಿಕೊಂಡಿರುವ ಭಾಷೆಯದು. ಆ ಭಾಷೆಯಲ್ಲಿ ಭೂಮಂಡಲದ

ಧರ್ಮಗಳ ವಿಮರ್ಶೆಯನ್ನು ಮಾಡುವದಕ್ಕೆ ಬೇಕಾದ **ವೇದ**ಗಳೆಂಬ ಧರ್ಮಗ್ರಂಥಗಳಿವೆ; ನಿರುಕ್ತಾದಿ **ವೇದಾಂಗಗ್ರಂಥ**ಗಳಿವೆ. ಪ್ರಪಂಚದ ತತ್ತ್ವಶಾಸ್ತ್ರಗಳಲ್ಲಿ ಅದ್ವಿತೀಯವೆನಿಸಿಕೊಂಡಿರುವ ವೇದಾಂತಕ್ಕೆ ಮೂಲವಾದ **ಉಪನಿಷತ್ತು**ಗಳಿವೆ. ಹೀಗೆ **ಐತಿಹಾಸಿಕ** ದೃಷ್ಟಿಯಿಂದಲೂ **ಧಾರ್ಮಿಕ** ದೃಷ್ಟಿಯಿಂದಲೂ **ತತ್ತ್ವಶಾಸ್ತ್ರ**ದೃಷ್ಟಿಯಿಂದಲೂ ಆ ಭಾಷೆಯಲ್ಲಿ ಈಗಲೂ ನಾವು ತಿಳಿದುಕೊಳ್ಳತಕ್ಕ ಅನೇಕ ವಿಷಯಗಳಿರುತ್ತವೆ.

2. ಇದರ ಜೊತೆಗೆ **ಮನ್ವಾದಿಶಾಸ್ತ್ರಗಳೂ ಸ್ಮೃತಿಗಳೂ** ಸಂಸ್ಕೃತಭಾಷೆಯಲ್ಲಿರುತ್ತವೆ. ಅದರಲ್ಲಿ ವರ್ಣಿಸಿರುವ ಸಮಾಜರಚನೆಯ ಆಧಾರದಿಂದಲೇ ಈಗಿನ ಹಿಂದೂಜನತೆಯು ಜನ್ಮವನ್ನು ತಾಳಿರುವದರಿಂದ **ಸಮಾಜಶಾಸ್ತ್ರ**ದೃಷ್ಟಿಯಿಂದಲೂ ಸಂಸ್ಕೃತವನ್ನು ಅಭ್ಯಾಸಮಾಡತಕ್ಕದ್ದು ಅವಶ್ಯವಾಗಿರುತ್ತದೆ.

3. ಸಂಸ್ಕೃತದಲ್ಲಿ ಹುಟ್ಟಿರುವ **ನಿರುಕ್ತವೂ ವ್ಯಾಕರಣವೂ** ಭಾಷೆಗಳ ಅಭ್ಯಾಸಕ್ಕೆ ಅಡಿಗಲ್ಲಾಗಿರುತ್ತವೆ. ಭಾಷೆಗಳೆಲ್ಲ ಧಾತುಗಳಿಂದಲೂ ಮೂಲಪ್ರಾತಿಪದಿಕಗಳಿಂದಲೂ ಉತ್ಪನ್ನವಾಗಿವೆ - ಎಂಬ ತತ್ತ್ವವನ್ನು ಪಾಶ್ಚಾತ್ಯರು ಪಾಣಿನೀಯ ವ್ಯಾಕರಣದಿಂದ ಅರಿತುಕೊಂಡರು. ವಿಶಾಲವಾದ ಭಾಷೆಯನ್ನು ಅಭ್ಯಾಸಮಾಡಿ ಶಬ್ದವ್ಯುತ್ಪತ್ತಿಯನ್ನು ಮಿಗಿಲಿಲ್ಲದಷ್ಟು ನಿರ್ದುಷ್ಟರೀತಿಯಲ್ಲಿ ತಿಳಿಸಿರುವದು ಈ ಭಾಷೆಯಲ್ಲಿಯೇ. ಪಾಶ್ಚಾತ್ಯರು ಶೋಧಿಸಿರುವ **ತುಲನಾತ್ಮಕಧರ್ಮವಿಚಾರ, ತುಲನಾತ್ಮಕಭಾಷಾಶಾಸ್ತ್ರ**- ಇವೆರಡೂ ಈ ಭಾಷೆಯ ಕೊಡುಗೆಗಳೆನ್ನಬಹುದು.

4. ಸಂಸ್ಕೃತಭಾಷೆಯಲ್ಲಿ **ಅತ್ಯಂತವಿಸ್ತೃತವಾದ ವಾಙ್ಮಯವು** ಇರುತ್ತದೆ. ಆ ಭಾಷೆಯ ಅಭ್ಯಾಸವನ್ನು ಆಂಗ್ಲರು ತಡೆಗಟ್ಟಿದಮೇಲೂ ಅದರಲ್ಲಿ ಗ್ರಂಥಗಳು ಈವರೆಗೂ ನಿರ್ಮಾಣವಾಗುತ್ತಲೇ ಇರುತ್ತವೆ. ಕಾವ್ಯಗಳು, ನಾಟಕ, ಸಂಗೀತನಾಟ್ಯಾದಿಕಲಾವಿದ್ಯೆಗಳು, ಜ್ಯೋತಿಷ, ಗಣಿತ, ನ್ಯಾಯ, ವ್ಯವಹಾರ, ವೈದ್ಯ ರಾಜತಂತ್ರ- ಮುಂತಾದ ವಿಷಯಗಳನ್ನು ಕುರಿತ ಗ್ರಂಥಗಳು ಹೇರಳವಾಗಿ ಆ ಭಾಷೆಯಲ್ಲಿ ಹುಟ್ಟಿವೆ. ಪ್ರಾಚೀನಪುಸ್ತಕಸಂಗ್ರಹಾಲಯಗಳಲ್ಲಿ ಕೇಳುವರಿಲ್ಲದೆ ಬಿದ್ದುಕೊಳೆಯುತ್ತಿರುವ ಗ್ರಂಥಗಳ ವಿವರವು ಇನ್ನೂ ಸರಿಯಾಗಿ ಯಾರಿಗೂ ತಿಳಿದಿರುವದಿಲ್ಲಷ್ಟೆ.

5. ಭಾರತದ **ಸಂಸ್ಕೃತಿಯ ಇತಿಹಾಸ**ವನ್ನು ತಿಳಿಯಬೇಕೆನ್ನುವವರು **ಮಹಾಭಾರತ, ರಾಮಾಯಣ, ಪುರಾಣಗಳು**- ಮುಂತಾದ ಗ್ರಂಥಗಳನ್ನು ಅವಶ್ಯವಾಗಿ ನೋಡಬೇಕಾಗುತ್ತದೆ. ಆ ಗ್ರಂಥಗಳಲ್ಲಿರುವ ಉಪದೇಶಗಳು ಈವರೆಗೂ

ಭಾರತದೇಶದ ಜನರ ಹೃದಯದಲ್ಲಿ ಸಂಸ್ಕಾರವನ್ನುಂಟುಮಾಡಿ ನೆಲೆಸಿರುತ್ತವೆ. ಆದ್ದರಿಂದಲೇ ಪಾಶ್ಚಾತ್ಯರೂ ಇವನ್ನು ತಮ್ಮ ಭಾಷೆಗೆ ಪರಿವರ್ತನೆಮಾಡಿಕೊಳ್ಳುತ್ತಿದ್ದಾರೆ.

6. ಭಾಷೆಯನ್ನು ಜನರು ಮಾತನಾಡುವದಿಲ್ಲವಾದ್ದರಿಂದ ಇದು 'ಮೃತಭಾಷೆ' ಎಂದು ಕೆಲವರು ಆಕ್ಷೇಪಿಸುವದುಂಟು. ಆದರೆ ಈಗಲೂ ಭಾರತದ ಬೇರೆಬೇರೆಯ ಪ್ರಾಂತಗಳ ಪಂಡಿತರುಗಳ ಸಮಾಗಮವಾದಾಗ **ಸಂಸ್ಕೃತದಲ್ಲಿಯೇ ಸಂಭಾಷಣೆ** ನಡೆಯುತ್ತಿದೆ. ಸಂಸ್ಕೃತಭಾಷೆಯಿಂದ ಪ್ರಾಕೃತ, ಪಾಳಿ, ಅಪಭ್ರಂಶ, ಹಿಂದಿ, ಉರ್ದು, ಬಂಗಾಳಿ, ಗುಜರಾತಿ, ಮರಾಠಿ- ಮುಂತಾದ **ಸಂಸ್ಕೃತಜನ್ಯ ಭಾಷೆಗಳು** ಉಂಟಾಗಿರುತ್ತವೆ. ನೇರಾಗಿ ಈ ಭಾಷೆಯಿಂದಲೇ ಹುಟ್ಟದೆ ಇರುವ ಕನ್ನಡ, ತಮಿಳು, ತೆಲುಗು, ಮಲಯಾಳ- ಮುಂತಾದ ಅನೇಕ ಭಾಷೆಗಳು **ಸಂಸ್ಕೃತಪುಷ್ಟ**ವಾಗಿವೆ. ಆ ಭಾಷೆಗಳಲ್ಲಿರುವ ಉದಾತ್ತವಿಚಾರಗಳಿಗೆ ಬೇಕಾದ ವಿಷಯಗಳ ಗ್ರಂಥಗಳು ಸಂಸ್ಕೃತದ ಸಹಾಯದಿಂದಲೇ ಬೆಳೆದು ಬಂದಿರುತ್ತವೆ. ಹೀಗೆ ದೇಶಭಾಷೆಗಳಿಗೆ **ಶಬ್ದಭಂಡಾರವನ್ನು ಒದಗಿಸುತ್ತಿರುವ ಭಾಷೆ** ಸಂಸ್ಕೃತವೇ ಆಗಿದೆ.

7. **ಹೊಸ ಶಬ್ದಗಳನ್ನು ನಿರ್ಮಾಣಮಾಡುವ ಶಕ್ತಿಯು** ಸಂಸ್ಕೃತಕ್ಕೆ ಈಗಲೂ ಎಂದಿನಂತೆ ಇದ್ದುಕೊಂಡಿದೆ. ವ್ಯಾವಹಾರಿಕವಿಷಯಗಳನ್ನು ಲೀಲಾಜಾಲವಾಗಿ ವರ್ಣಿಸುವ ಘನಪಂಡಿತರು ಈಗಲೂ ಸಂಸ್ಕೃತಗ್ರಂಥಗಳನ್ನು ಬರೆಯುತ್ತಿದ್ದಾರೆ. ಈಗಿನ ಸರಕಾರದ ಶಾಸನದಲ್ಲಿ **ರಾಜಕೀಯವ್ಯವಹಾರಕ್ಕೆ** ಬೇಕಾದ ಅನೇಕ ಹೊಸ ಪಾರಿಭಾಷಿಕಶಬ್ದಗಳನ್ನು ಸಂಸ್ಕೃತವೇ ಒದಗಿಸಿಕೊಟ್ಟಿರುತ್ತದೆ. **ವಿಜ್ಞಾನಶಾಸ್ತ್ರ** ಪಾರಿಭಾಷಿಕಶಬ್ದಗಳನ್ನು ಈ ಭಾಷೆ ಒದಗಿಸಬಲ್ಲದು; ಇಂಗ್ಲಿಷನ್ನೂ ಸಂಸ್ಕೃತವನ್ನೂ ಬಲ್ಲ ವಿದ್ವಾಂಸರುಗಳು ಭೌತಿಕವಿಜ್ಞಾನದ ಅತ್ಯಂತ ಗಹನವಿಚಾರಗಳನ್ನು ಕೂಡ ಈ ಭಾಷೆಯಲ್ಲಿ ವಿಶದಗೊಳಿಸುವ ಗ್ರಂಥಗಳನ್ನೂ ಪತ್ರಿಕೆಗಳನ್ನೂ ಪ್ರಕಾಶಗೊಳಿಸುತ್ತಿದಾರೆ.

8. ಹಿಮಾಲಯದಿಂದ ಕನ್ಯಾಕುಮಾರಿಯವರೆಗಿನ ಇಡಿಯ ಭಾರತ ದೇಶದ **ಹಿಂದೂಜನರನ್ನು ಒಂದುಗೂಡಿಸಿರುವ ಭಾಷೆ**ಯೆಂದರೆ ಸಂಸ್ಕೃತವೇ. ಯಾವ ಪ್ರಾಂತದವರೇ ಆಗಲಿ ಭಾರತದ ಮತ್ತೊಂದು ಪ್ರಾಂತಕ್ಕೆ ಹೋದರೆ ತಮ್ಮ ಸಂಸ್ಕೃತಿಯ ಹೆಗ್ಗುರುತುಗಳಾದ ಕ್ಷೇತ್ರಗಳು, ತೀರ್ಥಗಳು, ದೇವಾಲಯಗಳು- ಮುಂತಾದವುಗಳನ್ನು ಕಂಡಾಗ ಭಾರತವೆಲ್ಲ ಒಂದೇ ದೇಶ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಅವರ ಮತಾಚರಣೆಗಳೆಲ್ಲ ಇನ್ನೂ ಸಂಸ್ಕೃತಮೂಲಕವಾಗಿಯೇ ನಡೆಯುತ್ತಿವೆ.

9. **ಸರ್ವಮತಸಾಮರಸ್ಯ, ಸರ್ವಸಹಾನುಭೂತಿ, ಅಹಿಂಸೆ-** ಮುಂತಾದ ಉದಾತ್ತಭಾವನೆಗಳನ್ನು ಹೃದಯದಲ್ಲಿ ಎಬ್ಬಿಸುವ ಮೂಲಭಾಷೆ ಎಂದರೆ ಸಂಸ್ಕೃತವೇ. ಈ ಭಾಷೆಯಲ್ಲಿರುವ ತತ್ತ್ವಗ್ರಂಥಗಳಲ್ಲಿಯೂ ನೀತಿಗ್ರಂಥಗಳಲ್ಲಿಯೂ ಕಾಣಬರುವ **ವಿಶ್ವವ್ಯಾಪಕಸಂದೇಶ**ವೂ ಎಲ್ಲಾ ಜನರನ್ನೂ ಆಕರ್ಷಣಗೊಳಿಸುವಂಥದ್ದಾಗಿದೆ. **ಮನುಷ್ಯನೂ ಪ್ರಾಣಿಗಳೂ ಪರಮಾತ್ಮನ ಅಂಶಗಳೇ** ಆಗಿರುತ್ತಾರೆಂದೂ, ಇಡಿಯ **ವಿಶ್ವವೇ ಪರಮಾತ್ಮರೂಪದಿಂದ ಒಂದಾಗಿರುತ್ತದೆ**ಯೆಂದೂ ಉಪದೇಶಿಸಿರುವ ವಿಶಾಲತತ್ತ್ವವು ಈ ಭಾಷೆಯಲ್ಲಲ್ಲದೆ ಮತ್ತೆ ಯಾವ ಭಾಷೆಯಲ್ಲಿಯೂ ಅಷ್ಟು ಸುಸ್ಪಷ್ಟವಾಗಿ ಇರುವದಿಲ್ಲಫ.

ಹೀಗೆ ಪ್ರಾಚೀನತೆಯಿಂದಲೂ, ವೈಶಾಲ್ಯದಿಂದಲೂ, ಗಾಂಭೀರ್ಯದಿಂದಲೂ, ಶಬ್ದವೈಪುಲ್ಯದಿಂದಲೂ, ಸರ್ವಸಮತ್ವಭಾವನೋತ್ತೇಜಕತೆಯಿಂದಲೂ ಕೂಡಿರುವ ಈ ದಿವ್ಯವಾಣಿಯನ್ನು ನಮ್ಮ ಕೇಂದ್ರಸರಕಾರವು ತನ್ನ ವ್ಯಾವಹಾರಿಕಭಾಷೆಯಾಗಿ ಅಂಗೀಕರಿಸಿದರೆ ಅದರ ಘನತೆಯು ಇನ್ನಷ್ಟು ಹೆಚ್ಚುವದು. ಭೂಮಂಡಲದ ಜನರು ಆದರಿಸಿದರೆ ಅವರೆಲ್ಲರೂ ಪಶುತ್ವದಿಂದ ಮಾನವತ್ವಕ್ಕೂ ಮಾನವತ್ವದಿಂದ ದೇವತ್ವಕ್ಕೂ ಏರಿಸುವ ಸಾಧನವೊಂದು ಅವರಿಗೆ ದೊರಕುವದು. ಭಾರತದ ಜನರು ಅಂಗೀಕರಿಸಿದರಂತೂ ಪ್ರಪಂಚದಲ್ಲಿ ಅತ್ಯುತ್ತಮವಾದ ಅತ್ಯಂತಪ್ರಾಚೀನಸಂಸ್ಕೃತಿ ಪ್ರಭೇದವೊಂದನ್ನು ಉಳಿಸಿಕೊಂಡು ಉಜ್ಜೀವನಗೊಳಿಸಿಕೊಂಡು ಸಕಲ ಪುರುಷಾರ್ಥಗಳನ್ನೂ ಪಡೆಯಬಹುದಾಗುವದು.

* * * * *

# 4. ಸಂಸ್ಕೃತದ ವಿಷಯಕ್ಕೆ ಅನಾದರ

ಸಂಸ್ಕೃತಭಾಷೆಯ ವಿಷಯಕ್ಕೆ ಹಿಂದಿನ ಸಂಚಿಕೆಯಲ್ಲಿ ನಾನು ಬರೆದಿರುವದನ್ನು ವಾಚಕರು ಇನ್ನೊಮ್ಮೆ ದಯವಿಟ್ಟು ಓದಬೇಕೆಂದು ಕೇಳಿಕೊಳ್ಳುತ್ತೇನೆ. ಶ್ರುತಿಸ್ಮೃತಿಪುರಾಣಧರ್ಮಶಾಸ್ತ್ರಗಳೇ ಮುಂತಾದ ವೈದಿಕವಾಙ್ಮಯಕ್ಕೂ, ಅರ್ಥಶಾಸ್ತ್ರ, ವೈದ್ಯವಿದ್ಯೆ, ಧಾತುಶಾಸ್ತ್ರವೇ ಮುಂತಾದ ಲೌಕಿಕವಾಙ್ಮಯಕ್ಕೂ ಆಗರವಾಗಿರುವ ಆ ದಿವ್ಯವಾಣಿಯ ವಿಷಯಕ್ಕೆ ನಮ್ಮೆಲ್ಲರಿಗೂ ಆದರವುಂಟಾಗುವಂತೆ ವಾಗ್ದೇವಿಯ ಪ್ರೇರಣೆಯಾಗಲೆಂದು ಹಾರೈಸುತ್ತೇನೆ.

ಸಂಸ್ಕೃತದ ವಿಷಯಕ್ಕೆ ಈಗ್ಗೆ ನಮ್ಮಗಳಿಗೆ ಇಷ್ಟೊಂದು ಅನಾದರವಾಗಿರುವದಕ್ಕೆ ಕಾರಣವೇನು? ಇದನ್ನು ಸ್ವಲ್ಪ ವಿಚಾರಿಸುವದು ಅವಶ್ಯವಾಗಿರುತ್ತದೆ. ನಮ್ಮ ರಾಷ್ಟ್ರಭಾಷೆಯು ಯಾವದಾಗಿರಬೇಕು? ಒಂದು ದೇಶ ಭಾಷಾಪ್ರಾಂತಕ್ಕೂ ಇನ್ನೊಂದು ಪ್ರಾಂತಕ್ಕೂ, ಮತ್ತು ಬೇರೆಬೇರೆಯ ಪ್ರಾಂತಗಳಿಗೂ ಕೇಂದ್ರಶಾಸನಸ್ಥಾನಕ್ಕೂ ಯಾವ ಭಾಷೆಯಲ್ಲಿ ವ್ಯವಹಾರವು ನಡೆದರೆ ಸುಕರವಾದೀತು? -ಎಂಬ ಪ್ರಶ್ನೆಯು ಈಗ್ಗೆ ಅನೇಕರನ್ನು ವಿಚಾರಕ್ಕೆ ಕೆಡವಿರುತ್ತದೆ. 'ಇಂಗ್ಲಿಷೇ ಇರಲಿ' ಎಂದು ದಕ್ಷಿಣದವರು ಹೇಳಿದರೆ, 'ಹಿಂದಿಯೇ ಇರಬೇಕು, ಅದು ಬಹುಜನರ ಭಾಷೆಯಾಗಿದೆ' ಎಂದು ಉತ್ತರದವರು ಎನ್ನುತ್ತಿದಾರೆ. ದೇಶಭಾಷೆಗಳ ದುರಭಿನಿವೇಶದಿಂದ ಆಗಿರುವ ಪರಸ್ಪರ ರಾಗದ್ವೇಷಗಳು ಹಿಮ್ಮೆಟ್ಟುವದಕ್ಕೆ ಸಂಸ್ಕೃತವನ್ನು ರಾಷ್ಟ್ರಭಾಷೆಯನ್ನಾಗಿ ಮಾಡುವದೇ ಮದ್ದು- ಎಂದು ಈ ನಡುವೆ ಸಂಸ್ಕೃತಾಭಿಮಾನಿಗಳು ಘೋಷಿಸುವದಕ್ಕೆ ಆರಂಭಿಸಿರುತ್ತಾರೆ. **'ಅಖಿಲ ಭಾರತ ಸಂಸ್ಕೃತ ರಾಷ್ಟ್ರಭಾಷಾ ಸಮ್ಮೇಳನವು'** ಈ ಮೇ 17-18 ತಾರೀಖುಗಳಲ್ಲಿ ಕಲಕತ್ತೆಯ ಸಕಲವಿದ್ಯಾಲಯ ಸಂಸ್ಥಾಸಭಾಮಂಟಪದಲ್ಲಿ (ಯೂನಿರ್ವಸಿಟಿ ಇನ್ಸ್ಟಿಟ್ಯೂಟ್ ಹಾಲ್) ಭರತಖಂಡದ ಸನ್ಮಾನ್ಯ ಮಹಾತ್ಮರಾದ ಶ್ರೀ ಸೀತಾರಾಮದಾಸ ಓಂಕಾರಾನಂದಜಿಯವರ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ನಡೆಯಿತಾಗಿ ತಿಳಿಯಬಂದಿದೆ.[1] ''ಭರತಖಂಡದಲ್ಲೆಲ್ಲ ಜಾತಿನಿರ್ವಿಶೇಷವಾಗಿ ಸರ್ವಸಮಾದೃತವಾಗಿರುವ ಅತ್ಯಂತ ಪ್ರಾಚೀನಭಾಷೆಯಾದ ಸಾಂಗರಹಸ್ಯವೇದ, ಕಾವ್ಯ, ಪುರಾಣ, ದರ್ಶನ, ಸ್ಮೃತಿ, ತಂತ್ರ, ಜ್ಯೋತಿಷ, ಗಾಂಧರ್ವಶಿಲ್ಪಕಲಾ ಶಾಸ್ತ್ರಾಯುರ್ವೇದಧನುರ್ವೇದವಿಜ್ಞಾನದಂಡನೀತಿವಾರ್ತಾಶಾಸ್ತ್ರಾದಿ ಸರ್ವವಿದ್ಯಾ ವಿಭಾಗ ಸಮೃದ್ಧವಾಗಿರುವ, ಸಕಲ ಭಾಷೆಗಳಿಗೂ ಮಾತೃರೂಪಿಯಾಗಿರುವ ಪ್ರಾಚೀನಕಾಲದಲ್ಲಿ ಶಾಸನ ದಂಡನೀತಿಗೆ ಉಪಯೋಗವಾಗಿರುತ್ತಿದ್ದ, ಚಾರ್ವಾಕಬೌದ್ಧ ಜೈನಾದಿ ಪ್ರಗತಿವಾದಪರಗಳಾದ ಮತ್ತು ಭಕ್ತಿಮುಕ್ತಿಪರಗಳಾದ ಶಾಸ್ತ್ರಗಳಿಂದ ತುಂಬಿರುವ, ಮತ್ತು ಶೀಲಚಾರಿತ್ರ್ಯಪಾವಿತ್ರ್ಯಾದಿಗಳಿಗೆ ಪ್ರೋತ್ಸಾಹಕವಾಗಿರುವ ಈ ಭಾಷೆಯೇ ರಾಷ್ಟ್ರಭಾಷೆಯಾಗಿರತಕ್ಕದ್ದು''- ಎಂದು ಆ ಸಮ್ಮೇಳನದವರು ಐಕಮತ್ಯದಿಂದ ತೀರ್ಮಾನಿಸಿದರಂತೆ. ಸಂಸ್ಕೃತವು ರಾಷ್ಟ್ರಭಾಷೆಯಾಗಿರಬೇಕೆಂದು

---

1. ಕಲಕತ್ತೆಯಲ್ಲಿ ಪ್ರಕಟವಾಗುತ್ತಿರುವ Truth ಪತ್ರಿಕೆಯ ಮೇ 23, 30 ನೆಯ ಸಂಚಿಕೆಗಳನ್ನು ನೋಡಿರಿ. ಅದರಲ್ಲಿರುವ ಲೇಖನಗಳನ್ನು ಇಲ್ಲಿ ನಾನು ಆಧಾರವಾಗಿ ಉಪಯೋಗಿಸಿಕೊಂಡಿರುತ್ತೇನೆ.

ಕೇಂದ್ರಸರಕಾರದವರು ಒಪ್ಪಲಿ, ಒಪ್ಪದಿರಲಿ, ನನ್ನ ಪ್ರಕೃತವಿಚಾರಕ್ಕೆ ಅದು ಸಂಬಂಧಪಟ್ಟದ್ದಲ್ಲ. ಹಿಂದಿನ ಲೇಖನದಲ್ಲಿ ನಾನು ಹೇಳಿರುವಂತೆ ಅನೇಕ ಸದ್ಗುಣ ಸಂಪನ್ನವಾಗಿರುವ ಈ ಭಾಷೆಯು ಜನರ ಅನಾದರಕ್ಕೆ ಹೇಗೆ ಕಾರಣವಾಯಿತು? ಈಗ ಈ ಅನಾದರಣೆಯನ್ನು ತಪ್ಪಿಸಿ ಈ ಸರ್ವೋತ್ತಮ ಭಾಷೆಯ ಸದುಪಯೋಗ ವನ್ನು ನಾವು ಮಾಡಿಕೊಳ್ಳುವದು ಸಾಧ್ಯವೆ? ಇದನ್ನು ಇಲ್ಲಿ ವಿಚಾರಿಸುವದಿಷ್ಟೇ ನನ್ನ ಉದ್ದೇಶ.

ಶ್ರೀ ಶ್ರೀ ಓಂಕಾರಾನಂದಜಿಯವರೂ ಸ್ವಾಗತಸಮಿತಿಯ ಅಧ್ಯಕ್ಷ ಡಾ|| ಸೇನಗುಪ್ತರೂ ಹೇಳಿರುವಂತೆ ಮಹಮ್ಮದೀಯರೂ ಬ್ರಿಟಿಷರೂ ತಮ್ಮ ತಮ್ಮ ರಾಜ್ಯ ಭಾರವು ಸಲೀಸಾಗಿ ಸಾಗುವದಕ್ಕೆ ಅನುಕೂಲವಾಗಿರಲೆಂದು ಅರಬ್ಬಿ, ಫಾರಸಿ, ಇಂಗ್ಲಿಷು-ಭಾಷೆಗಳ ಅಭ್ಯಾಸವನ್ನು ನಮ್ಮ ದೇಶದವರ ಮನಸ್ಸಿಗೆ ಹತ್ತಿಸಿದರು. ಮನುಷ್ಯನಿಗೆ ಸ್ವಾಭಾವಿಕವಾಗಿ ಧರ್ಮಮೋಕ್ಷಗಳಿಗಿಂತಲೂ ಅರ್ಥಕಾಮಗಳ ಕಡೆಗೇ ಮನಸ್ಸಿನ ಒಲವು ಇರುತ್ತದೆ. ಏಕೆಂದರೆ 'ಇಚ್ಛಾದ್ವೇಷಗಳಿಂದೆದ್ದಿರುವ ದ್ವಂದ್ವಮೋಹವು ಹುಟ್ಟಿದ ಪ್ರಾಣಿಗಳನ್ನು ಆವರಿಸಿಕೊಂಡಿರುತ್ತದೆ' ಎಂದು ಗೀತಾಚಾರ್ಯನು ಅಪ್ಪಣೆಕೊಡಿಸಿರು ತ್ತಾನೆ. ಆದ್ದರಿಂದ ಆಯಾ ಕಾಲದ ಸರಕಾರದವರ ಪ್ರಲೋಭನೆಗೆ ಒಳಗಾದ ಭಾರತನಿವಾಸಿಗಳು ಆಯಾ ಕಾಲದ ಪ್ರಚಲಿತಭಾಷೆಯ ಪ್ರಾವೀಣ್ಯಕ್ಕೂ ಅದರಿಂದಾಗುವ ಐಹಿಕಸುಖಕ್ಕೂ ಬಾಯಿ ನೀರು ಕರೆದಿದ್ದರೆ ಆಶ್ಚರ್ಯವೇನೂ ಇಲ್ಲ. ಮುಸಲ್ಮಾನರು ತಮ್ಮ ಭಾಷೆಯನ್ನು ನಮ್ಮ ಮುಂದೆ ಇಟ್ಟು, ಅದರಿಂದಾಗಬಹುದಾದ ಇಹಲೋಕದ ಭೋಗಗಳ ಆಶೆಯನ್ನು ತೋರಿಸಿದರಾದರೂ ಸಂಸ್ಕೃತದ ಅಭ್ಯಾಸವನ್ನು ಪೂರ ನಿಲ್ಲಿಸಿರಲಿಲ್ಲ. ಆದರೆ ಬ್ರಿಟಿಷರು ಸಂಸ್ಕೃತದಲ್ಲಿ 'ನಿರುಪಯುಕ್ತವಿಷಯಗಳೇ ಅಲ್ಲದೆ, ಅಪಾಯಕರವಾದ ವಿಷಯಗಳೂ' ಹೇರಳವಾಗಿವೆಯೆಂದು ನಿರ್ಣಯಿಸಿ **ಮೆಕಾಲೆ**ಯಂಥ ಸ್ವದೇಶಸ್ವನಾಗರಿಕತಾಭಿಮಾನಿಯ ಹೇಳಿಕೆಗೆ ಕಿವಿಗೊಟ್ಟು ಸಂಸ್ಕೃತಕ್ಕೆ ಸಜೀವ ಸಮಾಧಿಯನ್ನು ಮಾಡಿಬಿಟ್ಟರು. 1845ನೇ ಮಾರ್ಚ 7ನೇ ತಾರೀಖಿನ ಸರಕಾರದ ತೀರ್ಮಾನದಂತೆ ಯೂರೋಪಿನ ವಾಙ್ಮಯ ಮತ್ತು ಭೌತಿಕವಿಜ್ಞಾನವನ್ನೇ ಈ ದೇಶದವರಿಗೆ ಅಭ್ಯಾಸಮಾಡಿಸಬೇಕೆಂದೂ ವಿದ್ಯಾಭ್ಯಾಸಕ್ಕಾಗಿ ಮೀಸಲಿಟ್ಟ ಹಣವನ್ನೆಲ್ಲ ಇಂಗ್ಲಿಷು ವಿದ್ಯಾಭ್ಯಾಸಕ್ಕೆ ಧಾರೆಯೆರೆಯಬೇಕೆಂದೂ ನಿಶ್ಚಯಿಸಿಬಿಟ್ಟರು. ಇದರ ಫಲವು ಅಂದಿನಿಂದ ಇಂದಿನವರೆಗೂ ಆಗಿಬಿಟ್ಟಿರುತ್ತದೆ. ನಮ್ಮ ದೇಶದವರು ಆಶಾಮೋದಕಕ್ಕೆ (ಮನಸ್ಸಿನ ಮಂಡಿಗೆಗೆ) ಮರುಳಾಗಿ ಪರಮಾರ್ಥವಾದ ಅಭ್ಯುದಯನಿಃಶ್ರೇಯಸಗಳ ಸಾಧನವಾದ ಸಂಸ್ಕೃತವನ್ನು ಕಡೆಗಣಿಸಿಬಿಟ್ಟರು. ಅವರ

ಮಕ್ಕಳಾದ ನಮಗೆ ಹಿಂದೆ ಸಂಸ್ಕೃತವು ನಮ್ಮ ದೇಶಕ್ಕೆಲ್ಲ ಐಕ್ಯವನ್ನುಂಟುಮಾಡಿದ್ದ ಭಾಷೆ- ಈಗಲೂ ಇರುವಷ್ಟು ಐಕ್ಯಕ್ಕೂ ಸಂಸ್ಕೃತಿಯ ಅವಶೇಷಕ್ಕೂ ತಳಹದಿಯಾಗಿರುವ ಭಾಷೆ- ಎಂಬುದು ಮರೆತೇಹೋಯಿತು. ನಮ್ಮ ದೇಶದವರ ಈಶ್ವರಭಕ್ತಿಯು ಇಳಿಯುತ್ತಾ ಬಂತು, ಧಾರ್ಮಿಕ ಪ್ರವೃತ್ತಿಯು ದೂರವಾಗಹತ್ತಿತು. ನೀತಿಯ ತಳಹದಿ ಹೋಯಿತು: ಭೋಗಾಸಕ್ತಿ, ದುಂದುಗಾರಿಕೆ, ಪರಾವಲಂಬನೆ, ನಮ್ಮ ಸಂಸ್ಕೃತಿಯಲ್ಲಿ ನೈಚ್ಯಾನುಸಂಧಾನ, ಪರಸ್ಪರವಿದ್ವೇಷಾದಿಗಳು- ಎಲ್ಲವೂ ಹೆಚ್ಚಿದವು. ಕಲಿಯು ಗೆದ್ದನು.

ಇಂದಿಗೆ ನಮಗೆ ಸಂಸ್ಕೃತದಲ್ಲಿ ಅನಾದರವಿದೆ ಎಂಬುದು ಕೂಡ ತಿಳಿಯದಂತಾಗಿಬಿಟ್ಟಿದೆ. ಲೌಕಿಕವಿದ್ಯೆಯನ್ನು ಕಲಿತುಕೊಂಡಮೇಲೂ ಹೊಟ್ಟೆಬಟ್ಟೆಗೆ ಕೂಡ ನೇರವಾಗಿ ದುಡಿಮೆಯಾಗದೆ ದಾರಿದ್ರ್ಯದುಃಖದಲ್ಲಿ ಬೇಯುತ್ತಿರುವೆವು. ಧಾರ್ಮಿಕಪ್ರವರ್ತನೆಯ ಸೌಖ್ಯವನ್ನು ಕಳೆದುಕೊಂಡು 'ಹಂಗೂ ಕೆಟ್ಟೆ, ಹಿಂಗೂ ಕೆಟ್ಟೆ' ಎಂಬ ನಾಣ್ಣುಡಿಗೆ ಉದಾಹರಣೆಯಾಗಿಬಿಟ್ಟಿರುವೆವು. ''ಸಂಸ್ಕೃತದಲ್ಲಿ ಈಗಿನ ನಾಗರಿಕತೆಗೆ ಹೊಂದುಗೆಯಾದ ಭಾವನೆಯ ವಿಚಾರಗಳಿಲ್ಲ. ಆ ಭಾಷೆಯನ್ನು ಕಲಿತವರು ಪ್ರಗತಿಪರರಾಗಿರುವದಿಲ್ಲ, ಅದನ್ನು ಕಲಿಯುವದು ಸುಲಭವಲ್ಲ, ಅದು ಮೃತಭಾಷೆ''-ಎಂದು ಸಂಸ್ಕೃತದ ವಾಸನೆಯನ್ನೂ ಮೂಗಿಗೆ ತಟ್ಟಿಸಿಕೊಳ್ಳದೆ ಇರುವ, ಅರೆಬರೆ ಇಂಗ್ಲಿಷನ್ನು ಕಲಿತು ಹೊಟ್ಟೆಹೊರೆಯುತ್ತಾ, ಪರಕೀಯ ವೇಷಭಾಷೆಗಳಿಗೆ ಮರುಳಾಗಿದ್ದು ಈಗತಾನೆ ಕಣ್ಣುಬಿಡುತ್ತಿರುವ, ಆಚಾರವಿಚಾರಗಳ ದೃಷ್ಟಿಯಿಂದ ಭಾರತಜನರ ಹೃದಯವನ್ನು ಅರಿಯುವದಕ್ಕೆ ಸ್ವಲ್ಪವೂ ಅರ್ಹರಲ್ಲದ, ಇಡಿಯ ಭಾರತಜನರಲ್ಲಿ ಶೇಕಡ 5 ಅಥವಾ 6ಕ್ಕೆ ಹೆಚ್ಚಾಗಿಲ್ಲದ, 'ನಾಗರಿಕ' ಜನರ ಉಪದೇಶಕ್ಕೆ ಕಿವಿಗೊಟ್ಟು ನಾವೂ ಇದೇ ಗಿಳಿಯಪಾಠದ ಮಾತುಗಳನ್ನು ಒಪ್ಪಿಸುತ್ತಿರುವೆವು! ಇದು ಇನ್ನು ಸಲ್ಲದು. ಭಾರತನಿವಾಸಿಗಳಿರ, ಏಳಿರಿ, ಎಚ್ಚರವಾಗಿರಿ, ಬಲ್ಲವರನ್ನು ಕಂಡು ನಿಜವನ್ನು ಅರಿತುಕೊಳ್ಳಿರಿ. ಸುಸಂಸ್ಕೃತವನ್ನು ಕಲಿತುಕೊಳ್ಳಿರಿ, ಸಂಸ್ಕೃತರಾಗಿರಿ, ಇಹಪರ ಸುಖಗಳನ್ನು ಸೂರೆಮಾಡಿಕೊಳ್ಳಿರಿ.!

ನಮ್ಮ ಪೂರ್ವಿಕರ ಶಿಲ್ಪವಿದ್ಯೆಗೆ ಸಾಕ್ಷಿಗಳಾಗಿ ಇನ್ನೂ ಉಳಿದಿರುವ ಜಗದ್ವಿಸ್ಮಾಪಕವಾದ ಕಟ್ಟಡಗಳನ್ನು ಕಣ್ಣಾರೆ ಕಾಣುತ್ತಿರುವ, ಹಿಂದಿನ ಶತಮಾನದಲ್ಲಿ ಕೂಡ ತ್ರಿಕೋಣಮಿತಿ, ಬೀಜಗಣಿತ, ಚಲನಕಲನ, ಸ್ಥಿತಿವಿಜ್ಞಾನ, ಗತಿವಿಜ್ಞಾನವೇ ಮುಂತಾದ ಗಂಭೀರವಿಚಾರಗಳನ್ನು ಕುರಿತು ಸಂಸ್ಕೃತದಲ್ಲಿಯೂ ಗ್ರಂಥಗಳನ್ನು ಪ್ರಕಾಶಪಡಿಸಿದವರ ನಿದರ್ಶನಗಳನ್ನು ನೆನಪಿನಲ್ಲಿಟ್ಟಿರುವ, ನಾವುಗಳು ಈಗಿನ ನಾಗರಿಕತೆಗೆ ಸಂಸ್ಕೃತವು ಹೊಂದುಗೆಯಾಗಿಲ್ಲವೆಂದು ಹೇಗೆತಾನೆ ಹೇಳಬಹುದು? ಭೌತಿಕವಿಜ್ಞಾನದ

ವಿಷಯದಲ್ಲಿ ಬೇರೆಬೇರೆಯ ದೇಶಭಾಷೆಗಳಲ್ಲಿ ಈಗಲೂ ಪ್ರಕಟವಾಗುತ್ತಿರುವ ಗ್ರಂಥಗಳಿಗೆ ಸಂಸ್ಕೃತಭಾಷೆಯಿಂದ ಆಗುತ್ತಿರುವ ಪರಮಸಹಾಯವನ್ನು ಕಂಡೂ ಕಂಡೂ ನಾವು ಸಂಸ್ಕೃತವು ಆಧುನಿಕಶಾಸ್ತ್ರವಿಚಾರಧಾರೆಗೆ ಅನುಕೂಲವಾಗಿಲ್ಲವೆನ್ನುವದು ಸರಿಯಾದೀತೆ? ಸಂಸ್ಕೃತದಲ್ಲಿ ಆಸ್ತಿಕನಾಸ್ತಿಕಮತಗಳವರ ಸ್ವತಂತ್ರವಿಚಾರಪರಿಪ್ಲುತವಾದ ಗ್ರಂಥಗಳು ತುಂಬಿತುಳುಕುತ್ತಿರುವಲ್ಲಿ ಅದನ್ನು ಕಲಿತವರೆಲ್ಲರೂ ಪ್ರಗತಿಗೆ ವಿರುದ್ಧರಾಗಿರುವರೆಂಬ ಮಾತು ಶೋಭಿಸೀತೆ? ಸಂಸ್ಕೃತಭಾಷೆಯಲ್ಲಿ ಸಂಭಾಷಣೆಮಾಡುವದನ್ನು ಮೂರುನಾಲ್ಕು ತಿಂಗಳುಗಳೊಳಗಾಗಿಯೇ ಕಲಿಸುವ ಪದ್ಧತಿಯನ್ನು ಹಾಲೆಂಡಿನ ಲೇಡನ್ ಸಕಲವಿದ್ಯಾನಿಲಯದಲ್ಲಿ ಆಚರಣೆ ತಂದಿರುವರೆಂದೂ ಜಪಾನಿನಲ್ಲಿ ಸುಮಾರು ಹದಿನಾಲ್ಕು ಸಕಲ ವಿದ್ಯಾನಿಲಯಗಳಲ್ಲಿ ಇಟ್ಟುಕೊಂಡಿರುವರೆಂದೂ ಕೇಳಿದ ಮೇಲೂ ಸಂಸ್ಕೃತವನ್ನು ಕಲಿಯುವದು ಕಷ್ಟವೆನ್ನಲಾದೀತೆ? ನಮ್ಮ ದೇಶದಲ್ಲಿ ಈಗಲೂ ವರ್ಷವರ್ಷವೂ ಸಂಸ್ಕೃತಗ್ರಂಥಗಳನ್ನು ಲೀಲಾನ್ಯಾಯದಿಂದ ರಚಿಸುತ್ತಿರುವದು ಸರಕಾರಿಯ ರಿಜಸ್ಟ್ರಾರವರ ಉದ್ಯೋಗಮಂದಿರದಲ್ಲಿ ಕಾಣಬರುತ್ತಿರುವಾಗ, ಪಂಡಿತರುಗಳು ತಮ್ಮ ವ್ಯವಹಾರವನ್ನು ಯಾವ ಅಡ್ಡಿ-ಆತಂಕಗಳೂ ಇಲ್ಲದೆ ಈಗಲೂ ಸಂಸ್ಕೃತಸಂಭಾಷಣೆ, ಪತ್ರಲೇಖನಗಳಿಂದ ನಡೆಯಿಸುತ್ತಿರುವಾಗ, ಈ ಅಮರವಾಣಿಯನ್ನು 'ಮೃತಭಾಷೆ' ಎಂದು ಕರೆಯುವದು ವಿವೇಕಯುಕ್ತವೆನಿಸೀತೆ? ಇದನ್ನು ನಾವೆಲ್ಲರೂ ಯೋಚಿಸಬೇಕು. ಸಂಸ್ಕೃತಭಾಷೆ ಎಂಬ ಶಬ್ದವನ್ನು ಕೇಳಿದವರಿಗೆಲ್ಲ ಭಾರತ ನಿವಾಸಿಗಳ ಸಂಸ್ಕೃತಿಯ ಮತ್ತು ಐಕ್ಯದ ಮೂಲ- ಎಂಬುದರ ಅರಿವಾಗುತ್ತದೆ. ಸಂಸ್ಕೃತವು ರಾಷ್ಟ್ರಭಾಷೆಯಾಗಬೇಕು ಎಂಬ ತೀರ್ಮಾನಕ್ಕೆ ಅಖಿಲಭಾರತ ರಾಷ್ಟ್ರಭಾಷಾ ಸಮ್ಮೇಳನದಲ್ಲಿ ಭಿನ್ನಭಿನ್ನ ಮತದ, ಭಿನ್ನಭಿನ್ನವಿಚಾರಧಾರೆಯ ದಕ್ಷಿಣಭಾರತೋತ್ತರ ಭಾರತಗಳ ಪ್ರಸಿದ್ಧಪುರುಷನೇಕರು ಸಮ್ಮತಿಕೊಟ್ಟದ್ದು ತಿಳಿಯಬರುತ್ತದೆ. ಇದರಿಂದ ದೇಶಾಭಿಮಾನಕ್ಕೂ ಆ ಭಾಷೆಯು ಎಷ್ಟರಮಟ್ಟಿಗೆ ಪ್ರೋತ್ಸಾಹಕವಾಗಿರುವದೆಂದು ಮನವರಿಕೆಯಾಗುತ್ತದೆಯಲ್ಲವೆ? ಇದೆಲ್ಲಕ್ಕಿಂತಲೂ ಹೆಚ್ಚಾಗಿ ಹಿಂದೀ ಭಾಷೆಯೇ ರಾಷ್ಟ್ರಭಾಷೆಯಾಗಿರಬೇಕೆಂಬ ಪರಮೋತ್ಸಾಹದಿಂದ ಭರಿತರಾಗಿರುವ ರಾಷ್ಟ್ರನಾಯಕರುಗಳು ಏರ್ಪಡಿಸಿಕೊಂಡಿರುವ ರಾಜ್ಯಪ್ರಶಾಸನ ಸಂವಿಧಾನದಲ್ಲಿ ಉಪಯೋಗಿಸಬೇಕೆಂದಿರುವ ಪ್ರಧಾನಪಾರಿಭಾಷಿಕ ಶಬ್ದಗಳಲ್ಲಿ, ಅದರಲ್ಲಿಯೂ ಕೇಂದ್ರ ರಾಷ್ಟ್ರಸ್ಥಾನದವರಿಗೆ ಬೇಕಾಗಿರುವ ವಿಷಯಗಳನ್ನು ಹೇಳುವ ಶಬ್ದಗಳಲ್ಲಿ

ಯಾವದೂ ಆ ದೇಶಭಾಷೆಯಲ್ಲಿಲ್ಲ;[1] ಎಲ್ಲಾ ದೇಶಭಾಷೆಗಳೂ ಆ ವಿಷಯದಲ್ಲಿ ಸಂಸ್ಕೃತಭಾಷೆಗೇ ಶರಣುಬರಬೇಕಾಗಿದೆ. ಸಂಸ್ಕೃತಭಾಷೆಯಿಂದಾಗುವ ವ್ಯಾವಹಾರಿಕ ಸಹಾಯಕ್ಕೆ ಮತ್ತೆ ಯಾವ ಸಾಕ್ಷಿಬೇಕು ?

ಒಟ್ಟಿನಲ್ಲಿ ನೋಡಿದರೆ ಈಗ್ಗೆ ಸಂಸ್ಕೃತದಲ್ಲಿರುವ ಅನಾದರಕ್ಕೆ ನಮ್ಮಗಳ ಅವಿಜ್ಞತೆಯೊಂದೇ ಕಾರಣ. ಇಹಪರಗಳೆರಡಕ್ಕೂ ನಿಚ್ಚಣಿಕೆಯನ್ನೊದಗಿಸುವ ಆ ಭಾಷೆಯನ್ನು ಕಡೆಗಣಿಸುವದು ಆತ್ಮಹತ್ಯೆಯೇ ಎಂದರೂ ಅತ್ಯುಕ್ತಿಯಾಗದು.

* * * * *

# 5. ಸಂಸ್ಕೃತವನ್ನು ಕೊಂಡಾಡುವವರು

ಇತ್ತೀಚೆಗೆ ಸಂಸ್ಕೃತವು ಸಾಣೆಹಿಡಿದ ವಜ್ರದಂತೆ ಉಚ್ಚಸ್ಥಾನದಲ್ಲಿರುವ ಅನೇಕರ ಕಣ್ಣುಮುಂದೆ ಚಮಕಿಸುತ್ತಿದೆ. ಅವರು ಒಬ್ಬೊಬ್ಬರಾಗಿ ಅದನ್ನು ಹಾಡಿಹೊಗಳುತ್ತಿರುವದು ಕೇಳಬರುತ್ತಿದೆ.

1. **ಅಸ್ಸಾಮಿನಲ್ಲಿ** ಗೌಹತಿಯ ಪ್ರಿನ್ಸಿಪಾಲ್ ಶ್ರೀ|| ಜೆ. ಎನ್. ಬೋರಾ ಎಂಬುವರು (ಅಸ್ಸಾಮ ಹೈಕೋರ್ಟಿನ ಅಡ್ವೊಕೇಟರೂ ಆಗಿರುತ್ತಾರೆ) ಸಾಹಿತ್ಯಸಭೆಯಲ್ಲಿ ಓದಿದ ಅಸ್ಸಾಮಿ ಭಾಷಣದ ಇಂಗ್ಲಿಷಿನ ಅನುವಾದವನ್ನು ಕಲಕತ್ತೆಯ Truth (ಸತ್ಯ) ಪತ್ರಿಕೆಯ ಜೂನ್ 27ನೆಯ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ. ಸಂಸ್ಕೃತವು ಜನರು ಮಾತನಾಡುವ ಭಾಷೆಯಲ್ಲ-ಎಂಬುದನ್ನು ಒಪ್ಪಿದರೂ ಆ ಭಾಷೆಯು ಭಾರತದ ರಾಷ್ಟ್ರಭಾಷೆಯಾಗುವದಕ್ಕೆ ಹೇಗೆ ಯೋಗ್ಯವಾಗಿದೆ ಎಂಬುದನ್ನು ಅವರು ಪ್ರತಿಪಾದಿಸಿರುತ್ತಾರೆ.

ಸಂಸ್ಕೃತವು ಭರತಖಂಡದಲ್ಲೆಲ್ಲ ಹಿಂದೆ ಅಭಿಪ್ರಾಯವಿನಿಮಯ ಸಾಧನವಾಗಿದ್ದು ಸರಕಾರದ ಕಾಗದಪತ್ರಗಳು, ಶಾಸನಗಳು- ಮುಂತಾದವುಗಳಿಗೂ ವಿವಿಧವಾಙ್ಮಯ ವಿಚಾರಗಳಿಗೂ ಆಶ್ರಯುವನ್ನಿತ್ತಿದ್ದ ಭಾಷೆ; ಇಂದಿನವರೆಗೂ

---

1. ಮುಖ್ಯ ಭಾರತ ಸಂವಿಧಾನದ ಏಳನೆಯ ಅನುಸೂಚಿಯಲ್ಲಿ (The Constitution of India, VII schedule) ಕೇಂದ್ರ ಸರಕಾರದವರಿಗೆ ನೇರಾಗಿ ಸಂಬಂಧಿಸಿರುವ ಆಲೋಚನೀಯ ವಿಷಯಗಳಲ್ಲಿ ಒಂದಕ್ಕೂ ಸಂಸ್ಕೃತವನ್ನುಳಿದು ಮತ್ತೆ ಯಾವ ದೇಶಭಾಷೆಯಲ್ಲಿಯೂ ಪಾರಿಭಾಷಿಕ ಶಬ್ದಗಳಿಲ್ಲವೆಂಬುದನ್ನು ವಾಚಕರು ಮನದಂದುಕೊಳ್ಳಬೇಕಾಗಿದೆ.

ಭರತಖಂಡದಲ್ಲಿ ಹಲವು ಪ್ರಾಂತಗಳಲ್ಲಿ ಜನರು ಅಭ್ಯಾಸಮಾಡುತ್ತಿರುವ ಭಾಷೆ; ಭರತಖಂಡದ ತತ್ತ್ವಶಾಸ್ತ್ರವಿಜ್ಞಾನಾದಿಗಳನ್ನು ಒಳಗೊಂಡಿರುವ ಭಾಷೆ; ಭರತಖಂಡದ ಬಹುಜನರು ಎಲ್ಲೆಲ್ಲಿಯೂ ಕರ್ಮಾನುಷ್ಠಾನಮಾಡುವಾಗ ಬಳಸುವ ಭಾಷೆ; ಕಾಮರೂಪ, ಮಿಥಿಲ, ಆನ್ಧ್ರ, ಕರ್ಣಾಟಕ, ವಿದರ್ಭ-ಮುಂತಾದ ದೇಶಗಳಲ್ಲೆಲ್ಲ ಹರಡಿದ್ದು ಇಂದಿಗೂ ಜನರಿಗೆ ಬೇಕಾದ ಕಾವ್ಯ, ಶಾಸ್ತ್ರ, ದರ್ಶನಾದಿಗಳನ್ನು ಒದಗಿಸುತ್ತಿರುವ ಭಾಷೆ; ದೇಶಭಾಷೆಗಳಿಗೆಲ್ಲ ತಾಯಿಯ ಸ್ಥಾನದಲ್ಲಿರುವ ಭಾಷೆ. ಈ ಅಮರಭಾಷೆ ರಾಷ್ಟ್ರಭಾಷೆಯಾಗಲಾರದೆ? ದೇವನಾಗರಿ ಲಿಪಿಯನ್ನು ತಿಳಿದುಕೊಂಡರೆ ಸಾಕು, ಎಷ್ಟೋ ಜನರಿಗೆ ಇದು ಅರ್ಥವಾಗಿಬಿಡುತ್ತದೆ-ಹೀಗೆಂಬುದು ಅವರ ಭಾಷಣದ ಸಾರಾಂಶ. ದೇವನಾಗರಿಯೂ ಸಂಸ್ಕೃತವೂ ಪ್ರಚಾರಕ್ಕೆ ಬಂದರೆ ಎಲ್ಲಾ ಭಾಷೆಗಳೂ ಮೈತ್ರಿಯಿಂದಿರುವವು- ಎಂದು ಅವರು ಅಭಿಪ್ರಾಯಪಟ್ಟಿರುತ್ತಾರೆ.

2. ರಾಷ್ಟ್ರಾಧ್ಯಕ್ಷ ಶ್ರೀ ರಾಜೇಂದ್ರಪ್ರಸಾದರು **ಹೈದರಾಬಾದಿನಲ್ಲಿ** ಹೊಸದಾಗಿ ಆರಂಭಿಸಿರುವ ಸಂಸ್ಕೃತಕಾಲೇಜಿಗೆ ದಿವಂಗತ ಮಹಾರಾಜ ಕಿಶನ್ ಪ್ರಸಾದರವರ ವಿಶಾಲಭವನವನ್ನು ದಾನಮಾಡಿದ ಸಂದರ್ಭದಲ್ಲಿ (ಜೂಲೈ 8ರಲ್ಲಿ) ಭೌತಿಕ ವಿಜ್ಞಾನಕ್ಕೆ ಪಾರಿಭಾಷಿಕಶಬ್ದಗಳ ಭಂಡಾರವನ್ನೇ ಒದಗಿಸಬಲ್ಲದು 'ಸಂಸ್ಕೃತಭಾಷೆ'- ಎಂದು ಹೊಗಳಿರುತ್ತಾರೆ. ಸಾಂಪ್ರದಾಯಿಕಪದ್ಧತಿಯಿಂದ ಸಂಸ್ಕೃತವನ್ನು ಕಲಿಸುವವರ ಹೆಚ್ಚುಗಾರಿಕೆಯನ್ನು ಕೊಂಡಾಡಿರುತ್ತಾರೆ.

3. **ಮಧ್ಯಪ್ರದೇಶದಲ್ಲಿ** ಹಿಂದಿಮಾತನಾಡುತ್ತಿರುವ 6,7,8 ಇಯತ್ತೆಗಳ ವಿದ್ಯಾರ್ಥಿಗಳು ಸಂಸ್ಕೃತವನ್ನು ಕಲಿಯಬೇಕೆಂದು ಒತ್ತಾಯಮಾಡುವ ಕಾನೂನು ಆಚರಣೆಗೆ ಬಂದಿದೆ.

4. **ಹೌರಪಂಡಿತಸಂಮೇಲನ**ದಲ್ಲಿ ಅಧ್ಯಕ್ಷರಾಗಿದ್ದ (ಬಂಗಾಲದ ವಿದ್ಯಾಭ್ಯಾಸದ ಮಂತ್ರಿಗಳು) ಶ್ರೀ ಹರೇಂದ್ರನಾಥ್ ಚೌಧರಿಯವರು ಸಂಸ್ಕೃತವನ್ನು ಸಾರ್ವಜನಿಕ ಭಾಷೆಯಾಗಿ ಮಾಡಿದ್ದರೆ ಭಾಷಾಸಮಸ್ಯೆಯೆ ಇರುತ್ತಿರಲಿಲ್ಲವೆಂದರು. ಹಾಜರಿದ್ದ ಇನ್ನೂ ಕೆಲವು ದೊಡ್ಡ ಅಧಿಕಾರಿಗಳು ಸಂಸ್ಕೃತದ ಅವಶ್ಯಕತೆಯನ್ನು ಒತ್ತಿ ಹೇಳಿದರು. ಲ್ಯಾಂಡ್‌ರೆವಿನ್ಯೂ ಮಂತ್ರಿಗಳಾದ ಶ್ರೀ ಬಿಮಲಚಂದ್ರಸಿಂಹರವರು ಭರತಖಂಡದ ಪ್ರಾಚೀನಸಂಸ್ಕೃತಿಯ ಪಿತ್ರಾರ್ಜಿತವನ್ನು ಉಳಿಸಿಕೊಳ್ಳುವದಕ್ಕೆ ಸಂಸ್ಕೃತವು ಅತ್ಯವಶ್ಯವೆಂದರು. ಕಲಕತ್ತೆಯ ಸಕಲವಿದ್ಯಾನಿಲಯದ ವೈಸ್‌ಚಾನ್ಸಲರಾದ ಶ್ರೀ ನಿರ್ಮಲಕುಮಾರ ಸಿದ್ಧಾಂತರವರು ಸಮ್ಮೇಳನವನ್ನು ಉದ್ಘಾಟಿಸಿದರು. ಈ

ವಿಷಯದಲ್ಲಿ ಮಾತಾನಾಡಿದವರಲ್ಲಿ ಶ್ರೀ ಭೂಪತಿ ಮಜುಮದಾರ್, ಸಂಸ್ಥಾನಗಳ ವಾಣಿಜ್ಯ ಮತ್ತು ಉದ್ಯೋಗದ ಮಂತ್ರಿಗಳು, ಮತ್ತು ಶ್ರೀ॥ ಎಸ್, ಸಿ. ರಾಯ್. ಕಲಕತ್ತೆ ಷರೀಫರು- ಇವರೂ ಸೇರಿದ್ದಾರೆ.

5. **ಮದರಾಸಿನಲ್ಲಿ** ಭಾಷಾಸಮ್ಮೇಳನದಲ್ಲಿ ಶ್ರೀ॥ ಸನಾತನಂ (ಹಿಂದಿನ ಲೆ. ಗೌರ್ನರು) ಹಿಂದಿಯನ್ನು ಹೊಗಳುತ್ತಾ ಸಂಸ್ಕೃತವನ್ನು ಒತ್ತಾಯಪಡಿಸಬೇಕೆಂದರು.

ಈಶ್ವರನ ದಯೆಯಿಂದ ಸಂಸ್ಕೃತವನ್ನು ಬಾಯಿತುಂಬ ಹೊಗಳುವವರೇ ಅಲ್ಲದೆ, ಅದನ್ನು ದೇಶದಲ್ಲಿ ಹರಡುವದಕ್ಕೆ ಪ್ರಯತ್ನಮಾಡುವವರೂ ಹೆಚ್ಚುವರೆಂದು ಹಾರೈಸೋಣ. ನಮ್ಮ ದೇಶದಲ್ಲಿ ಈಗಲೂ ಸಂಸ್ಕೃತವನ್ನು ತಿಳಿದವರಿಗೇನೂ ಕಡಿಮೆಯಿಲ್ಲ. ವೇದಶಾಸ್ತ್ರಪುರಾಣಗಳ ಸಾರವನ್ನು ತಿಳಿದವರೂ ಅನೇಕರಿದಾರೆ. ಸಂಸ್ಕೃತದ ಮಹಿಮೆಯನ್ನು ಬಲ್ಲವರೂ ಇದಾರೆ. ಆದರೆ ಅದನ್ನು ಬಳಸಿದರೆ ಎಲ್ಲಿ ಪುರಾತನಕಾಲದವರು ಎನ್ನಿಸಿಕೊಳ್ಳಬೇಕಾದೀತೊ, ಎಂದು ಅವರು ಅಂಜಿ ಕೊಂಡಿರುತ್ತಾರೆ.

* * * * *

# 6. ಸಂಸ್ಕೃತವೆಂಬುದೊಂದು ವಿಶ್ವಶಕ್ತಿ

ಒಂದು ಕೋಳಿಯು ತಿಪ್ಪೆಯೊಂದರ ಮೇಲೆ ಓಡಾಡುತ್ತಿತ್ತು; ತನ್ನ ಕೊಕ್ಕಿನಿಂದ ಕುಕ್ಕಿ ಕುಕ್ಕಿ ಅದರಲ್ಲಿದ್ದ ಕಾಳುಗಳು, ಹುಳುಗಳು- ಮುಂತಾದವನ್ನು ಆರಿಸಿಕೊಂಡು ಸಂತೋಷದಿಂದ ತಿಂದು ತೃಪ್ತಿಪಡುತ್ತಿತ್ತು. ಅದರ ದೃಷ್ಟಿಯಿಂದ ಆ ತಿಪ್ಪೆಯೊಂದು ಅನ್ನಪೂರ್ಣಾದೇವಿಯ ಭವನವೆಂದೆನಿಸಿರಬೇಕು!

ಕೋಳಿಯು ಅತ್ತಿತ್ತ ತನ್ನ ಆಹಾರಕ್ಕಾಗಿ ತಿಪ್ಪೆಯನ್ನು ಕೆದಕಿಕೆದಕಿ ಶೋಧನೆಮಾಡುತ್ತಿರುವಲ್ಲಿ ಒಂದು ಪದ್ಮರಾಗದ ಮಣಿಯು ಅದರ ಕಣ್ಣಿಗೆ ಬಿದ್ದಿತು. ಅದರ ಸಂತೋಷಕ್ಕೆ ಪಾರವೇ ಇಲ್ಲ! ಅದೊಂದು ಯಾವದೋ ವಿಜಾತೀಯವಾದ ಹಣ್ಣೆಂದು ಅದು ಭಾವಿಸಿರಬಹುದು! ಅದನ್ನು ಕುಕ್ಕಿ ಕುಕ್ಕಿ ಸಾಕಾಯಿತು; ಕೋಳಿಗೆ ಅದರಲ್ಲಿ ಯಾವ ಸಾರವೂ ಸಿಕ್ಕಲಿಲ್ಲ. ಕೊನೆಗೆ ಬೇಜಾರಿನಿಂದ ಅದನ್ನು ಅತ್ತ ಎಸೆದುಬಿಟ್ಟಿತು!

ಸಂಸ್ಕೃತಭಾಷೆಯೆಂಬುದೊಂದು ಅನರ್ಘಚಿಂತಾಮಣಿ. ಅದನ್ನು ಗೌರವದಿಂದ ಪೂಜಿಸಿದವರಿಗೆ ಅವರ ಕೋರಿಕೆಗಳೆಲ್ಲ ಸಿಕ್ಕುವವು; ಆದರೆ ಜನರಿಗೆ ಅದರಲ್ಲಿ ಪೂಜ್ಯಬುದ್ಧಿಯಿರಬೇಕಲ್ಲ! ಅವರು ಕಥೆಯ ಕೋಳಿಯಂತೆ ಅದನ್ನು ಅಲ್ಲಿಷ್ಟು ಇಲ್ಲಿಷ್ಟು ಕುಕ್ಕಿ, ನೋಡಿ ಅತ್ತ ಬಿಸಾಡುತ್ತಿದ್ದಾರೆ!

ಶ್ರೀ ಕಾಕಾ ಸಾಹೇಬ್ ಕಾಲೇಲಕರ್‌ರವರು ಸಂಸ್ಕೃತವನ್ನು ರೇಡಿಯೋ ದ್ವಾರದಿಂದ ಕೊಂಡಾಡಿ ಮಾಡಿದ ಭಾಷಣವನ್ನು ಓದಿದಾಗ ನನ್ನ ಮನಸ್ಸಿನಲ್ಲಿ ಈ ಭಾವಗಳು ಮೂಡಿದವು. ಕಾಲೇಲಕರ್‌ರವರು ಮಹಾತ್ಮಗಾಂಧಿಯವರ ಸಹವಾಸಿಗಳಾಗಿ ಅನೇಕ ವರ್ಷಗಳಿದ್ದರು. ''ನವಜೀವನ''ಕ್ಕೆ ಅವರು ಸಂಪಾದಕರಾಗಿದ್ದರು; ಈಗ (ಗಾಂಧಿ ಮೆಮೋರಿಯಲ್ ಮ್ಯೂಸಿಯಮ್) ಗಾಂಧೀ ಸ್ಮಾರಕವಿಚಿತ್ರ ವಸ್ತುಪ್ರದರ್ಶನಶಾಲೆಯ ಡೈರೆಕ್ಟರಾಗಿರುತ್ತಾರೆ. ಅವರು ಸಂಸ್ಕೃತದ ಮಹಿಮೆಯ ವಿಷಯಕ್ಕೆ ಹೇಳಿರುವದರ ಸಾರವಿದು:

1. ಸಂಸ್ಕೃತಭಾಷೆಯೂ ಸಂಸ್ಕೃತವಾಙ್ಮಯವೂ ಭಾರತಸಂಸ್ಕೃತಿಯ ತಳಹದಿಯೂ ಮೇಲ್ಕಟ್ಟಡವೂ ಆಗಿರುತ್ತದೆ; ಅದು ಹೀಗೆಯೆ ಎಂದೆಂದಿಗೂ ಇದ್ದು ಕೊಂಡಿರುವದು!

2. ಭಾರತದಲ್ಲಿರುವ ಎಲ್ಲಾ ಭಾಷೆಗಳನ್ನೂ ಒಂದುಗೂಡಿಸುವ ಅತ್ಯಂತ ಪ್ರಮುಖಪ್ರಭಾವವು ಸಂಸ್ಕೃತಕ್ಕೆ ಸೇರಿದ್ದು. ಅವೆಲ್ಲವೂ ಸಂಸ್ಕೃತದಿಂದ ಬಂದವುಗಳಾಗಿವೆ, ಅಥವಾ ಅದಕ್ಕೆ ಹೊಂದಿಕೊಂಡೇ ಬಾಳುತ್ತಿವೆ. ಉರ್ದೂಭಾಷೆಯು ಕೂಡ ಈ ನಿಯಮಕ್ಕೆ ಹೊರಚ್ಚಾಗಿಲ್ಲ.

3. ಭರತಖಂಡದ ಹೊರಗಿರುವ ಅನೇಕ ಭಾಷೆಗಳಿಗೂ ಈ ಭಾಷೆಯ ಸಂಬಂಧವಿದೆಯೆಂದು ಭಾಷಾಶಾಸ್ತ್ರಜ್ಞರು ಹೇಳುತ್ತಿದಾರೆ; ಇದು ಅವರಿಗೆ ಸಂಸ್ಕೃತದ ಅಭ್ಯಾಸದಿಂದಲೇ ಹೊಳೆಯಿತು.

4. ಪರದೇಶಗಳಲ್ಲಿ ಸಂಸ್ಕೃತದ ಅಭ್ಯಾಸವು ಪ್ರಾರಂಭವಾದ ಕಡೆಗಳಲ್ಲೆಲ್ಲ ಜ್ಞಾನದ ಉಜ್ಜೀವನವೇ ಆಗುತ್ತಿದೆ.

5. ಭರತಖಂಡವನ್ನು ಒಗ್ಗಟ್ಟುಮಾಡುವುದಕ್ಕೆ ಪಾರ್ಸಿಭಾಷೆಯ ಸಹಾಯವು ಕಡಿಮೆಯಾಗಿಲ್ಲ; ಇಂಗ್ಲಿಷುಭಾಷೆಯೂ ಎಷ್ಟೋ ಈ ವಿಷಯದಲ್ಲಿ ಸಹಾಯವನ್ನು ಮಾಡಿರುತ್ತದೆ. ಆದರೆ ಸಂಸ್ಕೃತವು ಈ ದಿಕ್ಕಿನಲ್ಲಿ ಮಾಡಿರುವ ಉದಾರದಾನವನ್ನು ನೋಡಿದರೆ, ಮಿಕ್ಕದ್ದೆಲ್ಲ ಸೊನ್ನೆ ಎನ್ನಬಹುದು.

6. ಸಂಸ್ಕೃತದಲ್ಲಿ ಹೊಸ ಶಬ್ದಗಳನ್ನು ನಿರ್ಮಿಸುವ ಶಕ್ತಿಯು ಅಪರಿಮಿತವಾಗಿರುತ್ತದೆ. ಮಾನವನ ಅತ್ಯಂತ ಉತ್ತಮವಾದ, ಅತ್ಯಂತಸೂಕ್ಷ್ಮವಾದ, ವಿಚಾರಗಳನ್ನೂ ವೇದನೆಗಳನ್ನೂ ಸಂಕಲ್ಪಗಳನ್ನೂ ತಿಳಿಸುವದಕ್ಕೆ ತಕ್ಕದ್ದಾಗಿರುತ್ತದೆ ಈ ಭಾಷೆ. ಇದರಲ್ಲಿ ಬೈಬಲು, ಪಾರ್ಸಿಯ ಓಮರಖಾಯಮನ ರೂಬಿಯತ್ ಇವುಗಳ ಅನುವಾದವಲ್ಲದೆ ಪಾರ್ಸಿಭಾಷೆಯಿಂದಲೂ ಅರಬ್ಬಿಭಾಷೆಯಿಂದಲೂ ಬಂದಿರುವ ದಂಡನೀತಿಯ ಶಬ್ದಗಳನ್ನೆಲ್ಲ ಸಂಸ್ಕೃತದ ಪದ್ಯಗಳಲ್ಲಿ ಬರೆದಿರುವ ರಾಜ್ಯವ್ಯವಹಾರ ಕೋಶವೆಂಬ ಗ್ರಂಥವೊಂದು ರಚಿತವಾಗಿ ಛತ್ರಪತಿ ಶಿವಾಜಿಯ ಮೆಚ್ಚುಗೆಯನ್ನು ಪಡೆದಿದೆ. ಇದರಲ್ಲಿ ಈಗಿನ ಪ್ರೌಢಗಣಿತದ ಗ್ರಂಥವೊಂದು ವಿರಚಿತವಾಗಿದೆ, ಮಹಾತ್ಮಗಾಂಧಿಯ ಮರಣವನ್ನು ಕುರಿತ ಕಾವ್ಯವೂ ಈ ಭಾಷೆಗೆ ಬಂದಿರುತ್ತದೆ. ಆದ್ದರಿಂದ ಅದು ಜನರು ತಿಳಿದಿರುವಂತೆ ಮೃತಭಾಷೆಯಲ್ಲ.

7. ಸಂಸ್ಕೃತವನ್ನು ಇನ್ನೂ ಬೆಳೆಯಿಸಬಹುದು. ಅದು ವಿವಿಧ ಕುಲಗಳಿಗೆ ಸೇರಿದ ಮಾನವರಲ್ಲಿ ಪರಸ್ಪರಸಹಾಯ, ಸಂಘನಿರ್ಮಾಣ, ಪರಸ್ಪರಸ್ನೇಹ-ಇವುಗಳನ್ನು ಉಂಟುಮಾಡುವ ವಿಶ್ವಶಕ್ತಿಯಾಗುವ ಸಂಭವವಿದೆ.

ವಾಚಕವೃಂದ, ಸಂಸ್ಕೃತವು ನಿಮ್ಮ ಅಂತಃಕರಣಕ್ಕೆ ಸಂಸ್ಕೃತಿಯನ್ನು ಕೊಡಬಲ್ಲದು; ಜೀವನದಲ್ಲಿ ನೆಮ್ಮದಿಯನ್ನಿಡಬಲ್ಲದು; ಇಡಿಯ ಭೂಲೋಕವನ್ನೇ ಏಕೆ, ಇಡಿಯ ವಿಶ್ವವನ್ನೇ ಪರಮಾನಂದಸಾಗರವೆಂಬುದನ್ನು ಮನದಟ್ಟುಮಾಡಿಕೊಟ್ಟು ನಿಮ್ಮ ಇಷ್ಟಾರ್ಥಗಳನ್ನೆಲ್ಲ ನೆರವೇರಿಸಬಲ್ಲ ಅಧ್ಯಾತ್ಮವಿದ್ಯೆಯ ಕಲ್ಪತರುವನ್ನು ನಿಮ್ಮೊಳಗೆ ನೆಡಬಲ್ಲದು- ಹೀಗೆಂದು ಹಿಂದಿನ ಋಷಿಗಳು ಹೇಳಿದ್ದಾರೆ. ಕವಿಗಳೂ ಸಂಗೀತ ಶಾಸ್ತ್ರಜ್ಞರೂ ವೈದ್ಯರುಗಳೂ ಹಾಡಿದ್ದಾರೆ, ದಾರ್ಶನಿಕರು ಕೊಂಡಾಡಿದ್ದಾರೆ, ನೀತಿವಿಶಾರದರು ಬಾಯಿ ತುಂಬಾ ಹೊಗಳಿದ್ದಾರೆ, ಇಂದಿನ ಭಾಷಾಶಾಸ್ತ್ರವಿದರು ಅದನ್ನು ಸ್ತೋತ್ರಗಳಿಂದ ಅಲಂಕರಿಸಿದ್ದಾರೆ, ರಾಜಕಾರಣದವರೂ ಈ ರಾಗಕ್ಕೆ ತಾಳವನ್ನು ಹಾಕಿರುತ್ತಾರೆ. ಸಂಸ್ಕೃತಭಾಷೆಯ ಒಂದೊಂದು ಮಾತೂ ಒಂದೊಂದು ಮಹಾಮಂತ್ರವೆಂದು ತಿಳಿಯಿರಿ. ಸಂಸ್ಕೃತಶಬ್ದಗಳನ್ನು ಎಡೆಬಿಡದೆ ಜಪಿಸಿರಿ, ನಿಮ್ಮ ಹೆಣ್ಣುಮಕ್ಕಳಿಗೆ ಈ ಭಾಷೆಯ ಪರಿಚಯವನ್ನು ಮಾಡಿಕೊಡಿರಿ. ಗಂಡು ಹುಡುಗರಿಗೆ ಈ ಭಾಷೆಯ ವೈಶಾಲ್ಯವನ್ನು ತಿಳಿಸಿಕೊಡಿರಿ, ಈ ವಿಶ್ವಶಕ್ತಿಯನ್ನು ಸಂಪಾದಿಸಿಕೊಂಡು ನಿರ್ಭೀತಿಯಿಂದಲೂ ಆನಂದದಿಂದಲೂ ಬಾಳಿರಿ.

* * * * *

# 7. ಸಂಸ್ಕೃತಭಾಷೆ

ಭಾಷೆಗಳ ಅಭಿಮಾನವೂ ದೇಶಗಳ ಅಭಿಮಾನವೂ ಎರಡು ವಿಧವಾಗಿರುತ್ತದೆ. 'ಹೆತ್ತವರಿಗೆ ಹೆಗ್ಗಣ ಮುದ್ದು' ಎಂಬ ನಾಣ್ಣುಡಿಯಂತೆ ಇದು ನಮ್ಮ ಭಾಷೆ, ಇದು ನಮ್ಮ ದೇಶ- ಎಂಬ ಕಾರಣದಿಂದ ಅವುಗಳಲ್ಲೆಲ್ಲ ಅಭಿನಿವೇಶವಿಟ್ಟುಕೊಂಡು ಸ್ವಭಾಷೆಯ ಕಾರಣದಿಂದ ಮಿಕ್ಕ ಭಾಷೆಗಳನ್ನೂ ಸ್ವದೇಶದ ಕಾರಣದಿಂದ ಮಿಕ್ಕ ದೇಶಗಳನ್ನೂ ಜರೆಯುವದು ಒಂದು ಬಗೆಯ ಅಭಿಮಾನ. ಈ ಭಾಷೆಯು ಎಲ್ಲಾ ಬಗೆಯಿಂದಲೂ ಅವಶ್ಯವಾಗಿ ಕಲಿಯಬೇಕಾದದ್ದು, ಆದ್ದರಿಂದ ಇದು ನಮ್ಮದೇ; ಈ ದೇಶವು ಎಲ್ಲಾ ಬಗೆಯಿಂದಲೂ ನನ್ನ ಏಳಿಗೆಗೆ ಕಾರಣವಾದದ್ದು, ಆದ್ದರಿಂದ ಇದರಲ್ಲಿ ನನಗೆ ಮಮತೆ- ಎಂದು ಸಕಾರಣವಾಗಿ ಇಟ್ಟುಕೊಳ್ಳುವ ಅಭಿಮಾನವು ಇನ್ನೊಂದು. ಸದ್ಯಕ್ಕೆ ನಮ್ಮಲ್ಲಿ ಅನೇಕರಿಗೆ ಇರುವ ಭಾಷಾಭಿಮಾನ ದೇಶಾಭಿಮಾನಗಳು ಮೊದಲನೆಯ ವರ್ಗಕ್ಕೆ ಸೇರಿದೆ ಎನ್ನಬೇಕಾಗಿದೆ.

ಸಂಸ್ಕೃತಭಾಷೆ ಎಂಬುದರಲ್ಲಿ ಯಾರಿಗಾದರೂ ಅಭಿಮಾನವಿದ್ದರೆ ಅದು ಅದರಲ್ಲಿರುವ ಸ್ವಾಭಾವಿಕವಾದ ಹಿರಿಮೆಯಿಂದ. ನಮ್ಮ ದೇಶದಲ್ಲಿರುವ ಯಾವ ಭಾಷೆಯವನೂ- ಅವನು ದುರಭಿಮಾನಿಯಾಗಿದ್ದ ಹೊರತು- ಸಂಸ್ಕೃತದ ಹಿರಿಮೆಯನ್ನು ಅಲ್ಲಗಳೆಯುವಂತಿಲ್ಲ. ಪರದೇಶಗಳಲ್ಲಿ ಈ ಭಾಷೆಯಲ್ಲಿ ಜನರು ಪ್ರೇಮವನ್ನು ತೋರಿಸುತ್ತಿದ್ದರೆ ಅದೂ ಇದರಲ್ಲಿರುವ ಹಿರಿಮೆಯಿಂದಲೇ. ಸಂಸ್ಕೃತದಲ್ಲಿರುವ ಗ್ರಂಥಗಳೊಳಗೆ ಕಾಣುವ ಭಾವಗಳ ವೈವಿಧ್ಯ, ಸಂಸ್ಕೃತಭಾಷೆಗಿರುವ ಬೆಳೆಯುವ ಸಾಮರ್ಥ್ಯ, ಸಂಸ್ಕೃತಗ್ರಂಥಕರ್ತರ ವಿಚಾರದ ವಿಶಾಲತೆ, ಸಂಸ್ಕೃತಭಾಷೆಯ ವಿಚಾರಗಳು ಇಹಪರಗಳೆರಡಕ್ಕೂ ದಾರಿಯನ್ನು ತೋರಿಸುವ ವ್ಯಾಪಕತೆ- ಇವುಗಳನ್ನು ಕೊಂಡಾಡುವದೇ ಪುನರುಕ್ತಿಯಾಗುವಂತಿದೆ.

ನಮ್ಮ ದೇಶಕ್ಕೆ ಸ್ವಾತಂತ್ರ್ಯವು ಬಂದಾಗ ಮಿಕ್ಕ ಭಾಷೆಗಳನ್ನು ಆದರಿಸುವ ಜನಸಂಖ್ಯೆಯ ದೃಷ್ಟಿಯಿಂದ ಇಂಥಿಂಥವು ಮಹಾಭಾಷೆಗಳು ಎಂದು ನಮ್ಮ ರಾಜ್ಯಾಂಗದ ಶಾಸನನಿಬಂಧನೆಯಲ್ಲಿ ಅವಕ್ಕೆ ಸ್ಥಾನವನ್ನು ಕೊಡಲಾಯಿತು. ಆದರೆ ಸಂಸ್ಕೃತಕ್ಕೂ ಅವುಗಳ ಜೊತೆಗೆ ಸ್ಥಾನವು ದೊರೆತದ್ದು ಸರ್ವಾನುಮತದಿಂದ ನಿರ್ಣಯವಾಗಿದ್ದು ಅದರ ಮಹಿಮೆಯಿಂದ; ಪೂರ್ಣಭಾರತದೇಶದ ಸಂಸ್ಕೃತಿಗೆ ಆದರ್ಶವಾಗಿರುವ, ಇಡಿಯ ದೇಶಕ್ಕೆಲ್ಲ ಒಂದು ಬಗೆಯ ಏಕತ್ವವನ್ನು ನೀಡುವ ಮಹಾಶಕ್ತಿಯು ಆ ಭಾಷೆಯಲ್ಲಿದ್ದದ್ದರಿಂದ.

ಈಗ ರಾಜಕೀಯ ಕಾರಣದಿಂದಾಗಿ, ಜನಗಳ ಅಂತಃಕಲಹದಿಂದಾಗಿ, ನಾವು ಆ ಅಮರವಾಣಿಯನ್ನು ಕಡೆಗಣಿಸುತ್ತಿದ್ದೇವೆ. ದೇಶಭಾಷೆ, ರಾಷ್ಟ್ರಭಾಷೆ (ಹಿಂದಿ), ಜನಾಂಗಗಳ ಪರಸ್ಪರ ಸಂಬಂಧವೀಯುವ ಭಾಷೆ (ಇಂಗ್ಲಿಷು)-ಎಂದು ಮೂರು ಭಾಷೆಗಳಿಗೆ ನಮ್ಮ ವಿದ್ಯಾಭ್ಯಾಸಕ್ರಮದಲ್ಲಿ ಸ್ಥಾನವನ್ನು ಕಲ್ಪಿಸುವದಕ್ಕೆ ತವಕಿಸುತ್ತಿದ್ದೇವೆ. ಇವೆಲ್ಲಕ್ಕೂ ಜೀವಾಳದಂತಿರುವ ಸಂಸ್ಕೃತವನ್ನು ಮರೆತು ನಮ್ಮ ದೇಶದ ಸಂಸ್ಕೃತಿಯನ್ನು ಮರೆಯುವದಕ್ಕೆ ರಸ್ತೆಯನ್ನು ಹಾಕಿಸುತ್ತಿದೇವೆ.

ಅಣ್ಣತಮ್ಮಂದಿರುಗಳಿರಾ, ಸತ್ಯವೇ ಕೊನೆಗೆ ಜಯಿಸುತ್ತದೆ. ಸದ್ಯದ ಸ್ಥಿತಿಯಲ್ಲಿ ಈ ಭಾಷೆಯನ್ನು ಸೆಕೆಂಡರಿ ಸ್ಕೂಲುಗಳಲ್ಲಿ ಅವಶ್ಯವಾಗಿ ಕಲಿಸುವದು ಆಗುವಹಾಗಿಲ್ಲವೆಂಬ ಕೆಲವು ಜನರ ಅವಿಚಾರ ರಮಣೀಯವಾದ ಮಾತಿಗೆ ಕಿವಿಗೊಡಬೇಡಿರಿ. ಅಮರವಾಣಿಯಾದ ಇದನ್ನು ಮೃತಭಾಷೆಯೆಂದು ಕರೆದು, ವಯಸ್ಸಿನಿಂದಲೂ ವಿವೇಕದಿಂದಲೂ ಹಿರಿಯರಾದವರನ್ನು ತಿರಸ್ಕರಿಸುವ ಮೂರ್ಖ ಬಾಲಕರಂತೆ, ತಿಳಿಗೇಡಿಗಳಾಗಬೇಡಿರಿ. ಈ ಭಾಷೆಯು ತಾನೂ ಅಮರ, ಎಂದಿಗೂ ಸಾಯದೆ ಇರತಕ್ಕಷ್ಟು ಜೀವರಸವುಳ್ಳದ್ದುಷಿ. ಇಂದಿಗೂ ಅದರಲ್ಲಿ ಎಲ್ಲಾ ವಿದ್ಯಾಸ್ಥಾನಗಳ ಗ್ರಂಥಗಳೂ ರಚಿತವಾಗುತ್ತಿವೆ; ಇಂದಿಗೂ ಆ ಭಾಷೆಯ ಮಾಧ್ಯಮದಿಂದಲೇ ಮಾತನಾಡುವ ಮತ್ತು ಪತ್ರವ್ಯವಹಾರವನ್ನು ಸಾಗಿಸುವ ಜನರು ಅನೇಕರಿರುತ್ತಾರೆ. ಇಂಗ್ಲಿಷು ಭೂಮಂಡಲದ ವ್ಯಾಪಕಭಾಷೆಯೇ ಸರಿ; ಅದರಿಂದ ನಮಗೆ ಈಗಿನ ವ್ಯವಹಾರಕ್ಕೆ ಪ್ರಯೋಜನವಾಗುತ್ತಿದೆ ಎಂಬುದೂ ಸುಳ್ಳಲ್ಲಷಿ. ಆದರೂ ಸರ್ವಪ್ರೋತ್ಸಾಹದಿಂದ ನಮ್ಮ ದೇಶದಲ್ಲಿ ಬೆಳೆದಿರುವ ಆ ಭಾಷೆಯನ್ನು ಬಲ್ಲವರು-ಎಂದರೆ ಅಷ್ಟಿಷ್ಟಾದರೂ ಅದರ ಪರಿಚಯವುಳ್ಳವರು-ಅತ್ಯಲ್ಪಸಂಖ್ಯೆಯವರಿದ್ದಾರೆ. ಅದೇ ಅರ್ಥದಲ್ಲಿ ಸಂಸ್ಕೃತವನ್ನು ಬಲ್ಲವರು, ಅದರ ಹತ್ತರಷ್ಟು ಸಂಖ್ಯೆಯವರಿದ್ದಾರೆ. ಆದರೆ ಸಂಖ್ಯೆ ಮುಖ್ಯವಲ್ಲಷಿ; ಭಾಷೆ ತಾನೂ ಅಮರ. ತನ್ನನ್ನು ಕಲಿಯುವವರನ್ನೂ ಮಾನವತೆಯ ಮೇಲುಮಟ್ಟಕ್ಕೇ ಅಲ್ಲದೆ ಅಮರರ ಸ್ಥಾನಕ್ಕೂ ಏರಿಸಬಲ್ಲದು.

ಸಂಸ್ಕೃತವನ್ನು ಕಲಿಯುವದು ಕಷ್ಟವೆಂಬ ಹುಚ್ಚುಕಲ್ಪನೆಯನ್ನು ಮಾಡಿಕೊಳ್ಳಬೇಡಿರಿ. ಇಂದಿನಿಂದಲೇ ಪ್ರಯತ್ನಿಸಿ ನೋಡಿರಿ. ಇಂಗ್ಲಿಷನ್ನು ಕಲಿಯುವದಕ್ಕೆ ಬೇಕಾದ ಶ್ರಮದಲ್ಲಿ ಅರ್ಧ ಅಥವಾ ಕಾಲುಪಾಲನ್ನು ಸಂಸ್ಕೃತಕ್ಕೆ ವಿನಿಯೋಗಿಸಿದರೂ ಅದರಲ್ಲಿ ಅದ್ಭುತಪಾಂಡಿತ್ಯವನ್ನು ನೀವು ಸಂಪಾದಿಸಿಕೊಳ್ಳಬಹುದು. ಅದರಿಂದ ದೇಶದ ಸಂಸ್ಕೃತಿಯ ಸಂಸ್ಪರ್ಶವನ್ನೂ ಪಡೆಯಬಹುದು. ಜನಸಾಮಾನ್ಯರ ಹೃದಯದ

ಮಿಡಿತವನ್ನು ಅರಿತುಕೊಂಡು ದೇಶದವರ ಮತ್ತು ನಿಮ್ಮ ಇಹಪರಗಳಿಗೆ ಬೇಕಾದ ಸತ್ಕಾರ್ಯಗಳನ್ನೂ ಕೈಕೊಳ್ಳಬಹುದು.

ಸಂಸ್ಕೃತವನ್ನು ಕಲಿಯುವೆನೆಂದು ಇಂದಿನಿಂದಲೇ ಸಂಕಲ್ಪವನ್ನು ಮಾಡಿರಿ. ಸಂಸ್ಕೃತವನ್ನು ನಮ್ಮ ಮಕ್ಕಳಿಗೆಲ್ಲ ಅವಶ್ಯವಾಗಿ ಕಲಿಯಿಸಬೇಕೆಂದು ಸರಕಾರದವರನ್ನು ಒತ್ತಾಯಪಡಿಸಿ ಕೇಳಿಕೊಳ್ಳಿರಿ. ಸಂಸ್ಕೃತದಲ್ಲಿ ಸಂಭಾಷಣೆಮಾಡುವದು, ಇತಿಹಾಸಪುರಾಣಗಳನ್ನು ಓದುವದು, ಹೇಳುವದು, ಕೇಳುವದು-ಮುಂತಾದ ಪ್ರಯತ್ನಗಳನ್ನು ಕೈಕೊಳ್ಳಿರಿ. ಶ್ರೀಮನ್ನಾರಾಯಣನು ನಿಮ್ಮ ಈ ಸತ್ಪ್ರಯತ್ನಕ್ಕೆ ಸಹಾಯವನ್ನು ಅವಶ್ಯವಾಗಿ ಮಾಡುವನು. ನಿಮ್ಮ ನಿಮ್ಮ ನೆರೆಯವರ ಮತ್ತು ದೇಶದವರ ಕಲ್ಯಾಣವು ಕಟ್ಟಿಟ್ಟಬುತ್ತಿಯಾಗುವದು.

* * * * *

## 8. ಸಂಸ್ಕೃತವು ಸರಕಾರಿಭಾಷೆಯಾದೀತೆ?

ಕಾಲಡಿಯಲ್ಲಿ ಸಂಸ್ಕೃತಸಂಮೇಳನವಾಯಿತು. ಅಲ್ಲಿ ಸಂಸ್ಕೃತವನ್ನು ಭಾರತದ ಸರಕಾರಿಭಾಷೆಯಾಗಿ ಏರ್ಪಡಿಸಬೇಕೆಂಬ ತೀರ್ಮಾನವಾಯಿತು. ಮತ್ತೊಂದು ತೀರ್ಮಾನವು ಕಲಕತ್ತೆಯಲ್ಲಿ ಆಗಿತ್ತು. ಇದು ಸಾಧ್ಯವೆ? ಎಂದು ಕೆಲವರ ಪ್ರಶ್ನೆ.

'ಸಂಸ್ಕೃತವು ಮಡಿಯಭಾಷೆ; ಅದು ಬ್ರಾಹ್ಮಣರು ಮಾತ್ರ ಆಡತಕ್ಕದ್ದು' ಎಂದು ಕೆಲವರೆನ್ನುತ್ತಿದ್ದರು. ಆ ಕಾಲವು ಎಂದೋ ಹೋಯಿತು. ಹಿಂದೆ ಅದು ಜನರು ಆಡಿಕೊಳ್ಳುವ ಭಾಷೆಯಾಗಿತ್ತೆಂಬುದಕ್ಕೆ ಆಧಾರಗಳಿವೆ. ಈಗಲೂ ಅದನ್ನು ಸಂಭಾಷಣೆಗೆ ಉಪಯೋಗಿಸುವದಕ್ಕೆ ಯಾವ ಅಡ್ಡಿಯೂ ಇಲ್ಲ. ಸಂಸ್ಕೃತದಿಂದ ಪ್ರಾಕೃತವೂ ಪಾಳಿಯೂ ಮಹಾರಾಷ್ಟ್ರ, ಗುಜರಾತಿ, ಬಂಗಾಳಿ- ಮುಂತಾದ ಭಾಷೆಗಳೂ ಹುಟ್ಟಿವೆ. ಈಗಲೂ ಆ ಭಾಷೆಗಳಲ್ಲಿ ಸಂಸ್ಕೃತಪದಗಳು ತುಂಬಿವೆ; ಮಿಕ್ಕಭಾಷೆಗಳಲ್ಲಿಯೂ ಅದರ ಪ್ರಭಾವವು ಕಡಿಮೆಯಿಲ್ಲ. ಆದ್ದರಿಂದ ಅದು ದೇಶದ ಸಂಸ್ಕೃತಿಯನ್ನು ಬೆಳೆಯಿಸುವದಕ್ಕೆ ತಕ್ಕ ಭಾಷೆ ಎಂಬುದು ನಿರ್ವಿವಾದವಾಗಿದೆ.

ಈಚೆಗೆ ದೇಶಭಾಷೆಗಳ ಆಶೆ ಹಿಡಿಸಲಾರದಷ್ಟಾಗಿಬಿಟ್ಟಿದೆ. ಅವು 'ನಾವೆಲ್ಲರೂ ಸರಕಾರಿಭಾಷೆಯಾಗುವದಕ್ಕೆ ಅರ್ಹರು' ಎಂದು ಕೂಗುವದಕ್ಕೆ ಮೊದಲುಮಾಡಿವೆ. ಇಂಥ ಭಾಷೆಗಳಲ್ಲಿ ಹಿಂದಿಭಾಷೆಯು ಎಲ್ಲಕ್ಕೂ ಮುಂದು; ಅದನ್ನು ಸರಕಾರದವರು

ಬೆನ್ನುತಟ್ಟುತ್ತಿರುವದರಿಂದ ಅದು ಈಗಾಗಲೆ 'ರಾಜಭಾಷೆ'ಯೆಂದುಕೊಳ್ಳುತ್ತಲಿದೆ. ಆದರೆ ಭಾರತವು ಒಂದೇ ಜನಾಂಗವೆನಿಸಿಕೊಳ್ಳುವದಕ್ಕೆ ತಕ್ಕ ಪುಷ್ಟಿಯನ್ನು ಕೊಡುವ ಮೂಲಭಾಷೆ ಸಂಸ್ಕೃತವಲ್ಲದಿದ್ದರೆ ಮತ್ತೆ ಯಾವದುತಾನೆ ಇದೆ? ನಮಗೆ ಇಹಪರದ ಪುರುಷಾರ್ಥಗಳ ಹಸಿವನ್ನು ಅಡಗಿಸಿ ತುಷ್ಟಿಯನ್ನು ಪುಷ್ಟಿಯನ್ನು ಕೊಡಬಲ್ಲ ಶಕ್ತಿ ಮತ್ತೆ ಯಾವ ಭಾಷೆಗೆ ಇದೆ?

ಇಂಗ್ಲಿಷು ವಿಶ್ವಜನಾಂಗಗಳ ಭಾಷೆಯಾಗುತ್ತಲಿದೆ. ಅದರಲ್ಲಿ ತತ್ಕಾಲದ ಜನರ ಆಶಾಪ್ರತೀಕ್ಷೆಗಳನ್ನೆಲ್ಲ ಪರಿಪೂರ್ತಿಗೊಳಿಸುವ ಯೋಗ್ಯತೆ ಇದೆ; ಪ್ರೌಢವಿದ್ಯಾಭ್ಯಾಸಕ್ಕೆ ತಕ್ಕ ಮಾಧ್ಯಮವಾಗುವ ಯೋಗ್ಯತೆ ಅದಕ್ಕೆ ಇದೆ; ಬೇರೆ ಬೇರೆ ದೇಶಗಳಿಗೆ ಸಾಮಾನ್ಯ ಭಾಷೆಯಾಗಬಹುದಾಗಿದೆ; ಜನನಾಯಕರುಗಳಿಗೂ ಜನಸಾಮಾನ್ಯಕ್ಕೂ ಸಂಬಂಧವನ್ನು ಮಾಡಿಕೊಡುತ್ತಿರುವ ಭಾಷೆಯು ಅದೊಂದೇ. ಆದರೆ ಅದು ಪರದೇಶದ ಭಾಷೆ. ಸಂಸ್ಕೃತಕ್ಕೆ ಈ ಎಲ್ಲ ಗುಣಗಳೂ ಇವೆ. ಅದನ್ನು ಎಲ್ಲರೂ ನಮ್ಮ ದೇಶದ ಭಾಷೆ ಎಂದು ಈರ್ಷ್ಯಾಸೂಯೆಗಳಿಲ್ಲದೆ ಕಾಣವುದಕ್ಕೆ ಬರುತ್ತದೆ. ಸಂಸ್ಕೃತವು ಇಂಗ್ಲಿಷನ್ನು ತಳ್ಳಿಹಾಕುವಂತಿಲ್ಲ. ಈ ಎರಡೂ ಅನ್ಯೋನ್ಯಪರಿಪೋಷಕವೂ ಆಗಬಹುದಾಗಿದೆ. ಸಂಸ್ಕೃತವನ್ನು ಭಾರತದವರೆಲ್ಲರೂ ಸುಲಭವಾಗಿ ಕಲಿಯಬಹುದು; ಕೆಲವರು ಇಂಗ್ಲಿಷನ್ನೂ ಕಲಿಯಬಹುದು.

ಸಂಸ್ಕೃತವು ಹಿಂದೆ ಒಂದು ಕಾಲದಲ್ಲಿ ಸರಕಾರಿಭಾಷೆಯೂ ಆಗಿತ್ತು. ಈಗೇಕಾಗಬಾರದು?

* * * * *

## 9. ಅಖಿಲಭಾರತಸಂಸ್ಕೃತಪ್ರಚಾರಸಭಾ

ಕಾಲಡಿಯಲ್ಲಿ (ತಾ||15-5-59) ಜರುಗಿದ ಅಖಿಲಭಾರತಸಮ್ಮೇಳನದಲ್ಲಿ ಮಾಡಿರುವ ಇಪ್ಪತ್ತೊಂದು ಗೊತ್ತುವಳಿಗಳೊಳಗೆಲ್ಲ **ಅಖಿಲಭಾರತಸಂಸ್ಕೃತ ಪ್ರಚಾರಸಭೆ**ಯೊಂದನ್ನು ಏರ್ಪಡಿಸಬೇಕೆಂಬ ತೀರ್ಮಾನವು ಹೆಚ್ಚಾಗಿ ನನ್ನ ಮನಸ್ಸಿಗೆ ಬಂದಿರುತ್ತದೆ. ಏಕೆಂದರೆ ಮಿಕ್ಕ ಗೊತ್ತುವಳಿಗಳಲ್ಲಿ ಸರಕಾರದವರ ಅಥವಾ ಮತ್ತೆ ಬೇರೆಯ ಸಂಸ್ಥೆಗಳ ಸಹಾಯದ ನಿರೀಕ್ಷೆಯೇ ಹೆಚ್ಚಾಗಿರುತ್ತದೆ. ಆದರೆ ಪ್ರಚಾರಸಭೆಯನ್ನು ಏರ್ಪಡಿಸುವದು ಮುಖ್ಯವಾಗಿ ನಮ್ಮನ್ನೇ ಅವಲಂಬಿಸಿರುತ್ತದೆ, ಇದಕ್ಕೂ ಸರಕಾರದಿಂದ ಇದನ್ನೊಂದು ಅಧಿಕಾರಯುಕ್ತಸಂಸ್ಥೆ ಎಂಬ ಒಪ್ಪಿಗೆಯನ್ನು

ಪಡೆಯಬೇಕೆಂಬ ಪುಚ್ಛವಾಕ್ಯವು ತೀರ್ಮಾನದಲ್ಲಿರುವದು ನಿಜ; ಆದರೆ ಒಪ್ಪಿಗೆಗೆ ಮೊದಲೇ ನಾವು ಸಂಸ್ಕೃತಭಾಷೆಯ ಪ್ರಚಾರಕ್ಕೆ ಏನು ಮಾಡಬೇಕೆಂಬುದನ್ನು ವಿಚಾರಿಸುವದಕ್ಕೆ ಇದರಿಂದ ಅವಕಾಶವುಂಟಾಗಿರುತ್ತದೆ. ಈ ವಿಷಯದಲ್ಲಿ ನನ್ನ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಹೊರಗೆಡಹುವೆನು.

**(1) ಸಂಸ್ಕೃತವು ಭೂಮಂಡಲದ ಪ್ರಧಾನಭಾಷೆ**ಗಳಲ್ಲಿ-ಎಂದರೆ ಮಿಕ್ಕ ಭಾಷೆಗಳಿಗೂ ಆ ಭಾಷೆಗಳನ್ನಾಡುತ್ತಿರುವ ಜನರಿಗೂ ಇಂದಿನವರೆಗೂ ಪರಮೋಪಕಾರವನ್ನು ಮಾಡಿರುವ ಭಾಷೆಗಳಲ್ಲಿ- ಅಗ್ರಸ್ಥಾನವನ್ನು ಹೊಂದಿರುವ ಭಾಷೆ ಎಂಬ ಅಭಿಪ್ರಾಯವು ಜನಸಾಮಾನ್ಯರಲ್ಲಿ ಮೂಡುವಂತೆ ಪ್ರಚಾರಸಭೆಯುವರು ಮೊಟ್ಟಮೊದಲು ಪ್ರಯತ್ನಿಸಬೇಕು. ಸಂಸ್ಕೃತಭಾಷೆಯನ್ನು ಪಾಶ್ಚಾತ್ಯಪುರಾತತ್ತ್ವ ಶೋಧಕರು ಕಂಡುಕೊಂಡಮೇಲೆಯೇ **ಭಾಷಾಶಾಸ್ತ್ರ** ಮತ್ತು **ತುಲನಾತ್ಮಕಧರ್ಮ ಚಿಂತನಶಾಸ್ತ್ರ**- ಇವೆರಡೂ ಜನ್ಮವನ್ನು ತಾಳಿದವು. ಅದುವರೆಗೆ ಭಾಷೆಯೆಲ್ಲವೂ ಧಾತುಜನ್ಯವಾಗಿರುವದೆಂಬ ತಿಳಿವಳಿಕೆಯಾಗಲಿ, ಧರ್ಮಗಳೆಲ್ಲವೂ ಒಂದೇ ತತ್ತ್ವವನ್ನು ಬೋಧಿಸುತ್ತಿರುವವೆಂಬ ತಿಳಿವಳಿಕೆಯಾಗಲಿ ಜನಗಳಿಗೆ ಇರಲೇ ಇಲ್ಲ.

**(2) ಸಂಸ್ಕೃತವು ಭಾಷೆಗಳಿಗೆಲ್ಲ ಮಾತೃಸ್ಥಾನದಲ್ಲಿದೆ** -ಎಂಬ ತಿಳಿವಳಿಕೆಯ ಪ್ರಚಾರವನ್ನು ಮಾಡುವದೂ ಅತ್ಯಂತ ಅವಶ್ಯ. ಬೇರೆಬೇರೆಯ ಭಾಷೆಗಳನ್ನು ಹೋಲಿಸಿನೋಡಿದಮೇಲೆ ನಾಗರಿಕಭಾಷೆಗಳಿಗೆಲ್ಲ ಸಮಾನವಾದ ಕೆಲವು ಶಬ್ದಗಳು ಇವೆಯೆಂಬುದನ್ನು ತಿಳಿದ ವಿದ್ವಾಂಸರು ಗ್ರೀಕ್, ಲ್ಯಾಟಿನ್, ಜರ್ಮನ್, ಪಾರ್ಸಿ, ಫ್ರೆಂಚ್, ಇಂಗ್ಲಿಷ್-ಮುಂತಾದವುಗಳೆಲ್ಲವೂ ಒಂದಾನೊಂದು ಪುರಾತನಭಾಷೆಯಿಂದ ಉತ್ಪನ್ನವಾಗಿರಬೇಕೆಂದು ಕಲ್ಪಿಸಿದರು. ಆ ಭಾಷೆಯು ಸಂಸ್ಕೃತವೇ ಎಂದು ಮೊದಮೊದಲು ಶೋಧಕರು ಒಪ್ಪಿಕೊಂಡರೂ ಈಚೆಗೆ ಯಾವದೋ ದುರಭಿಮಾನ ದಿಂದ **ಇಂಡೋ-ಯುರೋಪಿಯನ್** ಎಂಬ ಒಂದು ಕಲ್ಪಿತಭಾಷೆಯೇ ಆರ್ಯರ ಮೂಲಭಾಷೆ ಎಂಬ ಸಿದ್ಧಾಂತವನ್ನು ಪ್ರಚಾರಕ್ಕೆ ತಂದಿರುತ್ತಾರೆ. ಆ ಭಾಷೆಯ ಸ್ವರೂಪವನ್ನು ನಿರ್ಧಾರಮಾಡುವದಕ್ಕೂ ಪ್ರಯತ್ನಿಸುತ್ತಿದಾರೆ, ಆದರೆ ಅದು ಕಲ್ಪನಾ ಮಾತ್ರವಾಗಿದೆ, ಸಂಸ್ಕೃತಕ್ಕಿಂತ ಪುರಾತನವಾದ ಭಾಷೆಯನ್ನು ಈವರೆಗೆ ಯಾರೊಬ್ಬರೂ ಕಂಡುಕೇಳಿಲ್ಲ ; ಪುರಾತನಭಾಷೆಗಳೊಳಗೆ ಮತ್ತು ಆಧುನಿಕವಾದ ಅನೇಕಭಾಷೆ ಗಳೊಳಗೂ, ಸಂಸ್ಕೃತವೇ ಅತ್ಯಂತವಾಗಿ ಬೆಳೆದಿರುವ ಶಬ್ದಭಾಂಡಾಗಾರವುಳ್ಳದ್ದಾಗಿರುವ ಭಾಷೆಯಾಗಿದೆ. ಸಂಸ್ಕೃತವನ್ನು ಈಗಿನ ರೂಪದಲ್ಲಿ ಜನರು ಮಾತನಾಡದೆ ಇರಬಹುದು; ಆದರೆ ಅವರು ಮಾತನಾಡುತ್ತಿದ್ದ ಭಾಷೆಯೇ ಈಗಿನ ರೂಪಕ್ಕೆ

ಬಂದಿರುತ್ತದೆ. ಅತ್ಯಂತಪುರಾತನವಾದ ವೈದಿಕಭಾಷೆಗಿಂತಲೂ ರೂಪಾಂತರದಲ್ಲಿ ಸಂಸ್ಕೃತವು ಜನರ ಭಾಷೆಯಾಗಿತ್ತೆಂದು ಬೇಕಾದರೆ ಹೇಳಬಹುದು.

**(3) ಸಂಸ್ಕೃತವು ಭರತಖಂಡದ ಭಾಷೆಗಳಲ್ಲೆಲ್ಲ ಹಾಸುಹೊಕ್ಕಾಗಿದೆ-** ಎಂಬ ತಿಳಿವಳಿಕೆಯನ್ನು ಜನರಿಗೆ ಕೊಡಬೇಕು. ನಮ್ಮ ದೇಶದ ಸಂಸ್ಕೃತಿಗೂ ಭಾಷೆಗಳ ಬೆಳವಣಿಗೆಗೂ ಭಾಷೆಗಳ ಶಬ್ದಭಂಡಾರ, ಗ್ರಂಥರಚನೆಯ ಶೈಲಿ, ಶಾಸ್ತ್ರರಚನೆಯ ಕ್ರಮ, ಅಲಂಕಾರಛಂದಸ್ಸುಗಳೇ ಮುಂತಾದವುಗಳ ಏರ್ಪಾಡು ಎಲ್ಲಕ್ಕೂ- ಸಂಸ್ಕೃತವೇ ತಾಯಿಬೇರಾಗಿದೆ. ಬೇರನ್ನು ಕಿತ್ತರೆ ಮರವೆಲ್ಲ ಒಣಗುವಂತೆ, ಸಂಸ್ಕೃತವನ್ನು ಬಿಟ್ಟರೆ ನಮ್ಮ ಭಾಷೆಗಳು ಒಣಗಿಹೋದಾವು; ಆ ಭಾಷೆಗೆ ನೀರುಗೊಬ್ಬರವನ್ನು ಹಾಕಿದರೇ ಭಾಷೆಗಳೆಲ್ಲ ಪುಷ್ಟಿಯನ್ನು ಹೊಂದಿ ಚಿಗುರಿ ನಳನಳಿಸುವವು.

**(4) ಸಂಸ್ಕೃತಕ್ಕೆ ಸರಕಾರಿಯ ಭಾಷೆ ಅಡ್ಡಬರಬಾರದು-** ಎಂಬುದನ್ನು ಎಲ್ಲರೂ ಮನಗಾಣುವಂತೆ ಮಾಡಬೇಕು. ಮಹಮದೀಯರ ಕಾಲಕ್ಕೆ ಪಾರ್ಸಿ ಭಾಷೆಯಿದ್ದರೂ ಸಂಸ್ಕೃತಪಂಡಿತರಿಗೆ ಸ್ಥಾನವಿದ್ದದ್ದರಿಂದ ಆ ಭಾಷೆ ಹೇಗೋ ಬೆಳೆದುಕೊಂಡಿತು; ಇಂಗ್ಲಿಷು ಸರಕಾರದ ಭಾಷೆಯಾದಾಗಲೂ ಸಂಸ್ಕೃತವನ್ನು ಎರಡನೆಯ ಭಾಷೆಯಾಗಿ ಕಲಿಯುವವರಿಗೆ ಸ್ವಲ್ಪ ಅವಕಾಶವಿತ್ತು. ಆದರೆ ಈಗ ಹಿಂದೀ ರಾಷ್ಟ್ರಭಾಷೆಯಾದ ಮೇಲೆ ಸಂಸ್ಕೃತಕ್ಕೆ ಸೊನ್ನೆ ಬಿದ್ದಿದೆ. ಇದರಲ್ಲಿ ಹೊಟ್ಟೆಗೆ ಅನ್ನವನ್ನು ಹಾಕಲು ಒಪ್ಪದ ಕೈಕಾಲುಗಳಂತೆ ಹಿಂದೀಸಮೇತವಾಗಿ ಭಾಷೆಗಳೆಲ್ಲ ಕೃಶವಾಗುವ ಅಪಾಯವಿದೆ. ಸಂಸ್ಕೃತವೇ ಸರಕಾರಿಭಾಷೆಯಾಗುವದು ಸರ್ವೋತ್ತಮ. ಆಗ ವಿದ್ಯಾವಂತರೆಲ್ಲರೂ ಆ ಭಾಷೆಯನ್ನು ಅವಶ್ಯವಾಗಿ ಕಲಿಯುವರು; ಹಿಂದಿಯಂಥ ಒಂದು ಪ್ರಾಂತಭಾಷೆಯನ್ನು ಮತ್ತೊಬ್ಬರ ಮೇಲೆ ಬಲಾತ್ಕಾರವಾಗಿ ಹೇರುವ ಪ್ರಶ್ನೆ ಏಳುವದಿಲ್ಲ; ದೇಶಭಾಷೆಗಳು ಸಂಸ್ಕೃತದಿಂದ ಬೆಳೆದುಕೊಳ್ಳುವವು; ತಾವೆಲ್ಲ ಅಕ್ಕತಂಗಿಯರಂತೆ ಎಂಬ ಮೈತ್ರಿಯನ್ನೂ ಸಂಪಾದಿಸಿಕೊಳ್ಳುವವು.

**(5) ಸಂಸ್ಕೃತಭಾಷೆಯನ್ನು ಕಲಿಯುವದು ಕಷ್ಟವೆಂಬ ಭ್ರಾಂತಿಯನ್ನು ತೊಲಗಿಸಬೇಕು.** ಪ್ರತಿಯೊಂದು ದೇಶಭಾಷೆಯಲ್ಲಿಯೂ ಸಂಸ್ಕೃತವನ್ನು ಅತ್ಯಂತ ಸುಲಭವಾಗಿ ಕಲಿತುಕೊಳ್ಳಬಹುದಾದ ಪ್ರಕಾರವನ್ನು ಬೋಧಿಸುವ ಪುಸ್ತಕಗಳನ್ನು ಏರ್ಪಡಿಸಬೇಕು. ದೇಶಭಾಷೆಯು ಬರುವವರೆಲ್ಲ, ಹೆಂಗಸರು, ಮಕ್ಕಳು ಸಹ-ಅವುಗಳಿಂದ ಒಂದೆರಡು ವರ್ಷಗಳಲ್ಲಿ ಧಾರಾಳವಾಗಿ ಸಂಸ್ಕೃತ ಪುಸ್ತಕಗಳನ್ನು ಓದುವದಕ್ಕೆ, ಆ ಭಾಷೆಯಲ್ಲಿ ತಕ್ಕಮಟ್ಟಿಗೆ ಮಾತನಾಡುವದಕ್ಕೂ ಕಲಿಯುವದಕ್ಕೂ ತಕ್ಕ ಏರ್ಪಾಡುಗಳನ್ನು ಮಾಡಬೇಕು.

(6) ಸಂಸ್ಕೃತವನ್ನು ಸುಲಭವಾಗಿ ಓದಿ ಬೇರೆಬೇರೆ ದೇಶಗಳ ಮತ್ತು ನಮ್ಮ ದೇಶದ ಪ್ರಾಂತಗಳ ಸುದ್ದಿಯನ್ನು ತಿಳಿದುಕೊಳ್ಳುವಂತೆ ದೇವನಾಗರಿಯಲ್ಲಿ ಬರೆದ ಸಂಸ್ಕೃತವಾಕ್ಯಗಳೂ ಅಲ್ಲಲ್ಲಿಗೆ ದೇಶಭಾಷೆಯ ವಿವರಗಳೂ ಇರುವ **ವಾರಪತ್ರಿಕೆ, ಮಾಸಪತ್ರಿಕೆ, ತ್ರೈಮಾಸಿಕಪತ್ರಿಕೆ**-ಇವನ್ನು ಹೊರಡಿಸಬೇಕು. ಈಗಿನ ವಿದ್ಯಾವಂತರಿಗೆ ಸಹಾಯವಾಗುವಂತೆ ಇಂಗ್ಲಿಷಿನ ನೆರವನ್ನೂ ಪಡೆಯಬಹುದು.

(7) **ವಿದೇಶಗಳಲ್ಲಿ** ಸಂಸ್ಕೃತಪ್ರಚಾರವನ್ನು ಮಾಡುವದಕ್ಕೆ ತಕ್ಕ **ಸಂಸ್ಕೃತ-ಇಂಗ್ಲಿಷ್** ಪತ್ರಿಕೆಗಳನ್ನು ಹೊರಡಿಸುವ ಯೋಚನೆಮಾಡಬೇಕು. ಜನಾಂಗಗಳಿಗೆ ಅನ್ಯೋನ್ಯವಾಗಿ ಸಂಪರ್ಕವನ್ನುಂಟುಮಾಡುತ್ತಿರುವ ಇಂಗ್ಲೀಷಿಗೆ ಸಂಸ್ಕೃತದ ಸಹಾಯದಿಂದಲೂ ಆಧುನಿಕವಿಚಾರವನ್ನು ಅರಗಿಸಿಕೊಳ್ಳುವದಕ್ಕೆ ಹವಣಿಸುವ ಸಂಸ್ಕೃತಜ್ಞರಿಗೆ ಇಂಗ್ಲಿಷಿನ ಸಹಾಯದಿಂದಲೂ ಲಾಭವುಂಟೆಂಬುದನ್ನು ಮನಗಾಣಿಸಬೇಕು.

* * * * *

## 10. ಸಂಸ್ಕೃತವು ರಾಷ್ಟ್ರಭಾಷೆಯಾಗಬಲ್ಲದೆ?

ಈ ವರ್ಷದ (1960) ಏಪ್ರಿಲ್ ತಿಂಗಳಲ್ಲಿ ಶ್ರೀ ಚಪಲಾಕಾಂತಭಟ್ಟಾಚಾರ್ಯರೆಂಬವರು ಲೋಕಸಭೆಯಲ್ಲಿ ಒಂದು ಶಾಸನದ ಮಸೂದೆಯನ್ನು ವಿಮರ್ಶೆಗೆ ತಂದಿರುತ್ತಾರೆ. ಶಾಸನಘಟನೆಯ 343ನೆಯ ಘಟ್ಟದಲ್ಲಿರುವ 'ಹಿಂದಿ' ಎಂಬ ಪದದ ಮುಂದೆ 'ಮತ್ತು ಸಂಸ್ಕೃತ' ಎಂಬ ಪದಗಳನ್ನು ಸಮಾವೇಶಮಾಡಿ ಘಟನೆಯನ್ನು ಮಾರ್ಪಡಿಸಬೇಕು ಎಂಬುದು ಅವರ ಉದ್ದೇಶ.

ಸಂಸ್ಕೃತಭಾಷೆಯು ಎಷ್ಟೇ ಗುಣವಂತವಾಗಿರಲಿ, ಅದನ್ನು ಹಿಂದಿಯ ಜೊತೆಗೆ ಮತ್ತೊಂದು ರಾಷ್ಟ್ರಭಾಷೆಯನ್ನಾಗಿ ಮಾಡುವದು ಸರಿಯಾದೀತೆ?- ಎಂಬ ಪ್ರಶ್ನೆಯು ಈಗ ಭಾರತದೇಶದ ಜನರ ಮುಂದೆ ನಿಂತಿದೆ. ಇದಕ್ಕೆ ನಾವೆಲ್ಲರೂ ವಿಚಾರಪೂರ್ವಕವಾಗಿ ಉತ್ತರವನ್ನು ಕೊಡಲೇಬೇಕು. ಈ ಸಣ್ಣ ಲೇಖನದಲ್ಲಿ ನನ್ನ ಅಲ್ಪಮತಿಯ ಅಭಿಪ್ರಾಯವನ್ನು ಓದುಗರ ಮುಂದೆ ಇಟ್ಟಿರುತ್ತೇನೆ.

ಮೊಟ್ಟಮೊದಲನೆಯದಾಗಿ, 'ಸಂಸ್ಕೃತಭಾಷೆಯು ಮೃತಭಾಷೆಯಲ್ಲವೆ? ಅದು ಹೇಗೆ ರಾಷ್ಟ್ರಭಾಷೆಯಾದೀತು?' ಎಂಬ ಶಂಕೆಗೆ ಪರಿಹಾರವನ್ನು ನಾವು ಹೇಳತಕ್ಕದ್ದಿದೆ. ಮೃತಭಾಷೆಯೂ ಜನರ ಇಚ್ಛೆಗೆ ಬಂದರೆ ರಾಷ್ಟ್ರಭಾಷೆಯಾಗಬಲ್ಲ

ದೆಂಬುದಕ್ಕೆ ಇಸ್ರೇಲ್ ದೇಶದಲ್ಲಿ ಹೀಬ್ರೂ ಭಾಷೆಯ ಉದಾಹರಣೆಯಿದೆ. ಆದರೆ ಸಂಸ್ಕೃತವು ಹೀಬ್ರೂಭಾಷೆಯಂತೆ ಮೃತಭಾಷೆಯಲ್ಲಷಿ. ಅದರ ಸಹಾಯದಿಂದ ಈಗಲೂ ಭರತಖಂಡದ ಬೇರೆಬೇರೆಯ ಪ್ರಾಂತದ ಜನರು ತಮ್ಮತಮ್ಮ ಅಭಿಪ್ರಾಯ ಗಳನ್ನು ಸಂಭಾಷಣೆಯಿಂದಲೂ ಗ್ರಂಥರಚನೆಯಿಂದಲೂ ಒಬ್ಬರಿಗೊಬ್ಬರು ತಿಳಿಸುತ್ತಾಬರುತ್ತಿದಾರೆ. ಈಗಲೂ ಆ ಭಾಷೆಯು ನಮ್ಮ ದೇಶದ ಪ್ರಾಂತೀಯ ಭಾಷೆಗಳಿಗೆ ಶಬ್ದಭಂಡಾರವನ್ನು ಒದಗಿಸುತ್ತಾ ಇದೆ. ಭರತಖಂಡದವರ ಆಚಾರ ವಿಚಾರ ವೇಷಭಾಷೆಗಳು ಎಷ್ಟೇ ಭಿನ್ನವಾಗಿ ತೋರುತ್ತಿದ್ದರೂ ಸಂಸ್ಕೃತಭಾಷೆಯಲ್ಲಿ ಅಡಗಿರುವ ಸಂಸ್ಕೃತಿಯನ್ನೂ ವಿಚಾರಸರಣಿಯನ್ನೂ ಈಗಲೂ ಸ್ವಲ್ಪ ಹೆಚ್ಚುಕಡಿಮೆ ಮುಕ್ಕಾಲುಪಾಲು ಜನರು ಅನುಸರಿಸುತ್ತಿದಾರೆಂಬುದನ್ನು ನಾವು ಮನದಂದರೆ ಸಂಸ್ಕೃತವು ಈ ಅರ್ಥದಲ್ಲಿ ಜೀವಂತಭಾಷೆಯೇ ಆಗಿದೆ ಎಂದು ಎಲ್ಲರೂ ಒಪ್ಪಬೇಕಾಗುವದು.

ಹಿಂದಿಯ ಜೊತೆಗೆ ರಾಷ್ಟ್ರಭಾಷೆಯಾಗಿ ನಿಲ್ಲುವ ಯೋಗ್ಯತೆ ಸಂಸ್ಕೃತಕ್ಕಿದೆಯೆ? ಹಿಂದಿಯು ಬಹುಜನರು ಆಡುವ ಭಾಷೆ; ಸಂಸ್ಕೃತವು ಎಷ್ಟೇ ಆದರೂ ಗ್ರಂಥಸ್ಥ ಭಾಷೆಯಲ್ಲವೆ? -ಎಂಬುದೊಂದು ಶಂಕೆ ಕೆಲವರಲ್ಲಿ ಮೂಡಿಕೊಳ್ಳ ಬಹುದು. ಹಿಂದಿಯು ಬಹುಜನರು ಆಡುವ ಭಾಷೆಯೆಂದರೂ ಅದರಲ್ಲಿಯೂ ಭಾಷಾಪ್ರಭೇದಗಳಿವೆ ಎಂಬುದನ್ನು ಮರೆಯುವಂತಿಲ್ಲಷಿ. ಇನ್ನು ಅದು ರಾಷ್ಟ್ರಭಾಷೆಯಾಗುವದಕ್ಕೆ ಬೇಕಾದ ಶಬ್ದಭಂಡಾರವನ್ನು ಸಂಸ್ಕೃತದಿಂದಲೇ ಹೆಚ್ಚಿಸಿಕೊಳ್ಳಬೇಕಾಗಿದೆ; ಅಷ್ಟೇ ಅಲ್ಲಷಿ. ಸಂಸ್ಕೃತದ ನೆರವಿಲ್ಲದಿದ್ದರೆ ಅದರ ರಾಷ್ಟ್ರಭಾಷೆಯ ಬೊಕ್ಕಸವೇ ಬರಿದಾದೀತು ಎಂಬುದು ಒಂದು ಉದಾಹರಣೆಯಿಂದ ಸ್ಪಷ್ಟವಾಗುತ್ತದೆ. ಈಗ ರಾಜ್ಯಶಾಸನಘಟನೆಯಲ್ಲಿ ಬೇಕಾದ ಸರ್ಕಾರಿ ಭಾಷೆಯ ಪಾರಿಭಾಷಿಕಶಬ್ದಗಳು ಸ್ವಲ್ಪಹೆಚ್ಚುಕಡಿಮೆ ಎಲ್ಲವೂ ಸಂಸ್ಕೃತಭಾಷೆಯಿಂದಲೇ ಬಂದಿರುತ್ತವೆ. ಸಂಸ್ಕೃತದ ನೆರವು ತಮಗೆ ಅತ್ಯಂತ ಅವಶ್ಯವಾಗಿ ಬೇಕೆಂಬುದನ್ನು ಹಿಂದೀ ಜನಗಳೂ ಅರಿತಿದ್ದಾರೆ. ಆದ್ದರಿಂದಲೇ ಹಿಂದಿಯನ್ನು ಓದುವವರು ಕಡ್ಡಾಯದಿಂದ ಸಂಸ್ಕೃತವನ್ನು ಓದಬೇಕೆಂದು ಹಿಂದಿಪ್ರದೇಶದ ಸರಕಾರಗಳು ಶಾಸನವನ್ನು ಮಾಡಿಕೊಂಡಿರುತ್ತವೆ. ಆದ್ದರಿಂದ ಸಂಸ್ಕೃತವು ಸ್ವಯಂ ರಾಷ್ಟ್ರಭಾಷೆ ಯಾಗುವ ಯೋಗ್ಯತೆಯುಳ್ಳದ್ದುಷಿ, ಅದಕ್ಕೆ ಪ್ರೋತ್ಸಾಹವಿತ್ತರೆ ಹಿಂದಿಗೂ ಹೆಚ್ಚಿನ ಸಹಾಯವಾಗುತ್ತದೆ- ಎಂದಾಯಿತು.

ಇನ್ನು ಒಂದು ರಾಜ್ಯಕ್ಕೆ ಎರಡು ರಾಷ್ಟ್ರಭಾಷೆಗಳ ಆವಶ್ಯಕತೆಯೇನಿದೆ? ಒಂದೇ ರಾಷ್ಟ್ರಭಾಷೆಯಿದ್ದರೆ ಸಾಲದೆ? -ಎಂಬ ಪ್ರಶ್ನೆಯೊಂದು ಎದ್ದುಕೊಳ್ಳಬಹುದು. ಬಲುಸಣ್ಣರಾಷ್ಟ್ರಗಳಲ್ಲಿಯೂ ಎರಡು ಮೂರು ರಾಷ್ಟ್ರಭಾಷೆಗಳು ಇರುವ ಉದಾಹರಣೆಗಳು ಇದ್ದೇ ಇವೆ. ಆದ್ದರಿಂದ ನಮ್ಮ ದೇಶಕ್ಕೆ ಅವಶ್ಯವಾದರೆ ಹಿಂದಿಯ ಜೊತೆಗೆ ಮತ್ತೊಂದು ಭಾಷೆಯಿದ್ದರೆ ತಪ್ಪೇನೂ ಆಗುವದಿಲ್ಲವೆನ್ನಬೇಕು. ಆದರೆ ಸಂಸ್ಕೃತವು ನಿಜವಾಗಿ ಮತ್ತೊಂದು ಭಾಷೆಯಲ್ಲಷ್ಟೆ. ಹಿಂದಿಗೂ ಮಿಕ್ಕ ಅನೇಕ ದೇಶಭಾಷೆಗಳಿಗೆ ಹೇಗೋ ಹಾಗೆಯೇ ಅದು ಮಾತೃಭಾಷೆಯಾಗಿದೆ. ರಾಷ್ಟ್ರಭಾಷೆಯ ವಿಷಯದಲ್ಲಿ ಈಗ ದಕ್ಷಿಣೋತ್ತರಭಾರತಗಳ ಜನರ ಹೃದಯದಲ್ಲಿ ಉಂಟಾಗಿರುವ ವೈಷಮ್ಯದ ಕಲಂಕವನ್ನು ತೆಗೆದುಹಾಕುವದಕ್ಕೆ ಸಂಸ್ಕೃತವನ್ನು ರಾಷ್ಟ್ರಭಾಷೆಯಾಗಿ ಮಾಡುವದೊಂದೇ ಉಪಾಯ. ಏಕೆಂದರೆ ಹಿಂದಿಗೆ ವಿರುದ್ಧವಾಗಿರುವವರುಕೂಡ ಸಂಸ್ಕೃತದಲ್ಲಿ ಪೂಜ್ಯಬುದ್ಧಿಯುಳ್ಳವರಾಗಿರುತ್ತಾರೆ. ಆ ಭಾಷೆಗೆ ಪ್ರೋತ್ಸಾಹವು ದೊರೆತರೆ- ಬೇರಿಗೆ ನೀರೆರೆದರೆ ಕೊಂಬೆಗಳಿಗೆಲ್ಲ ಪೋಷಣೆ ದೊರೆಯುವಂತೆ- ಎಲ್ಲಾ ಪ್ರಾಂತೀಯಭಾಷೆಗಳಿಗೂ ಪೋಷಣೆ ದೊರೆತಂತೆ ಎಂಬುದು ಸರ್ವರಿಗೂ ಸಮ್ಮತವಾಗಿರುತ್ತದೆ.

ಸಂಸ್ಕೃತವು ಒಮ್ಮೆ ರಾಜಕೀಯಬಾಷೆಯಾಗಿದ್ದಿತೆಂಬುದಕ್ಕೆ ಅಲ್ಲಲ್ಲಿ ಸಂಸ್ಕೃತದಲ್ಲಿ ದೊರೆಯುವ ಶಾಸನಗಳೂ, ಅರ್ಥಶಾಸ್ತ್ರವೇ ಮುಂತಾದ ಗ್ರಂಥಗಳೂ, ಮನುಯಾಜ್ಞವಲ್ಕ್ಯಾದಿಸ್ಮೃತಿಗಳಲ್ಲಿರುವ ರಾಜಧರ್ಮವಿವರಣೆಯೂ ಸಾಕ್ಷ್ಯವನ್ನು ಕೊಡುತ್ತಿವೆ. ಭರತಖಂಡಕ್ಕೆಲ್ಲ ಏಕತ್ವಬುದ್ಧಿಯನ್ನು ಈಗಾಗಲೆ ಕೊಡುತ್ತಿರುವ ಈ ಭಾಷೆಯ ಯೋಗ್ಯತೆಯು ಮತ್ತಷ್ಟು ಹೆಚ್ಚುವದರಿಂದ ಇದು ರಾಷ್ಟ್ರಭಾಷೆ ಯಾಗುವದರಿಂದ ದೇಶಕ್ಕೆ ಎಲ್ಲಾ ಬಗೆಯಿಂದಲೂ ಲಾಭವೇ ಹೊರತು ಯಾವ ನಷ್ಟವೂ ಇಲ್ಲಷ್ಟೆ.

ಈಗಿರುವ ಸ್ಥಿತಿಯಲ್ಲಿ ಸಂಸ್ಕೃತವು ಕೆಲಕೆಲವು ಮತಗಳಿಗೆ ಬೇಕಾದಷ್ಟು ಗ್ರಂಥಗಳನ್ನು ಮಾತ್ರ ಬದುಕಿಸಿಕೊಂಡಿರುವ ಸ್ಥಿತಿಯಲ್ಲಿದೆ. ಆದರಲ್ಲಿರುವ ಲೌಕಿಕ ವಿಚಾರಗಳು -ಆಯುರ್ವೇದ, ವಾಸ್ತುವಿದ್ಯೆಷ್ಟೆ, ಸಂಗೀತವೇ ಮುಂತಾದ ಕಲೆಗಳು -ಅಡಕವಾಗಿರುವ ಗ್ರಂಥಗಳ ರಾಶಿಯು ದೇಶದಲ್ಲೆಲ್ಲ ಪುಸ್ತಕಭಂಡಾರ ಗಳಲ್ಲಿದ್ದುಕೊಂಡು ಮಹಾಜನರ ಪ್ರೋತ್ಸಾಹವನ್ನು ನಿರೀಕ್ಷಿಸುತ್ತಿದೆ. ಸನಾತನ ಧರ್ಮಾವಲಂಬಿಗಳು, ಜೈನರು, ಬೌದ್ಧರು, ಮುಸಲ್ಮಾನರುಕೂಡ ಈ ಭಾಷೆಯಲ್ಲಿ ಬರೆದಿರುವ ವಿವಿಧವಿಷಯಗಳ ಗ್ರಂಥಗಳು ಇನ್ನೂ ಪ್ರಕಾಶವಾಗದೆ ಇರುತ್ತವೆ.

ಸರಕಾರದ ಪ್ರೋತ್ಸಾಹವು ಸಿಕ್ಕಿದರೆ ಅವುಗಳೆಲ್ಲವೂ ಅತ್ಯಲ್ಪಕಾದಲ್ಲಿ ಬೆಳಕನ್ನು ಕಂಡಾವು; ಭಾರತಜನತೆಯ ಸಂಸ್ಕೃತಿಯ ವೈಶಾಲ್ಯವೂ ಲೋಕಶಾಂತಿಗೆ ಬೇಕಾಗಿರುವ ಸಾಧನಗಳ ಮೂಲವೂ ಸಂಸ್ಕೃತದ ಬೆಳವಣಿಗೆಯಿಂದ ಇಂದಿನ ಜಗತ್ತಿಗೆ ಸಿಕ್ಕಾವು.

ಭರತಖಂಡದ ಬೇರೆಬೇರೆಯ ಪ್ರದೇಶಗಳಲ್ಲಿರುವ ಜನರು ಈ ಮಹಾಭಾಷೆಯನ್ನು ಉಜ್ಜೀವನಗೊಳಿಸಿ, ಅದರಲ್ಲಿ ಆಧುನಿಕವಿಚಾರಗಳನ್ನು ತುಂಬುವ ಯೋಜನೆಯಲ್ಲಿ ಆಗಲೆ ತೊಡಗಿರುತ್ತಾರೆ. ಬೊಂಬಾಯಿ, ಮದರಾಸು, ಕೇರಳ- ಮುಂತಾದ ಪ್ರಾಂತಗಳಲ್ಲಿ ಈ ಭಾಷೆಯಲ್ಲಿ ಅಡಗಿರುವ ಜ್ಞಾನರಾಶಿಯನ್ನು ಬೆಳಕಿಗೆ ತಂದು ಭಾರತದೇಶನಿವಾಸಿಗಳಿಗೆಲ್ಲ ಹಂಚುವದು ಪರದೇಶಗಳಿಗೂ ಅದರಿಂದಾಗುವ ಉಪಕಾರವನ್ನು ಉಪಪಾದಿಸುವದು- ಈ ಕಾರ್ಯಗಳಲ್ಲಿ ಕೆಲವರು ಆಗಲೆ ಉದ್ಯುಕ್ತರಾಗಿರುತ್ತಾರೆ.

ಭಾಷಾಶಾಸ್ತ್ರಫಿ, ತುಲಾನಾತ್ಮಕಮತವಿಮರ್ಶೆ- ಮುಂತಾದ ಹೊಸಶಾಸ್ತ್ರಗಳಿಗೂ ಎಡೆಗೊಟ್ಟಿರುವ ಈ ಭಾಷೆಯಲ್ಲಿ ರಷ್ಯಫಿ, ಇಂಗ್ಲೆಂಡ್, ಅಮೆರಿಕ- ಮುಂತಾದ ಕಡೆಯವರೂ ಆದರವನ್ನು ತೋರಿಸುತ್ತಾ ಇರುತ್ತಾರೆ. ಸಂಸ್ಕೃತ ಗ್ರಂಥಗಳು ಬೇರೆಬೇರೆಯ ಭಾಷೆಗಳಿಗೆ ಪರಿವರ್ತನೆಯಾಗುತ್ತಿರುವದಲ್ಲದೆ, ಸಂಸ್ಕೃತಭಾಷೆಯ ಪರಿಚಯವನ್ನೂ ಸಂಭಾಷಣಾದಿಗಳನ್ನೂ ತಮ್ಮತಮ್ಮ ದೇಶದವರಿಗೆ ಹರಡುವ ದೇಶಗಳೂ ಭರತಖಂಡದ ಹೊರಗೆ ಇವೆ. ನಮ್ಮ ದೇಶದಲ್ಲಿಯೂ ಆ ಭಾಷೆಗೆ ರಾಷ್ಟ್ರಭಾಷೆಯ ಸ್ಥಾನವನ್ನು ಕೊಟ್ಟು ಹೊಳಪಿತ್ತರೆ, ವಿದ್ಯಾಭಿಮಾನಿಗಳಾದ ದೇವತೆಗಳು ನಲಿಯರೆ? ಇದನ್ನು ಅಧ್ಯಾತ್ಮಪ್ರಕಾಶದ ವಾಚಕರು ಪರ್ಯಾಲೋಚಿಸಬೇಕೆಂದು ಬೇಡುತ್ತೇನೆ.

* * * * *

# 11. ಸಂಸ್ಕೃತಭಾಷೆಯ ಮಹತ್ತ್ವ

'ಸಂಸ್ಕೃತವು ರಾಷ್ಟಭಾಷೆಯಾಗಬಲ್ಲದೆ?' ಎಂಬ ಹಿಂದಿನ ಲೇಖನಕ್ಕೆ ಕೆಲವರು ನಮ್ಮ ದೇಶದ ಬಂಧುಗಳು ಕೆಲವು ಅಡಚಣೆಗಳನ್ನು ತಿಳಿಸಿದ್ದು ನನ್ನ ಲಕ್ಷ್ಯಕ್ಕೆ ಬಂದಿತು. ಕೆಲವು ಆಕ್ಷೇಪಗಳಿಗೆ ನನ್ನ ಲೇಖನದಲ್ಲಿಯೇ ಉತ್ತರವಿರುವದರಿಂದ ಅವನ್ನು ಲಕ್ಷಿಸಬೇಕಾದದ್ದಿಲ್ಲಫಿ. ಆದರೆ ಗ್ರೀಕ್‌ಲ್ಯಾಟಿನ್ ಭಾಷೆಗಳಂತೆ ಸಂಸ್ಕೃತವೂ ನಮ್ಮ ದೇಶಭಾಷೆಗಳಲ್ಲಿ ತನ್ನ ಸಾರಸರ್ವಸ್ವಸಮೇತವಾಗಿ ಮುಳುಗಿರುವದರಿಂದ ಅದನ್ನು

ಕಡೆಗಣಿಸುವದರಿಂದ ಹಾನಿಯೇನೂ ಇಲ್ಲಷ್ಟೆ;[1] ಆದರಲ್ಲಿರುವ ಜಗದ್ವಂದ್ಯಗ್ರಂಥಗಳನ್ನು ಪ್ರಾದೇಶಿಕ ಭಾಷೆಗಳಿಗೂ ವಿಶ್ವಭಾಷೆಯಾದ ಇಂಗ್ಲಿಷಿಗೂ ಇಳಿಸಿದರೆ ಸಾಕು- ಎಂದು ಒಬ್ಬ ಮಹನೀಯರು ತಿಳಿಸಿರುತ್ತಾರೆ. ಸಂಸ್ಕೃತವು ರಾಜಕೀಯಾದಿವ್ಯವಹಾರಗಳಿಗೆ ಅವಶ್ಯವಲ್ಲ ಎಂದು ಇನ್ನೊಬ್ಬರು ಬರೆದಿದಾರೆ. ಕಷ್ಟವಾದ ಈ ಭಾಷೆಯನ್ನು ಯಾರೂ ಕಲಿಯುವದಕ್ಕೆ ಒಪ್ಪುವದಿಲ್ಲಷ್ಟೆ, ಕಲಿಯುವದು ಸಾಧ್ಯವೂ ಇಲ್ಲ -ಎಂದು ಮತ್ತೊಬ್ಬರು ಬರೆದಿದಾರೆ! ಈ ಬಾಷೆಯಲ್ಲಿರುವ ವಿಷಯಗಳನ್ನೆಲ್ಲ ದೇಶಭಾಷೆಗಳಿಗೆ ಯಥಾವತ್ತಾಗಿ ಇಳಿಸುವದು ಸಾಧ್ಯವಲ್ಲವೆಂಬುದು ಸಂಸ್ಕೃತಜ್ಞರಿಗೆ ಗೊತ್ತಿದೆ; ಸಂಸ್ಕೃತವು ದೇಶಭಾಷೆಗಳಲ್ಲಿ ಮುಳುಗಿಲ್ಲಷ್ಟೆ, ಅವುಗಳಿಗೆ ಪೋಷಣೆಯನ್ನು ಕೊಡುತ್ತಾ ಬೆಳೆಯುತ್ತಲೇ ಇದೆ ಎಂಬುದೂ ಇತ್ತೀಚೆಗೆ ಪ್ರಕಟವಾಗಿರುವ ಸಂಸ್ಕೃತಗ್ರಂಥಗಳನ್ನೂ ಬೇರೆಬೇರೆ ಪಂಡಿತಜನರ ಸಂಭಾಷಣೆಯನ್ನೂ ನೋಡಿದವರು ಒಪ್ಪುತ್ತಾರೆ. ರಾಜಕೀಯಾದಿ ವ್ಯವಹಾರಗಳಲ್ಲಿ ವಿಷಯಗಳನ್ನು ಅನುವಾದಮಾಡುವಾಗ ಪಾರಿಭಾಷಿಕಶಬ್ದಗಳನ್ನು ಸಂಸ್ಕೃತದಲ್ಲಿಯೇ ಈಗಲೂ ಕಲ್ಪಿಸುತ್ತಿದಾರೆ ಎಂಬುದು ಎಲ್ಲರಿಗೂ ತಿಳಿದಿದೆ. ದೇಶೀಯಭಾಷೆಗಳಿಗೆ ವ್ಯವಹಾರದಲ್ಲಿ ಕೆಲವು ಪರದೇಶದ ಶಬ್ದಗಳು ಬರುವಂತೆ ಸಂಸ್ಕೃತದಲ್ಲಿಯೂ ಬಂದು ಸೇರುವದಕ್ಕೆ ಅಡ್ಡಿಯೇನೂ ಇಲ್ಲ ಎಂಬುದು ತತ್ತ್ವವಿಮರ್ಶಕರಿಗೆ ಗೊತ್ತೇ ಇದೆ. ಭೌತಿಕಶಾಸ್ತ್ರದ ಶಬ್ದಗಳಿಗಾಗಿ ಇಂಗ್ಲಿಷನ್ನೇ ಕಲಿಯಬೇಕೆಂಬುದನ್ನು ಪ್ರಗತಿಪರವಾಗಿರುವ ಯಾವ ದೇಶದವರೂ ಒಪ್ಪಿಲ್ಲಷ್ಟೆ. ಈ ಸಂಸ್ಕೃತವನ್ನು ಕಲಿಯುವದು ಅಷ್ಟೇನೂ ಕಷ್ಟವಲ್ಲಷ್ಟೆ; ಇಂಗ್ಲಿಷನ್ನು ಕಲಿಯುವದಕ್ಕೆ ನಾವು ವೆಚ್ಚಮಾಡುತ್ತಿರುವ ಹಣದ ಮತ್ತು ಬೌದ್ಧಿಕಶ್ರಮದ ಅರ್ಧಪಾಲನ್ನು ಉಪಯೋಗಿಸಿದಮಾತ್ರದಿಂದ ಆ ಭಾಷೆಗಿಂತಲೂ ಸಂಸ್ಕೃತವು ಹೆಚ್ಚುವೇಗದಿಂದ ಅನಾಯಾಸವಾಗಿ ದೇಶದಲ್ಲೆಲ್ಲ ಹಬ್ಬಿಕೊಳ್ಳಬಲ್ಲದೆಂಬುದನ್ನು ಪರೀಕ್ಷೆಯಿಂದ ಮನಗಾಣಬಹುದಾಗಿದೆ. ಆದ್ದರಿಂದ ವಿಚಾರವಿಲ್ಲದೆ ಆಕ್ಷೇಪಣೆಗಳನ್ನೊಡ್ಡುವದು ಸಾಕು; ಇನ್ನು ಮೇಲಾದರೂ ನಿಜವಾಗಿರುವ ಸಂಸ್ಕೃತದ ಮಹಿಮೆಯನ್ನು ನಿಷ್ಪಕ್ಷಪಾತದೃಷ್ಟಿಯಿಂದ ನೋಡಿ ಒಪ್ಪಿಕೊಳ್ಳೋಣ.

ಈ ಲೇಖನದಲ್ಲಿ ನಾನು ಸಂಸ್ಕೃತದ ಮಹತ್ತ್ವವನ್ನು ಕುರಿತು ಪರದೇಶದ ವಿದ್ವಾಂಸರಾದ ವಿಮರ್ಶಕರೂ ನಮ್ಮ ದೇಶದಲ್ಲಿ ಉಚ್ಚಸ್ಥಾನವನ್ನು ಏರಿರುವ

---

1. 'Sahitya Academy, Govt. Estate, Madras-2 ಇವರು ಪ್ರಕಟಿಸುವ 'ಸಂಸ್ಕೃತ ಪ್ರತಿಭಾ' ಎಂಬ ಷಾಣ್ಮಾಸಿಕ ಪತ್ರಿಕೆಯಲ್ಲಿರುವ ಲೇಖನಗಳನ್ನು ಓದಿದವರಿಗೆ ಸಂಸ್ಕೃತವು ಜೀವಂತವೆಂಬುದು ಮನದಟ್ಟಾಗುವದರಲ್ಲಿ ಸಂದೇಹವಿಲ್ಲಷ್ಟೆ.

ಮಹಾಶಯರೂ ಏನು ಹೇಳಿದ್ದಾರೆಂಬುದಿಷ್ಟನ್ನು ಮಾತ್ರ ಬರೆಯುವೆನು. ದ್ರಾಕ್ಷೆಯಹಣ್ಣನ್ನು ಎಟುಕಲಾರದೆ ನರಿಯು ಹುಳಿ ಎಂದು ಹೇಳಿದಮಾತ್ರದಿಂದ ಅದರ ಮಾಧುರ್ಯಕ್ಕೇನೂ ಕುಂದಿಲ್ಲವಷ್ಟೆ?

(1) **ಫ್ರಾನ್ಸ್‌ಬಾಪ್** (France Bopp):- 'ಒಂದಾನೊಂದು ಕಾಲದಲ್ಲಿ ಸಂಸ್ಕೃತವೊಂದೇ ಭೂಲೋಕದ ಭಾಷೆಯಾಗಿತ್ತು.'

(2) **ಮಾಕ್ಸ್ ಮುಲ್ಲರ್** (Prof. Max Muller):- 'ಸಂಸ್ಕೃತವು ಈ ಲೋಕದಲ್ಲಿರುವ ಸರ್ವೋಚ್ಚಭಾಷೆ.'

(3) **ಟೇಲರ್** (Taylor):- 'ಯೂರೋಪುಖಂಡವು ಸರ್ವೋತ್ತಮ ಭಾಷೆಗಳೆಂದು ಸಿದ್ಧಾಂತಪಡಿಸಿರುವ ಭಾಷೆಗಳಿಗೆಲ್ಲ ತಾಯಿಯಿದು.'

(4) **ಡಾ|| ಲೂಯಿ ರೆನಾನ್** (Dr. Louis Renen):- 'ಇಂಡಿಯಕ್ಕೂ ಸಂಸ್ಕೃತಕ್ಕೂ ಅವಿನಾಭಾವಸಂಬಂಧವಿದೆ. ಇಂಡಿಯವು ನಮ್ಮ ವಂಶದವರ ಮಾತೃಭೂಮಿ, ಸಂಸ್ಕೃತವು ಯೂರೋಪಿನ ಭಾಷೆಗಳ ತಾಯಿ. ಸಂಸ್ಕೃತವೇ ನಮ್ಮ ತತ್ತ್ವಶಾಸ್ತ್ರಗಳ ಜನನಿ; ಅರಬ್ಬಿಯವರ ಮೂಲಕ ನಮ್ಮ ಗಣಿತಶಾಸ್ತ್ರದ ಬಹ್ವಂಶಕ್ಕೆ ತಾಯಿ; ಬುದ್ಧನ ದ್ವಾರದಿಂದ ಕ್ರಿಸ್ತಿಯನ್‌ಮತದಲ್ಲಿರುವ ಧ್ಯೇಯಗಳಿಗೆ ತಾಯಿ; ಗ್ರಾಮಪಂಚಾಯಿತಿಯ ಮೂಲಕ ಸ್ವರಾಜ್ಯಕ್ಕೂ ಪ್ರಜಾಸತ್ತೆಗೂ ತಾಯಿ. ಭಾರತಮಾತೆಯು ಅನೇಕಪ್ರಕಾರಗಳಿಂದ ನಮಗೆಲ್ಲ ಮಾತೆಯಾಗಿರುತ್ತಾಳೆ' !

ಈಗ ನಮ್ಮ ದೇಶದ ಕೆಲವು ಸುಪ್ರಸಿದ್ಧವ್ಯಕ್ತಿಗಳ ಅಭಿಪ್ರಾಯವನ್ನು ಕೇಳೋಣ :

(1) **ಶ್ರೀ ಜವಹರಲಾಲ್ ನೆಹರು** 1934:-'ಎಷ್ಟೋ ಶತಮಾನಗಳಿಂದ, ಅಥವಾ ಯುಗಾಂತರಗಳಿಂದಲೂ, ಸಾಂಪ್ರದಾಯಿಕವಾದ ಸಂಸ್ಕೃತ ವಿದ್ಯಾಭ್ಯಾಸವು ನಡೆಯುತ್ತಲೇ ಬಂದಿದೆ. ಈ ನಮ್ಮ ಜನಾಂಗದ ಸಂಸ್ಕೃತಿಯೇ ಭಾರತದ ನಾಗರಿಕತೆಗೆ ಇಂಥ ದೀರ್ಘಾಯುಸ್ಸನ್ನು ಕೊಟ್ಟಿರುವದು.'

(1955): 'ಸಂಸ್ಕೃತವು ಭಾರತದೇಶೀಯರ ಸಂಸ್ಕೃತಿಯ ಉತ್ತಮವಿಭೂತಿಯಾಗಿರುತ್ತದೆ.' ಪ್ರಾಚೀನಕಾಲದಂತೆ ಭವಿಷ್ಯತ್ಕಾಲದಲ್ಲಿಯೂ ಇದೊಂದು ಉತ್ತಮ ವಿಚಾರಪ್ರಸಾರಕಸಾಧನವಾಗಿರುವದೆಂಬ ಪ್ರತ್ಯಾಶೆಯನ್ನು ಆಗ ನೆಹರುರವರು ಸೂಚಿಸಿರುತ್ತಾರೆ.

(2) **ಶ್ರೀ ಕೆ.ಎಮ್. ಮುನ್ಷಿ** (1954) :-ಉತ್ತರಪ್ರದೇಶದ ಗವರ್ನರಾಗಿದ್ದಾಗ: ''ಮಾನವನ ಮನಸ್ಸಿನಲ್ಲಿ ನೆಲಸಿರುವ- ನಾಚಿಗೆಗೆಟ್ಟ ಅಹಂಕಾರ ಲಾಲಸೆಯ ರೂಪವಾಗಿರುವ- ಚಾರ್ವಾಕವಾಸನೆಯನ್ನು ತಪ್ಪಿಸಬೇಕಾದರೆ ಮಾನವರನ್ನೆಲ್ಲ ಒಗ್ಗಟ್ಟುಮಾಡಬೇಕಾದರೆ, ಸಂಸ್ಕೃತಾಭ್ಯಾಸವೊಂದೇ ಉಪಾಯ ವೆಂಬುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ ಯಾವಯಾವಾಗ ಸಂಸ್ಕೃತಾಧ್ಯಯನವು ಅಭಿವೃದ್ಧಿಯನ್ನು ಹೊಂದುವದೋ, ಆಗಾಗ ಜನರು ಔನ್ನತ್ಯದ ಮಟ್ಟವನ್ನೇರುತ್ತಿರುವರು.''

(1956): ''ಸಂಸ್ಕೃತವೊಂದಿಲ್ಲದಿದ್ದರೆ ಭಾರತವೆಂದರೆ ಬರಿಯ ಪ್ರಾಂತಭಾಷೆಗಳ ಸಿವುಡೆಂದಾಗುವದು. ಅದಿಲ್ಲದಿದ್ದರೆ ಭಾರತದ ಭಾಷೆಗಳಿಗೆ ಹೊಂದುಗೆಯಿರಲಾರದು; ಅದರ ನಿವಾಸಿಗಳು ಹೆಮ್ಮೆಪಡಬಹುದಾದ ಪುರ್ವಜರ ಸಂಪಾದನೆಯೇನೂ ಉಳಿದಿರುವದಿಲ್ಲಘಿ; ಎಲ್ಲರಿಗೂ ಸಮಾನವಾಗಿರುವ ಸಂಸ್ಕೃತಿಯೇ ಇರುವದಿಲ್ಲಘಿ. ಅದಿಲ್ಲದಿದ್ದದರೆ ಭಾರತಕ್ಕೆ ಯಾವ ನೀತಿಯ ಆಲಂಬನೆಯೂ ಇರುವದಿಲ್ಲಘಿ, ಉಪದೇಶಿಸುವ ಹೊಸ ವಿಷಯವೇನೂ ಇರುವದಿಲ್ಲಘಿ. ಮಾನವವರ್ಗಕ್ಕೆ ಕೊಡುವ ಸಂದೇಶವೂ ಅದಕ್ಕೆ ಯಾವದೂ ಇರುವದಿಲ್ಲಘಿ.''

**ಶ್ರೀ ಸಂಪೂರ್ಣಾನಂದರು :-** ಉತ್ತರಪದೇಶದ ಮುಖ್ಯಮಂತ್ರಿಗಳು (1955) 'ಸಂಸ್ಕೃತದಲ್ಲಿ ಜನಾಂಗದ ಭಾಷೆಯಾಗುವ ಶಕ್ತಿಗಳೆಲ್ಲ ಇವೆ ಎಂಬುದು ನನ್ನ ಭಾವನೆ.'

**ಡಾ|| ಪಟ್ಟಾಭಿರಾಮಯ್ಯನವರು** ಮಧ್ಯಪ್ರದೇಶದ ಗವರ್ನರಾಗಿದ್ದಾಗ: (1957) ಸಂಸ್ಕೃತವನ್ನು ಇನ್ನುಮೇಲೆ ನಾವು ಮೃತಭಾಷೆಯೆಂದು ಎಣಿಸುವ ಹಾಗೇ ಇಲ್ಲಘಿ. ಅದನ್ನು ಜೀವಂತಭಾಷೆಯಾಗಿ ಮಾಡುವದು ನಮ್ಮ ಕೈಯಲ್ಲಿದೆ ! ಸಂಸ್ಕೃತವನ್ನು ಕಡೆಗಣಿಸಿದ್ದರಿಂದಲೇ ಅದು ಮೃತಭಾಷೆಯಾಗಿದ್ದುಕೊಂಡಿದೆ. ಸಂಸ್ಕೃತವನ್ನು ಜನಾಂಗದ ಭಾಷೆಯೆಂದು ಒಪ್ಪಿದರೆ ದಕ್ಷಿಣದೇಶದವರಾದ ನಮ್ಮಗಳಿಗೆ ನಷ್ಟವೇನೆಂಬುದು ನನಗೆ ತಿಳಿಯಲೊಲ್ಲದು. ಹಿಂದಿಗಿಂತ ಸಂಸ್ಕೃತವು ನಮಗೆ ಚೆನ್ನಾಗಿ ತಿಳಿಯುತ್ತದೆ. ತೆಲುಗಿನಲ್ಲಿ ನೂರಕ್ಕೆ 60 ಭಾಗ ಸಂಸ್ಕೃತ ಬೆರೆತಿದೆ; ಮಲಯಾಳವು ಸಂಸ್ಕೃತಸಮಾಸಗಳನ್ನೇ ಒಟ್ಟೊಟ್ಟಾಗಿ ಸೇರಿಸಿಕೊಂಡಿರುತ್ತದೆ.

**ಸರದಾರ್ ಪನಿಕ್ಕರ್** (1954) :- ಸಂಸ್ಕೃತವೊಂದೇ ಜನಾಂಗದ ಪಿತ್ರಾರ್ಜಿತವಾಗಿತ್ತು. ದಕ್ಷಿಣ ಉತ್ತರ, ಪಶ್ಚಿಮ, ಪೂರ್ವ- ಎಲ್ಲಾ ಕಡೆಯವರೂ ಈ

ಭಾಷೆಗೆ ಸೇವೆಯನ್ನು ಮಾಡಿರುತ್ತಾರೆ. ಇದೊಂದೇ ಜನಾಂಗದ ಪಿತ್ರಾರ್ಜಿತವೆನ್ನುವದು ಹಾಗಿರಲಿ, ನಮ್ಮ ಜನಾಂಗದ ನಡತೆಯ ಮೂಲ, ನಮ್ಮ ವಿಚಾರದ ರೂಪವಿಶೇಷ, ನಮ್ಮ ಅಭಿಪ್ರಾಯಗಳಿಗೆಲ್ಲ ಮೂಲವು ಸಂಸ್ಕೃತದಲ್ಲಿಯೇ ಇರುವದರಿಂದ ಸಂಸ್ಕೃತ ಪರಿಚಯವು ನಿಜವಾದ ಭಾರತೀಯನೆಂದುಕೊಳ್ಳುವ ಪ್ರತಿಯೊಬ್ಬನಿಗೂ ಅವಶ್ಯಕ. ದೇಶಭಾಷೆಗಳಿಗೆಲ್ಲ ಅಽಕಷ್ಟಾತೃವಾಗಿರುವ ಸ್ಥಾನವು ಸಂಸ್ಕೃತಕ್ಕಿದೆಯೇ ಹೊರತು ಹಿಂದಿಗೆ ಎಂದಿಗೂ ಆ ಸ್ಥಾನವು ತನ್ನದೆನ್ನುವ ಎದೆ ಬರಲಾರದು. ಭಾರತದ ಏಕತ್ವವನ್ನು ನಿಲ್ಲಿಸಿಕೊಂಡು ಹಿಡಿದೆತ್ತುವ ಯೋಗ್ಯತೆಯು ಸಂಸ್ಕೃತಕ್ಕೆ ಪ್ರತಿಯೊಂದು ಪ್ರಾಂತದಲ್ಲಿಯೂ ಉಂಟು.'

**ಡಾ|| ರಾಜೇಂದ್ರಪ್ರಸಾದ್, ಭಾರತರಾಷ್ಟ್ರಾಧಿಪತಿಗಳು** (1955):- ಸಂಸ್ಕೃತವೊಂದೇ ಅನೇಕ ಶತಮಾನಗಳಿಂದ ಭಾರತದ ಏಕತ್ವಕ್ಕೆ ಮುಖ್ಯಾಧಾರವನ್ನು ಒದಗಿಸಿತೆಂದು ಜನರು ಹೇಳುವದನ್ನು ನಾನು ಕೇಳಿರುತ್ತೇನೆ. ಎರಡು ಸಾವಿರ ವರ್ಷಗಳ ಹಿಂದೆ ಭಾರತವು ಈಗಿರುವದಕ್ಕಿಂತಲೂ ವಿಶಾಲತರವಾಗಿದ್ದಿರಬೇಕು; ಆಗಲೂ ಬೇರೆಬೇರೆ ದೂರದೇಶಗಳಲ್ಲಿರುವ ಜನರು ಒಬ್ಬರಿಗೊಬ್ಬರ ಸಂಬಂಧವನ್ನಿಟ್ಟುಕೊಂಡಿದ್ದರು. ಅವರಿಗೆಲ್ಲ ವ್ಯವಹಾರಕ್ಕೆ ಮಾಧ್ಯಮವಾಗಿದ್ದದ್ದು ಸಂಸ್ಕೃತವೇ. ಬೇರೆಬೇರೆಯ ದೇಶಗಳಲ್ಲಿ ಆಯಾ ಭಾಷೆಗಳನ್ನು ಜನರೆ ಮಾತನಾಡುತ್ತಿದ್ದರೂ ಸಂಸ್ಕೃತವೊಂದೇ ಅಖಿಲಜನಾಂಗದ ಭಾಷೆಯಾಗಿತ್ತುಕ. ಎಷ್ಟೋ ಶತಮಾನಗಳವರೆಗೆ ಜನಾಂಗದ ಭಾಷೆಯಾಗಿತ್ತೆಂದು ನಾವು ಹೇಳಬಹುದು. ಒಂದು ದೇಶವು ಮತ್ತೊಂದಕ್ಕೆ ಎಷ್ಟೇ ದೂರವಾಗಿರಲಿ, ಜನರೂ ಅವರ ಭಾಷೆಗಳೂ ಎಷ್ಟೇ ಭಿನ್ನಭಿನ್ನವಾಗಿರಲಿ- ಸಂಸ್ಕೃತವೊಂದೇ ಎಲ್ಲರನ್ನೂ ಒಗ್ಗೂಡಿಸುವ ಶಕ್ತಿಯಾಗಿತ್ತುಕ.

**ಡಾ|| ಕೈಲಾಸನಾಥ ಖಟ್ಜು** ಒರಿಸ್ಸಾ ಗವರ್ನರಾಗಿದ್ದಾಗ (1957):- 'ಸಂಸ್ಕೃತವು ಪ್ರಾಂತೀಯಭಾಷೆಗಳಿಗೆಲ್ಲ- ಅರೇಬಿಯ ಅಥವಾ ಪರ್ಷಿಯ ದೇಶಗಳ ಅಪೇಕ್ಷೆಯಿಲ್ಲದಿರುವ ಭಾಷೆಗಳಿಗೆಲ್ಲ- ಮಾತೃವಾಗಿರುತ್ತದೆ. ನಮ್ಮ ಜನಾಂಗದ ಜೀವನದಲ್ಲಿ ಸಂಸ್ಕೃತವೊಂದೇ ಏಕೀಕರಣಕ್ಕೊಂದು ಮಹಾಶಕ್ತಿಯಾಗಿರುವದೆಂದು ನನ್ನ ದೃಢನಂಬಿಕೆ. ಅದು ನಮ್ಮ ಪ್ರಾಚೀನಸಂಸ್ಕೃತಿಗೆ ಸಮಬಂಧವನ್ನು ಕಲ್ಪಿಸುತ್ತದೆ; ಸಂಸ್ಕೃತವನ್ನು ಜನಾಂಗದ ಭಾಷೆಯಾಗಿ ವಿಸ್ತರಿಸಿದರೆ ಪ್ರಾಂತೀಯ ಭಾಷೆಗಳ ವಿಕಾಸಕ್ಕೂ ಸಾಧನವಾಗುತ್ತದೆ'.

ಪಶ್ಚಿಮ ಬಂಗಾಳದ ಗವರ್ನರಾಗಿದ್ದಾಗ (1949) ಸಂಸ್ಕೃತವು ಸರಕಾರದ ಭಾಷೆಯಾಗಬೇಕೆನ್ನುವದಕ್ಕೆ ಅವರು ಸಮ್ಮತಿಯಿತ್ತಿದ್ದರು. ಯೂನಿಯನ್ ಹೋಮ್

ಮಿನಿಸ್ಟರ್ ಆಗಿದ್ದಾಗ (1955) ಸಂಸ್ಕೃತವು ಜನಾಂಗದ ಭಾಷೆಯಾಗತಕ್ಕದ್ದೆಂಬ ಅಭಿಪ್ರಾಯವು ಈಗಲೂ ನನಗಿದೆ ಎಂದರು; ಈ ಬಗ್ಗೆ ಶಾಸನ ಘಟನೆಯು ಮುಂದೆ 25 ವರ್ಷಗಳೊಳಗೆ ತಿದ್ದುಪಡಿಯಾಗುವದೆಂಬ ಭರವಸೆಯನ್ನೂ ತೋರಿಸಿದರು.

ಸಂಸ್ಕೃತವು ಇಡಿಯ ಭಾರತದ ಸರಕಾರಿಯ ಭಾಷೆಯಾಗಬೇಕೆಂಬುದಕ್ಕೆ ದೇಶದ ಪ್ರಮುಖರ ಸಮ್ಮತಿ ಎಷ್ಟರಮಟ್ಟಿಗೆ ಇದೆ ಎಂಬುದನ್ನು ವಾಚಕರು ಇದರಿಂದ ಮನದಟ್ಟುಮಾಡಿಕೊಳ್ಳಬಹುದು. ಶ್ರೀ ಚಪಲಾಕಾಂತರು ತಂದಿರುವ ಶಾಸನ ತಿದ್ದುಪಡಿಯ ಸೂಚನೆಗೆ ವಿವೇಕಿಗಳೆಲ್ಲರೂ ಈಗಲಾದರೂ ಹೆಚ್ಚಿನ ಒತ್ತಾಸೆಯನ್ನು ಕೊಡಬಹುದಲ್ಲವೆ?

* * * * *

## 12. ಆ ಭಾಷೆ ನನಗೆ ಹೇಗೆ ಹೊಸದಾಯಿತೊ!

ಒಂದು ದಿನ ಕಣ್ಣುಬೇನೆಯಿಂದ ದೇವನಾಗರಿಲಿಪಿಯನ್ನು ಓದುವದಕ್ಕೆ ಆಗದೇ ಕಣ್ಣು ಮುಚ್ಚಿಕೊಂಡು ಹಾಗೇ ಮಲಗಿಕೊಂಡೆನು. ಸ್ವಲ್ಪ ಹೊತ್ತಿನೊಳಗೇ ನಿದ್ರೆ ಹತ್ತಿತು.

ಆದರೆ ಸ್ವಲ್ಪ ಹೊತ್ತಿನೊಳಗೆ ಮತ್ತೆ ಎಚ್ಚರವಾಯಿತು. ಹತ್ತಿರವಿದ್ದ ಒಂದು ಪುಸ್ತಕವನ್ನು ಓದುವದಕ್ಕೆ ಪ್ರಾರಂಭಿಸಿದೆನು. ಅದು ಯಾವ ಬರಹವೆಂಬುದಾಗಲಿ, ಯಾವ ಭಾಷೆಯ ಗ್ರಂಥವೆಂಬುದಾಗಲಿ ನನಗೆ ತಿಳಿಯಲಿಲ್ಲ. ಆದರೂ ಓದುತ್ತಾ ಓದುತ್ತಾ ನನಗೆ ಅದರಲ್ಲಿ ಹೆಚ್ಚಿನ ರುಚಿ ಹತ್ತಿತು. ಅರ್ಥವೂ ಸುಲಭವಾಗಿ ಆಗುತ್ತಾಬಂದಿತು. ಈ ಭಾಷೆ ಯಾವ ದೇಶದ್ದೊ? ಇದು ನನಗೆ ಇಷ್ಟು ಸುಲಭವಾಗಿ ಹೇಗೆ ಅರ್ಥವಾಯಿತೊ!- ಎಂದು ಆಶ್ಚರ್ಯಪಡುತ್ತಿದ್ದೆನು. ನಾನು ಆ ಪುಸ್ತಕವನ್ನು ಕೊಂಡುಕೊಂಡ ನೆನಪು ಇರಲಿಲ್ಲ; ಅದು ನನ್ನ ಬಳಿಗೆ ಹೇಗೆ ಬಂತೆಂಬುದೂ ಗೊತ್ತಾಗಲಿಲ್ಲ. ಮುಂದುಮುಂದಕ್ಕೆ ಓದುತ್ತಲೇ ಹೋದೆನು. ಅದರಲ್ಲಿ ಕುತೂಹಲವೂ ಆದರವೂ ಉಂಟಾದವು.

ಆದರೆ ಇದೇನು? ಈಗ ನನಗೆ ನಿಜವಾಗಿ ಎಚ್ಚರವಾಗಿದೆ. ಇದುವರೆಗೆ ನಾನು ಕನಸುಕಾಣುತ್ತಿದ್ದೆನೆಂದೇ ನಿಶ್ಚಯವಾಗಿದೆ. ನಾನು ಓದುತ್ತಿದ್ದದ್ದು ಸಂಸ್ಕೃತಭಾಷೆಯಲ್ಲಿರುವ **ಗುರ್ವಷ್ಟಕ**ವೆಂಬ ಸ್ತೋತ್ರ. ಅದು ''ಬೃಹತ್‌ಸ್ತೋತ್ರ ರತ್ನಾಕರ''ದಲ್ಲಿದೆ; ಸ್ತೋತ್ರವು ನನಗೆ ಬಾಯಿಗೂ ಬರುತ್ತಿದೆ, ಹೊಸದೇನೂ ಅಲ್ಲ.

**ಶರೀರಂ ಸುರೂಪಂ ತಥಾ ವಾ ಕಲತ್ರಂ**
**ಯಶಶ್ಚಾರು ಚಿತ್ರಂ ಧನಂ ಮೇರುತುಲ್ಯಮ್ ।**
**ಮನಶ್ಚೇನ್ನ ಲಗ್ನಂ ಗುರೋರಂಘ್ರಿಪದ್ಮೇ**
**ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥**

ಇದರ ಅರ್ಥವು ಸುಲಭವಾಗಿ ಆಗುವದರಲ್ಲೇನು ಆಶ್ಚರ್ಯ? ಕನಸಿನಲ್ಲಿ ಸಂಸ್ಕೃತವೇ ಹೊಸ ಭಾಷೆಯೆನಿಸಿತ್ತು. ಆಗ ನಾನು ಎಚ್ಚರವಾಗಿದ್ದೇನೆಂದೇ ಮಾಡಿಕೊಂಡಿದ್ದೆ. ಅದಕ್ಕೆ ಇಷ್ಟು ಬೇಗನೆ ಅರ್ಥವಾದದ್ದು ಹೇಗೆಂದು ಅಚ್ಚರಿ ಪಡುತ್ತಲೂ ಇದ್ದೆ.

ವಾಚಕರೆ, ಕನವರಿಕೆ ಸಾಕು! ಎಚ್ಚರವಾಗಿರಿ! ಸಂಸ್ಕೃತವು ಹೊಸದಲ್ಲ. ಕಲಿಯುವದಕ್ಕೆ ಕಷ್ಟವೂ ಅಲ್ಲ. ಅನಾದ್ಯಜ್ಞಾನದ ನಿದ್ರೆಯನ್ನು ಮಾತ್ರ ಬಿಟ್ಟೇಳಿರಿ.

* * * * *

# 13. ಒಗ್ಗಟ್ಟು

ಆತ್ಮೋದ್ಧಾರಕಸಂಘದ ಸ್ಥಾಪನೆಯೇನೋ ಆಯಿತು. ಆದರೆ ಸಂಘಕ್ಕೆ ಸ್ವಂತ ಕಟ್ಟಡವಿಲ್ಲಷ್ಟೆ. ಊರೊಳಗೆ ಜನರ ಪ್ರೋತ್ಸಾಹವೂ ಇಲ್ಲಷ್ಟೆ. ಆದ್ದರಿಂದ ಸದ್ಯಕ್ಕೆ ಹನುಮಂತರಾಯನಗುಡಿಯ ಜಗುಲಿಯೇ ಸಂಘದ ನಡೆವಳಿಕೆಗೆ ಯುಕ್ತವೆಂದು ತೋರಿದೆ. ಮೊನ್ನೆಯದಿನ ಸಾಯಂಕಾಲ ನಾವೆಲ್ಲರೂ ಅಲ್ಲಿಗೆ ಸಂಚಾರಕ್ರಮದಿಂದ ಹೋಗಿ ಕುಳಿತುಕೊಂಡೆವು. ನಾನು ಸಂಘದ ವರದಿಯನ್ನು ಹೇಳಿ ಸಂಭಾಷಣೆಯನ್ನು ಮೊದಲುಮಾಡಿದೆನು:

ಅಣ್ಣಗಳಿರಾ, ಆತ್ಮೋದ್ಧಾರಕ ಸಂಘವೆಂಬ ಹೆಸರನ್ನು ಸೂಚಿಸಿದ ಮಹಾತ್ಮರೊಬ್ಬರ ಸಂದರ್ಶನವಾದ ಪವಿತ್ರಸ್ಥಲವಿದು. ಈಗ ಅವರ ಸಂನಿಧಿಯಿಲ್ಲದಿರವದೊಂದು ಕೊರತೆ. ಆದರೆ ಅವರು ನೆನಪುಕೊಟ್ಟ ಮಾರುತಿಯ ಸಂನಿಧಿಯಂತೂ ನಮಗೆ ಇದ್ದೇ ಇದೆ. ಲಂಕಾಪಟ್ಟಣಕ್ಕೆ ಹೋದ ಸುಗ್ರೀವನ ಸೈನ್ಯದವರು ಹನುಮಂತನನ್ನೇ ನಾಯಕನಾಗಿ ಮಾಡಿಕೊಂಡಂತೆ ನಾವೂ ಆತನನ್ನೇ ನಮ್ಮ ಸಂಘಕ್ಕೆ ಅಧಿಷ್ಠಾತೃದೇವತೆ ಎಂದು ಇಟ್ಟುಕೊಳ್ಳೋಣ. ಆ ವಾನರಸೈನ್ಯವು ಒಮ್ಮತದಿಂದ ದಕ್ಷಿಣಕ್ಕೆ ಹೋಗಿ ಜಯಶೀಲರಾದಂತೆ ನಾವೂ ಒಗ್ಗಟ್ಟಾಗಿ ಕಾರ್ಯವನ್ನು ಸಾಧಿಸಬಹುದಾಗಿದೆ. ಆದರೆ ಇಲ್ಲೊಂದು ಸಣ್ಣತೊಡಕು ಇದೆ. ನಮ್ಮ ದೇಶದಲ್ಲಿ ಹಲವು

ಜಾತಿಗಳಿರುವದರಿಂದ ಒಬ್ಬರೊಡನೊಬ್ಬರು ನಿರಾತಂಕವಾಗಿ ಆಹಾರವಿಹಾರಗಳನ್ನು ಆಚರಿಸುವದಕ್ಕೆ ಅಡ್ಡಿಯಾಗಿರುತ್ತದೆ. ಇತ್ತೀಚೆಗೆ ಸರಕಾರದವರು ಭಾಷಾವಾರಾಗಿ ದೇಶಪ್ರಾಂತಗಳನ್ನು ವಿಂಗಡಿಸಿಕೊಟ್ಟಿರುವದರಿಂದ ಸ್ವಲ್ಪಮಟ್ಟಿಗೆ ಜನರು ಒಗ್ಗಟ್ಟಾಗುವದಕ್ಕೆ ಅವಕಾಶವಾಗಿದ್ದರೂ ಅದರಲ್ಲಿಯೂ ತೊಡಕು ಇಲ್ಲದೆ ಇಲ್ಲಛಿ. ನಮ್ಮ ದೇಶದ ಒಗ್ಗಟ್ಟಿಗೆ ಇರುವ ಪ್ರತಿಬಂಧಕಗಳು ಯಾವವು? ಅವುಗಳನ್ನು ಪರಿಹರಿಸಿಕೊಳ್ಳುವದು ಹೇಗೆ?-ಎಂಬೀ ವಿಷಯದಲ್ಲಿ ಈ ದಿನದ ಚರ್ಚೆಯಾಗಲಿ-ಎಂದು ನನ್ನ ಸೂಚನೆಯಿದೆ. ತಮ್ಮಗಳಿಗೆಲ್ಲ ಒಪ್ಪಾದರೆ, ಆ ವಿಷಯವನ್ನೇ ಈ ಸಾಯಂಕಾಲ ಚರ್ಚಿಸಬಹುದೆಂದು ನನ್ನ ಅಭಿಪ್ರಾಯ.

**ಕೃಷ್ಣಯ್ಯ:-** ಆಗಬಹುದಯ್ಯಛಿ. ಆದರೆ ಪಾರ್ಲಿಮೆಂಟಿನಲ್ಲಿ ಜನರು ಚರ್ಚೆಮಾಡಿದಂತೆ ಉದ್ದುದ್ದನೆಯ ಭಾಷಣಗಳನ್ನು ಮಾಡುವದು ನನಗೆ ಸೇರುವದಿಲ್ಲವಪ್ಪಛಿ. ಒಂದು ಕುಟುಂಬದವರು ಒಬ್ಬರೊಡನೊಬ್ಬರು ಮಾತಾಡುವಾಗ ಪುಸ್ತಕದ ಮಾತನ್ನಾಗಲಿ, ವಾಗ್ವೈಖರಿಯನ್ನಾಗಲಿ ತೋರಿಸಿಕೊಳ್ಳುವರೇನಯ್ಯಛಿ? ಇಲ್ಲಛಿ. ಅದರಂತೆ, ಜೊತೆಯವರಾದ ನಾವೆಲ್ಲರೂ ಸಹಜವಾಗಿ ಮಾತನಾಡೋಣ. ಅದರಿಂದಲೇ ಮೊದಲು ಒಗ್ಗಟ್ಟಿನ ಝಳುಕು ಕಾಣಿಸಿಕೊಂಡೀತು.

**ಬೋರಯ್ಯ:-** ನನಗೂ ಇದೇ ಸಂಮತ. ಅದರೆ ಬಹಳ ಜಾತಿಗಳಿದ್ದರೆ ಒಗ್ಗಟ್ಟಿಗೆ ತೊಡಕು ಎಂದರಲ್ಲಛಿ. ಈ ಅಯ್ಯನೋರು, ಅದೇಕೆ? ನಮ್ಮೂರಿನಲ್ಲಿ ಕುರುಬರು, ಕುಂಬಾರರು, ಲಿಂಗಾಯಿತರು ಮುಂತಾಗಿ ಎಷ್ಟೋ ಜಾತಿಗಳವರು ಇದ್ದಾರೆ. ಈವರೆಗೂ ಅವರು ಯಾರಿಗೂ ಒಬ್ಬೊಬ್ಬರಿಗೆ ಕಚ್ಚಾಟವಾದದ್ದು ಕಾಣಲಿಲ್ಲವಪ್ಪಛಿ. ಚುನಾವಣೆಕಾಲ ಬಂದಾಗ ಮಾತ್ರ, ಈ ಮಾತು ಆಗಾಗ ಬರುತ್ತದೆ. ನಾನು ಆ ದಿನ ಹೇಳಿದ್ದೇ ನಿಜವೆಂದೇ ಕಾಣಿಸುತ್ತಿದೆ. ಇಷ್ಟರಲ್ಲಿಯೇ ಯಾವದೋ ಮಂತ್ರಿಗಳ ಚುನಾವಣೆ ನಡೆಯುತ್ತಿರಬೇಕು. ಅದಕ್ಕೇ ಇವತ್ತಿನ ವಿಚಾರ ಜಾತಿಯ ಕಡೆಗೆ ತಿರುಗಿದೆ. ನಿಮಗಿಬ್ಬರಿಗೂ ಯಾವದೋ ಜಾತಿಯ ಮಂತ್ರಿಗಳು ಬೇಕಾಗಿದಾರೋ, ಏನೊ?

**ಕೃಷ್ಣಯ :-** ಇಲ್ಲ, ಮಹಾರಾಯ. ಜಾತಿಗಳ ಹೊಡೆದಾಟ ನಮ್ಮ ದೇಶದಲ್ಲಿಯೇ ಏಕೆ ಇರಬೇಕು? -ಎಂಬುದೇ ನನ್ನ ಪ್ರಶ್ನೆಛಿ.

**ಬೋರಯ್ಯ:-** ಜಾತಿ ಯಾರಲ್ಲಿಲ್ಲಛಿ? ಜಾತಿಯಿಲ್ಲದಿದ್ದರೆ ಮತದ ಬಡಿದಾಟವಿದ್ದರೆ ಆಗಬಹುದೊ? ಸರಕಾರದ ಪದವಿಗಲ್ಲದೆ ಮತ್ತೆ ಯಾವದರಲ್ಲಿ ಈ ಜಾತಿಯ ಬಡಿದಾಟವಿದೆ?

**ಮೊಹಿಯುದ್ದೀನ್:**-ಹೌದಪ್ಪ ಹೌದು. ನಮ್ಮ ಮುಸಲ್ಮಾನರಲ್ಲಿ ಸುನ್ನಿ, ಷಿಯ ಬಡಿದಾಟವಿಲ್ಲವೆ? ಕ್ರಿಸ್ತಿಯನ್ನರಲ್ಲಿ ಕ್ಯಾಥೊಲಿಕ್, ಪ್ರಾಟೆಸ್ಟೆಂಟು-ಮುಂತಾದವರ ಬಡಿದಾಟಕ್ಕೇನು ಕಡಿಮೆ?

**ಶೇಷಯ್ಯಂಗಾರ್:**-ಒಂದೊಂದು ಮತದೊಳಗಿನ ಜಗಳವೇ ಅಲ್ಲಷಿ. ಹಿಂದೂ ಮುಸಲ್ಮಾನ್, ಮುಸಲ್ಮಾನ್ ಕ್ರಿಸ್ತಿಯನ್, ಕ್ರಿಸ್ತಿಯನ್ ಆರ್ಯಸಮಾಜ-ಹೀಗೆ ನಮ್ಮ ದೇಶದೊಳಗೆ ಪಂಗಡಗಳಿಗೇನು ಕಡಿಮೆ? ಇವನ್ನು ಜಾತೀಯತೆಯಲ್ಲಿ ಸೇರಿಸಬೇಡವೆ?

**ಬೋರಯ್ಯ :**-ಯಾವದರಲ್ಲಾದರೂ ಸೇರಿಸಿಕೊಳ್ಳಿರಿ. ಇದೆಲ್ಲ ಸದ್ಯಕ್ಕೆ ನಿಮ್ಮ ರಾಜಕೀಯದವರ ತಿಕ್ಕಾಟವೇ ಅಲ್ಲದೆ ಬೇರೆ ಅಲ್ಲವೆಂತ ನನಗೆ ತೋರುತ್ತದೆ.

**ಕೃಷ್ಣಯ್ಯ :**-ಅದಿರಲಯ್ಯಷಿ, ಭಾಷೆಗಳ ಬಡಿದಾಟಕ್ಕೇನು ಮದ್ದುಷಿ?

**ಬೋರಯ್ಯ :**-ಅದೂ ರಾಜಕೀಯದವರ ತಂಟೆ ಎಂತಲೇ ನನಗೆ ತೋರುತ್ತದೆ. ಭಾಷೆಗೆ ಬಡಿದಾಟ ಎನ್ನುವದಕ್ಕಿಂತ ಅದು ಗಡಿಯ ಬಡಿದಾಟವೇ ಎನ್ನಬಹುಗಾಗಿದೆ; ಅದು ಭಾಷೆಯವರಿಗಲ್ಲಷಿ ಬೇಕಾಗಿರೋದು, ರಾಜಕೀಯದ ಗುಂಪುಗಳ ನಾಯಕರಿಗೆ.

**ಶೇಷಯ್ಯಂಗಾರ್:**-(ಕಣ್ಣುಸನ್ನೆಯಿಂದ)ಸುಮ್ಮನಿರ್ರಪ್ಪಷಿ. ಮಹರಾಯರಾ, ಅಗೊ, ಅದೇ ಮುದುಕವ್ಯಕ್ತಿಯು ಇತ್ತ ಬರುವಂತಿದೆ !

ಇಲ್ಲಿಗೆ ಎಲ್ಲರೂ ಕಾಷ್ಠಮೌನವನ್ನು ಅವಲಂಬಿಸಿದರು. ಅದೇ ತೋಪಿನಿಂದ ಅದೇ ವೃದ್ಧರು ದಡದಡನೆ ನಮ್ಮ ಕಡೆಗೆ ನಡೆದುಬಂದರು. ನಮಗೆಲ್ಲ ಎದೆ ಜಗ್ಗೆಂದಿತು. ವೃದ್ಧರು ಅದೇ ಸ್ಥಲದಲ್ಲಿ ಕುಳಿತುಕೊಂಡರು. ಮಾತಿಗೆ ಪ್ರಾರಂಭಿಸಿಯೂಬಿಟ್ಟರು.

"ಭಲೆ, ಭಲೆ! ನೀವು ಸುಮ್ಮನೆ ಹೊತ್ತುಕಳೆಯುವದಕ್ಕೆ ಸಂಘವನ್ನು ಮಾಡಿಕೊಂಡವರಲ್ಲವೆಂದು ನನಗೆ ಮನದಟ್ಟಾಗಿಬಿಟ್ಟಿದೆ. ಆತ್ಮೋದ್ಧಾರಕ ಸಂಘವು ಅನ್ವರ್ಥವಾಗಿ ಬೆಳೆದುಕೊಳ್ಳಲಿ! ಎಂಬುದೇ ನನ್ನ ಹಾರೈಕೆ. ಈ ದಿನ ನೀವು ಚರ್ಚೆಗೆ ತೆಗೆದುಕೊಂಡಿರುವ ವಿಷಯಗಳು ಭಾರತದೇಶದ ಏಳಿಗೆಗೆ ಬಹಳ ಮುಖ್ಯವಾಗಿರುವದು ನಿಶ್ಚಯ. ಮೊದಲನೆಯದಾಗಿ ಜಾತಿಭೇದಗಳು ಯಾವ ಕಾರಣದಿಂದಲಾದರೂ ಆಗಿರಲಿ, ಸದ್ಯಕ್ಕೆ ಅವುಗಳಿಂದೇನೂ ಸಮಾಜಕ್ಕೆ ಹಾನಿಯಾಗಿಲ್ಲವೆಂಬುದನ್ನು ತಿಳಿದುಕೊಳ್ಳಿರಿ. ಆಯಾ ಜಾತಿಯವರು ತಮ್ಮತಮ್ಮವರ ಆಚಾರವಿಚಾರಗಳನ್ನು ಸರಿಪಡಿಸಿಕೊಳ್ಳುವದಕ್ಕೂ ಬಹುಕಾಲದಿಂದ ನಡೆದುಬಂದಿರುವ ಕಸುಬುಗಳನ್ನು

ಬೆಳೆಯಿಸಿಕೊಳ್ಳುವದಕ್ಕೂ ಬಂಡವಾಳವನ್ನು ಹಾಕದೆ ಮಾಡಿಕೊಂಡಿರುವ ಕಂಪೆನಿಗಳು ಅವು. ವಿವಾಹವೇ ಮುಂತಾದವುಗಳು ಯಾವ ತಿಕ್ಕಾಟವೂ ಇಲ್ಲದೆ ಜಾತಿಯ ಮುಖಂಡರ ಅನುಮತಿಯಿಂದಲೇ ಸಾಗಬಹುದು. ವಿದ್ಯಾಭ್ಯಾಸ, ಆರ್ಥಿಕಸ್ಥಿತಿ, ನೀತಿ, ಮತ- ಮುಂತಾದ ಎಲ್ಲಾ ವಿಷಯಗಳಲ್ಲಿಯೂ ಆಯಾ ಪಂಗಡದವರು ಮೇಲಕ್ಕೇರುವದಕ್ಕೆ ಅದು ದೋಣಿಯಾಗಿರುತ್ತದೆ. ಅದನ್ನು ಬಿಡಬೇಕಾದದ್ದೇನೂ ಇಲ್ಲಷ; ಅದನ್ನು ರಾಜಕಾರಣಕ್ಕೆ ಇಳಿಸದೆ ಇದ್ದರೆ ಆಯಿತು. ಅಷ್ಟೆಷ. ಇಲ್ಲಿಯೂ ಹನುಮಂತನ ಉದಾಹರಣೆಯನ್ನು ಕೊಡಬಹುದಾಗಿದೆ. ವಾನರರಿಗೂ ನರರಿಗೂ ಜಾತಿಭೇದದಿಂದ ಒಗ್ಗಟ್ಟಿಗೆ ಏನಾದರೂ ಕುಂದಕವಾಯಿತೇನು? ಶ್ರೀರಾಮಭಕ್ತಿಯೊಂದೇ ವಾನರಶ್ರೇಷ್ಠನಾದ ಹನುಮಂತನನ್ನು ಸರ್ವಪೂಜ್ಯನೆನ್ನಿಸಲಿಲ್ಲವೆ?

ಇನ್ನು ಭಾಷೆ. ಈ ಸಂದರ್ಭದಲ್ಲಿಯೂ ಹನುಮಂತನೇ ನಮಗೆ ಮಾರ್ಗದರ್ಶಕನಾಗಿರುತ್ತಾನೆನ್ನಬಹುದು. ಸುಗ್ರೀವನು ರಾಮನನ್ನು ಪರೀಕ್ಷಿಸಿ ಸ್ನೇಹವನ್ನು ಬೆಳೆಯಿಸಬೇಕೆಂದು ಹನುಮಂತನನ್ನು ಕಳುಹಿಸಿಕೊಟ್ಟಾಗ ಹನುಮಂತನು ಆಡಿದ ಭಾಷೆ ಯಾವದು? ಸಂಸ್ಕೃತವೇ. ಸಂಸ್ಕೃತಭಾಷೆಯಲ್ಲಿ ಹನುಮಂತನಿಗೆ ನಿರರ್ಗಳಪಾಂಡಿತ್ಯವಿದೆಯೆಂದು ತಿಳಿದಕೂಡಲೆ ಶ್ರೀರಾಮನಿಗೆ ಅವನಲ್ಲಿ ಪ್ರೇಮವು ಅಂಕುರಿಸಿತಲ್ಲವೆ? ಭಾರತದೇಶದಲ್ಲಿರುವವರ ವೇಷಭೂಷಾದಿಗಳು ಎಷ್ಟೇ ಭಿನ್ನವಿರಲಿ, ಸಂಸ್ಕೃತದಿಂದ ಅವರೆಲ್ಲರಿಗೂ ಒಗ್ಗಟ್ಟು ಕಟ್ಟಿಟ್ಟಬುತ್ತಿಯಾಗಿಬಿಡುತ್ತದೆ. ಕಾಶಿಯಲ್ಲಾಗಲಿ ರಾಮೇಶ್ವರದಲ್ಲಾಗಲಿ ಜನರು ಆಡುತ್ತಿರುವ ದೇಶಭಾಷೆ ಯಾವದೇ ಆದರೂ ಅವರು ತೀರ್ಥಕ್ಷೇತ್ರಗಳಲ್ಲಿ ಉಪಯೋಗಿಸುತ್ತಿರುವ ಭಾಷೆ ಸಂಸ್ಕೃತವೇ ಅಲ್ಲವೆ? ಪಂಡಿತಸಭೆಗಳಲ್ಲಿ ಇಂದಿಗೂ ಸಂಸ್ಕೃತವೇ ಮಾಧ್ಯಮವಾಗಿರುತ್ತದೆಯಷ್ಟೆಷ? ಹೀಗಿರುವಾಗ ಭಾಷಾಸಮಸ್ಯೆಯನ್ನು ಬಿಡಿಸುವಕ್ಕೆ 'ಸಂಸ್ಕೃತಭಾಷೆ'[1] ಎಂಬ ಮಂತ್ರದ ಜಪವನ್ನು ಮಾಡಿರಿ. ಎಲ್ಲವೂ ಸರಿಯಾಗಿಬಿಡುತ್ತದೆ.

**ಮೊಹಿಯುದ್ದೀನ್:-**ತಾವು ಪರಮಪೂಜ್ಯರು. ನನಗೆ ಭಾರತದೇಶದಲ್ಲಿ ಪ್ರೇಮವಿದೆಯಾದರೂ ಸಂಸ್ಕೃತವೇ ಇಡಿಯದೇಶದ ಭಾಷೆ ಹೇಗಾದೀತೆಂಬುದು ನನಗೆ ತಿಳಿಯುವಹಾಗಿಲ್ಲಷ. ನನಗೂ ಅಲ್ಪಸ್ವಲ್ಪ ಸಂಸ್ಕೃತ ತಿಳಿಯುತ್ತಿದೆ. ಅದರ ಯೋಗ್ಯತೆ ದೊಡ್ಡದೆಂಬುದನ್ನು ಬಲ್ಲೆಷ. ಆದರೆ ನಮ್ಮ ಮುಸಲ್ಮಾನ ಬಾಂಧವರೆಲ್ಲರೂ

1. TRUTH Vol. XXVIII No. P. 600. ಈ ಲೇಖನಕ್ಕೆ ಮೂಲ.

ತಮ್ಮ ಉರ್ದುಭಾಷೆಯ ಅಭಿಮಾನವನ್ನು ಬಿಟ್ಟು ಸಂಸ್ಕೃತವನ್ನು ಓದುವದಕ್ಕೆ ಒಪ್ಪಿಯಾರೆ? ಈ ದೇಶದಲ್ಲಿರುವ ಕ್ರಿಸ್ತಿಯನ್ನರೊ ?

**ವೃದ್ಧರು** ಸ್ವಲ್ಪ ಹುರುಪಿನಿಂದ ಭಾಷಣವನ್ನು ಮುಂದುವರಿಸಿದರು: ''ಮುಸಲ್ಮಾನರು, ಕ್ರಿಸ್ತಿಯನ್ನರು, ಬೌದ್ಧರು, ಸಿಕ್ಕರು, ಆರ್ಯಸಮಾಜದವರು, ಬ್ರಹ್ಮಸಮಾಜದವರು- ಯಾರೇ ಆಗಲಿ ಈ ದೇಶದಲ್ಲಿರುವವರು ಸಂಸ್ಕೃತವನ್ನು ಕಲಿತರೆ ಅವರಿಗೆ ಶ್ರೇಯಸ್ಸುಫಿ. ಜನಗಳಲ್ಲಿ ಬೆರೆತು ತಮ್ಮ ಅಭಿಪ್ರಾಯಗಳನ್ನು ಹರಡುವದಕ್ಕೆ ಸಂಸ್ಕೃತವಲ್ಲದೆ ಮತ್ತೊಂದು ದ್ವಾರವು ಎಂದಿಗೂ ಸಿಕ್ಕಲಾರದು. ಸಂಸ್ಕೃತಕ್ಕೆ ಋಣಿಯಾಗದ ಈ ದೇಶದ ಭಾಷೆಯೇ ಇಲ್ಲಫಿ; ಸಂಸ್ಕೃತದಲ್ಲಿರುವ ಸಂಸ್ಕೃತಿಯ ಪ್ರಭಾವಕ್ಕೆ ಸಿಕ್ಕದಿರುವ ಯಾವ ಮತದವರೂ ಈ ದೇಶದಲ್ಲಂತೂ ಇಲ್ಲಫಿ. ಮುಸಲ್ಮಾನರು ತಮ್ಮ ಇತಿಹಾಸವನ್ನು ಸ್ವಲ್ಪ ಓದಿದರೆ **ಫಿರೋಸ್ ಷಾ ತುಗ್ಲಕ್**-ಸಂಸ್ಕೃತವನ್ನು ಅಭ್ಯಾಸಮಾಡಿದ್ದುಫಿ, 'ವಾರಾಹೀಸಂಹಿತೆ'ಯನ್ನು ಪರ್ಷಿಯನ್‌ಭಾಷೆಗೆ ತಿರುಗಿಸಿದ್ದುಫಿ, **ಸಿಕಂದರ ಲೂದಿಯು** ಆಯುರ್ವೇದದ ಸಂಸ್ಕೃತಗ್ರಂಥಗಳನ್ನು ಪರ್ಷಿಯನ್‌ಭಾಷೆಗೆ ಪರಿವರ್ತನೆಮಾಡಿಸಿದ್ದುಫಿ, **ಅಕ್ಬರ್ ಬಾದಷಾನು** ಸಂಸ್ಕೃತ ದಲ್ಲಿಟ್ಟಿದ್ದ ಅಭಿಮಾನ, ಅವನ ಆಸ್ಥಾನಪಂಡಿತರಾದ ಫೈಜಿ, ಅಬುಲ್‌ಫಸಲ್ ಮೊದಲಾದವರು ಸಂಸ್ಕೃತಾಭ್ಯಾಸದಲ್ಲಿ ಆಸಕ್ತರಾಗಿದ್ದು ನೈಷಧ, ಮಹಾಭಾರತ, ಪಂಚತಂತ್ರಫಿ, ಹರಿವಂಶಪುರಾಣ- ಮುಂತಾದ ಗ್ರಂಥಗಳನ್ನು ಪರ್ಷಿಯನ್ ಭಾಷೆಗೆ ತಿರುಗಿಸಿದ್ದುಫಿ, **ದಾರಿಷಿಕೊ** ವಾರಣಸಿಯಲ್ಲಿ ಸಂಸ್ಕೃತವನ್ನು ಅಭ್ಯಾಸಮಾಡಿ 50 ಉಪನಿಷತ್ತುಗಳನ್ನು ಭಾಷಾಂತರಿಸಿದ್ದು- ಇವೆಲ್ಲ ವ್ಯಕ್ತವಾಗುತ್ತವೆ. **ಕಥಾಸರಿತ್ಸಾಗರ, ವೇತಾಲಪಂಚವಿಂಶತಿ, ರಾಜತರಂಗಿಣಿ, ಮಹಾನಾಟಕ, ಪ್ರಬೋಧ ಚಂದ್ರೋದಯ, ಕರ್ಣಸುಂದರೀ, ಮುಗ್ಧಬೋಧ, ಸಿದ್ಧಾಂತಕೌಮುದೀ, ಕವಿರಹಸ್ಯ, ದಾಯಭಾಗ, ಸಿದ್ಧಾಂತಶಿರೋಮಣಿ, ಸಾಹಿತ್ಯದರ್ಪಣ, ಕಾವ್ಯಪ್ರಕಾಶ, ಅಲಂಕಾರಸುಧಾಮಣಿ-** ಇವೆಲ್ಲ ಮುಸಲ್ಮಾನರ ಆಳ್ವಿಕೆಯಲ್ಲಲ್ಲವೆ, ರಚಿತವಾದವು? ಕ್ರಿಸ್ತಿಯನ್ನರು ಮೊದಲಾದವರ ವಿಚಾರವನ್ನು ಇನ್ನೊಮ್ಮೆ ವಿಚಾರಮಾಡೋಣ. ವಿವೇಕಿಯಾದ ಯಾವ ಮುಸಲ್ಮಾನನೂ ಸಂಸ್ಕೃತಕ್ಕೆ ಅಡ್ಡಬರಲಾರನು- ಎಂಬುದು ನನ್ನ ಅಭಿಪ್ರಾಯವೆಂದು ಸದ್ಯಕ್ಕೆ ಹೇಳಿರುತ್ತೇನೆ.

ಆತ್ಮೋದ್ಧಾರವಾಗಬೇಕೆಂದು ನಿಮ್ಮ ಮನಸ್ಸಿನಲ್ಲಿದ್ದರೆ ಹಳೆಯ ಜಾತಿಗಳ ವಿಂಗಡದ ಸೊಬಗನ್ನು ಉಳಿಸಿಕೊಳ್ಳಿರಿ, ಸಂಸ್ಕೃತಭಾಷೆಯನ್ನು ಎಲ್ಲರೂ ಕಲಿಯಿರಿ.'' ಹೀಗೆಂದು ಆ ಮಹನೀಯರು ಎದ್ದು ಮತ್ತೆ ಸರಸರನೆ ನಡೆದು ಅದೇ ತೋಪಿನಲ್ಲಿ ಕಣ್ಮರೆಯಾಗಿಬಿಟ್ಟರು !

* * * * *

# 14. ಸಂಸ್ಕೃತದ ಹಿರಿಮೆ

ಅಣ್ಣಗಳಿರಾ, ಭಾಷೆಗಳ ಹೆಸರಿನಲ್ಲಿ ನಮ್ಮ ದೇಶದಲ್ಲಿ ಮೇಲಿಂದ ಮೇಲೆ ಕಲಹಗಳಾಗುತ್ತಿರುವವು. ಬಾಯಿಂದ ಬಂದ ಮಾತಿಗಾಗಿ ಕೈಕೈಸೇರಿ ಹೊಡೆದಾಟ ವಾಗುತ್ತಿರುವುದು! ಈ ಮೋಹವು ಹೋಗುವುದು ಹೇಗೆ? ತಾವೆಲ್ಲರೂ ಈ ನನ್ನ ಬಿನ್ನಹವನ್ನು ಕಿವಿಗೊಟ್ಟು ಕೇಳಿರಿ.

ಭರತಖಂಡದಲ್ಲಿರುವ ಭಾಷೆಗಳಿಗೆಲ್ಲ ತವರು ಸಂಸ್ಕೃತವು. ಕೆಲವು ಭಾಷೆಗಳು ಸಂಸ್ಕೃತದಿಂದ ಹುಟ್ಟಿ ಸಂಸ್ಕೃತದ ಸಾಲವನ್ನೇ ತೆಗೆದುಕೊಂಡು ಬೆಳೆಯುತ್ತಿವೆ. ಮತ್ತೆ ಕೆಲವು ಭಾಷೆಗಳಿಗೆ ಸಂಸ್ಕೃತವು ಸಾಕುತಾಯಿ. ಅವಕ್ಕೆ ಬಂದಿರುವ ಬಲವೆಲ್ಲ ಸಂಸ್ಕೃತದಿಂದ. ಇದು ನಿಜವೊ, ಅಲ್ಲವೊ ? ನಿಮ್ಮಲ್ಲಿ ನೀವು ಯೋಚಿಸಿರಿ.

ದೇಶಭಾಷೆಗಳಲ್ಲಿರುವ ಭಾರತ, ರಾಮಾಯಣ, ಪುರಾಣಕಥೆಗಳು, ಮಹಾತ್ಮರ ಚರಿತ್ರೆಗಳು, ಧರ್ಮಶಾಸ್ತ್ರ. ನೀತಿಶಾಸ್ತ್ರ, ಅರ್ಥಶಾಸ್ತ್ರ, ಕಾಮಶಾಸ್ತ್ರ, ಶಿಲ್ಪಶಾಸ್ತ್ರ, ವಿನೋದವಿದ್ಯೆ - ಇವೆಲ್ಲಕ್ಕೂ ಸಂಸ್ಕೃತವು ಮೂಲವಾದ ಬೊಕ್ಕಸ. ಆ ಭಾಷೆಯಲ್ಲಿ ಎಷ್ಟು ಗ್ರಂಥಗಳು ಇನ್ನೂ ಅಚ್ಚಾಗದೆ ಇವೆಯೋ, ಇನ್ನೂ ಎಷ್ಟು ಉದಾತ್ತ ವಿಚಾರಗಳಿವೆಯೋ ಅವನ್ನು ಯಾರೂ ಅರಿಯರು. ತಿಬೆಟ್, ಚೀನ, ಮಂಗೋಲಿಯ, ಜಪಾನ್ - ಮುಂತಾದ ದೇಶಗಳಲ್ಲಿಯೂ ಈಗಲೂ ಸಂಸ್ಕೃತ ಮೂಲರೂಪದಲ್ಲಿ, ಅಥವಾ ಭಾಷಾಂತರವಾಗಿ, ಹಲವು ಸಾವಿರ ಪುಸ್ತಕಗಳು ಇರುತ್ತವೆ. ಅವುಗಳಲ್ಲಿರುವ ಅಮೋಘ ವಿಷಯಗಳು ನಮಗೆ ತಿಳಿಯದು. ಹೌದೊ, ಅಲ್ಲವೊ? ಇದಕ್ಕೆ ನಿಮಗೆ ನೀವೇ ಉತ್ತರವನ್ನು ಕೊಡಿರಿ.

ಭಾರತದಲ್ಲಿ ಇಂದಿಗೂ ಸಂಸ್ಕೃತವು ಜೀವಂತವಾಗಿರುತ್ತದೆ. ಪಂಡಿತರು ಅದನ್ನು ಮಾತನಾಡುತ್ತಾರೆ. ಆ ಭಾಷೆಯಲ್ಲಿ ಗ್ರಂಥಗಳನ್ನು ಬರೆಯುತ್ತಿದಾರೆ, ಸಂಸ್ಕೃತ ಗ್ರಂಥಗಳನ್ನು ಕನ್ನಡಿಸಿಕೊಡುತ್ತಿದಾರೆ. ದೇಶಭಾಷೆಗಳೆಲ್ಲ ಅವರಿಗೆ ಋಣಿಯಾಗಿವೆ. ಹೌದೊ, ಅಲ್ಲವೊ ?

ಈಗಲೂ ದೇಶಭಾಷೆಗಳಲ್ಲಿ ನೂರಕ್ಕೆ ಇಪ್ಪತ್ತು ಮಾತುಗಳಿಗೆ ಕಡಿಮೆಯಿಲ್ಲದೆ ಸಂಸ್ಕೃತ ಮಾತುಗಳಿವೆ. ದೇವನಾಗರಿ ಲಿಪಿಯಲ್ಲಿ ಆ ಭಾಷೆಗಳನ್ನು ಬರೆದರೆ ಒಬ್ಬರ ಭಾಷೆಯನ್ನೊಬ್ಬರು ಬೇಗನೆ ಕಲಿತುಬಿಡಬಹುದು. ಒಬ್ಬರ ಅಭಿಪ್ರಾಯವನ್ನೊಬ್ಬರು ತಿಳಿದುಕೊಂಡಿರಬಹುದು. ಹೌದೊ, ಅಲ್ಲವೊ ?

ಭಾರತದ ಹಿಂದಿನ ಸಂಸ್ಕೃತಿಗೂ ಇಂದಿನ ಸಂಸ್ಕೃತಿಗೂ ಸಂಬಂಧವನ್ನು ತೋರಿಸುವ ಭಾಷೆ ಎಂದರೆ ಸಂಸ್ಕೃತವೊಂದೇ. ಬೇರಿಗೂ ಕೊಂಬೆಗಳಿಗೂ ಸಂಬಂಧವನ್ನು ಮಾಡಿಕೊಡುವ ಮರದ ಬುಡವು ಹೇಗೋ, ಹಾಗೆ ಸಂಸ್ಕೃತವು ನಮ್ಮಗಳ ಹಿಂದಿನ, ಈಗಿನ, ಮುಂದಿನ ಸಂಸ್ಕೃತಿಯ ಬೆಳವಣಿಗೆಗೆ ಹೊಂದು ಗಡೆಯನ್ನು ಮಾಡುತ್ತಾ ಹೋಗುತ್ತಿರುವುದು. ಹೌದೊ, ಅಲ್ಲವೊ ?

ಈ ಭಾಷೆಯನ್ನು ಈಗಲೂ ದೇಶಭಾಷೆಗಳಲ್ಲಿ ಕೆಲವರು ಸಹಾಯಕವಾಗಿ ಕಲಿಯುತ್ತಲೇ ಇದ್ದಾರೆ, ಅವರಿಗೆ ಲಾಭವೂ ಇದೆ. ಹೌದೊ, ಅಲ್ಲವೊ ? ನಿಮ್ಮಲ್ಲಿ ನೀವು ಆಲೋಚಿಸಿರಿ.

* * * * *

## 15. ಅಮರವಾಣಿ

ಅಣ್ಣಗಳಿರಾ, ಒಂದು ಬಗೆಯ ಹುಳುವಿರುತ್ತದೆ. ಅದನ್ನು ಎರಡನ್ನಾಗಿ ಕತ್ತರಿಸಿದರೆ ಅದರ ಒಂದೊಂದು ತುಂಡೂ ಎರಡು ಸ್ವತಂತ್ರಹುಳುಗಳಾಗುತ್ತವೆ. ಮತ್ತು ಆ ತುಂಡುಗಳನ್ನು ಕತ್ತರಿಸಿದರೆ ಅವೂ ಬೇರೆ ಎರಡು ಹುಳುಗಳು ಆಗುವವಂತೆ! ಸಂಸ್ಕೃತವು ಅಂಥ ಭಾಷೆ. ಅದರಿಂದ ಮಾಗಧ, ಅರ್ಧಮಾಗಧ, ಪಾಳಿ, ಪ್ರಾಕೃತಭಾಷೆಗಳು- ಇವೆಲ್ಲ ಹುಟ್ಟಿದವು. ಕಾಲಾನುಕಾಲಕ್ಕೆ ಅವುಗಳು ರೂಪಾಂತರವಾಗಿ ಹಿಂದಿ, ಬಂಗಾಳಿ, ಗುಜರಾತಿ, ಮಹಾರಾಷ್ಟ್ರ-ಮುಂತಾದ ಭಾಷೆಗಳಾಗಿವೆ. ಆ ಭಾಷೆಗಳು ಸ್ವತಂತ್ರವಾಗಿರುವದರಿಂದ ಅವಕ್ಕೆ ಸಂಸ್ಕೃತದ ಹಂಗಿಲ್ಲವೇನೊ ಎಂಬಂತೆ ಕಾಣುತ್ತವೆ, ಆದರೆ ಒಳಹೊಕ್ಕು ನೋಡಿರಿ, ಅವುಗಳೊಳಗಿನ ಜೀವಾಳವು ಸಂಸ್ಕೃತವೇ ಆಗಿರುತ್ತದೆ! ಹೌದೊ, ಅಲ್ಲವೊ? ಸ್ವಲ್ಪ ಪ್ರಯತ್ನಿಸಿ ನೋಡಿ.

ಜನರಿಗೆಲ್ಲ ಒಂದೇ ಭಾಷೆ ಬೇಕೆ? ಅದೇ ಸಂಸ್ಕೃತ. ಕಿಟಕಿಯನ್ನು ತೆಗೆದಮಾತ್ರ ದಿಂದ ಗಾಳಿ ಒಳಕ್ಕೆ ಬರುತ್ತದೆ ಅಲ್ಲವೆ? ಸ್ವಲ್ಪ ಅವಕಾಶವನ್ನು ಕೊಡಿ, ಸಂಸ್ಕೃತವು ನಿಮ್ಮ ಜೀವನಗಾಳಿಯಾಗಿಬಿಡುತ್ತದೆ. ಸಂಸ್ಕೃತವು ತಮ್ಮ ಭಾಷೆಗೆ ಹತ್ತಿರವಿದೆ ಎಂದು ಯುರೋಪಿನ ಬಹಳ ಜನಾಂಗಗಳು ಸಂಸ್ಕೃತಕ್ಕೆ ತಮ್ಮ ತಮ್ಮ ಭಾಷೆಯನ್ನು ಬಿಟ್ಟರೆ- ಅಗ್ರಸ್ಥಾನವನ್ನೇ ಕೊಟ್ಟಿರುತ್ತಾರೆ. **ನಮ್ಮ ಇತಿಹಾಸ ವಾಙ್ಮಯ, ಸಂಸ್ಕೃತಿ, ಅಧ್ಯಾತ್ಮ ವಿದ್ಯೆ- ಎಲ್ಲವೂ ಇದರಲ್ಲಿಯೇ ಇದೆ.** ನಾವೂ ಈ ಭಾಷೆಗೆ ಸ್ಥಳವನ್ನು ಕೊಡಬೇಕೊ, ಬೇಡವೊ?

ಹಿಂದಿಯನ್ನು ನಮ್ಮ ದೇಶಕ್ಕೆ ನುಗ್ಗಿಸಿದರು; ಜನರ ಹೊಡೆದಾಟವು ಮೊದಲಾಯಿತು. ಸಂಸ್ಕೃತವನ್ನು ನುಗ್ಗಿಸಿದರೆ ಏನಾಗುವದು, ನೋಡಿ! ಎಲ್ಲೆಲ್ಲಿಯೂ ಸ್ವಾಗತ! ಸಂಸ್ಕೃತವು ಮಾನವನಿಗೆ ಮಾನವತೆಯನ್ನು ಕೊಡುತ್ತದೆ. ಕ್ರೂರಸ್ವಭಾವದ ಜನರಿಗೂ ಸಂಸ್ಕೃತದ ಸೋಂಕು ತಗಲಿದರೆ ಆ ಜನರು ಮಾನವರೇಕೆ? ದೇವತೆಗಳಾದಾರು!

ಸಂಸ್ಕೃತದಲ್ಲಿ ವಿಲಕ್ಷಣಹೆಸರುಗಳಿಂದ ಅಗಣಿತ ಕಲೆಗಳ ಮತ್ತು ಉದ್ಯೋಗಗಳ ವಿವರಣೆಗಳಿರುವ ಗ್ರಂಥಗಳು ಸಿಕ್ಕುತ್ತವೆ. ಸಂಗೀತ, ಚಿತ್ರ ಅರ್ಥಶಾಸ್ತ್ರ ಇಂಥ ವಿಷಯಗಳು ಅವುಗಳಲ್ಲಿರುತ್ತವೆ. ಇತ್ತೀಚೆಗೆ ಮೈಸೂರಿನಲ್ಲಿ ವಾಯುವಿಮಾನವನ್ನು ನಡೆಯಿಸುವ ವಿದ್ಯೆಯ ಒಂದು ಗ್ರಂಥವು ಸಿಕ್ಕಿದೆಯಂತೆ. ನಿಮಗೆ ಗೊತ್ತೆ?

ಅಣ್ಣಗಳಿರ, ಸ್ವಲ್ಪ  ಕಣ್ಣುತೆರೆದು ನೋಡಿರಿ! ಸಂಸ್ಕೃತದ ಬೆಲೆ ತಾನೇ ಕಾಣುವದು.

* * * * *

## 16. ಸಂಸ್ಕೃತಭಾಷೆ

1. ಅಣ್ಣಗಳಿರಾ, ವಿಜ್ಞಾನಶಾಸ್ತ್ರಕ್ಕೆ ಬೇಕಾದ ಪಾರಿಭಾಷಿಕಶಬ್ದಗಳನ್ನು ಆರಿಸಿಕೊಳ್ಳುವದಕ್ಕೆಷ್ಟೆ, ಅಥವಾ ಹೊಸದಾಗಿ ಕಲ್ಪಿಸುವದಕ್ಕೆಷ್ಟೆ, ಒಂದು ಸಮಿತಿಯು ಏರ್ಪಟ್ಟಿರುವದಂತೆ. ಸಂಸ್ಕೃತದಲ್ಲಿ ರಚಿತವಾಗಿರುವ ಗ್ರಂಥಗಳಲ್ಲಿ ಇಂಥ ಶಬ್ದಗಳು ಹೇರಳವಾಗಿ ಸಿಕ್ಕುತ್ತವೆ. ಪ್ರಕೃತಿಪ್ರತ್ಯಯಾತ್ಮಕವಾದ ಶಬ್ದಗಳ ಗನಿಯಾಗಿರುವದರಿಂದಲೂ ಶಬ್ದಗಳನ್ನು ಕಲ್ಪಿಸುವದಕ್ಕೆ ಬೇಕಾದಷ್ಟು ಅವಕಾಶವನ್ನು ಕೊಡುವಂತಿರುವದರಿಂದಲೂ ಬೇರೆಯ ಭಾಷೆಗಳ ಶಬ್ದಗಳನ್ನು ಸೇರಿಸಿಕೊಳ್ಳುವದಕ್ಕೂ ಬೆಳೆಯಿಸಿಕೊಳ್ಳುವದಕ್ಕೂ ಸೌಕರ್ಯವಿರುವ ಭಾಷೆಯಾದ್ದರಿಂದಲೂ ಸಂಸ್ಕೃತದಂಥ ಅಮೋಘವಾದ ಭಾಷಾಸಾಧನವು  ಈ ಕಾರ್ಯಕ್ಕೆ ಮತ್ತೆಲ್ಲಿ ದೊರಕೀತು? ಇದನ್ನು ಸಮಿತಿಯವರು ಯೋಚಿಸಲಿ.

2. ಸಂಸ್ಕೃತಭಾಷೆಯ ಗ್ರಂಥಗಳಲ್ಲಿರುವ ಭಾವಗಳು ಈ ದೇಶದ ಕೋಟಿಗಟ್ಟಲೆಯ ನಿವಾಸಿಗಳಲ್ಲಿಷ್ಟೆ, ಅಕ್ಷರಸ್ಥರು, ನಿರಕ್ಷರಕುಕ್ಷಿಗಳು- ಎಲ್ಲರ ಅಂತಃಕರಣದಲ್ಲಿಯೂ ಜೀವಂತವಾಗಿ ಈಗಲೂ ಹುದುಗಿಕೊಂಡಿವೆ. ಇದನ್ನು ಉಜ್ಜೀವನಗೊಳಿಸುವದಕ್ಕೆ ಇದೊಂದು ಪರಮಸೌಕರ್ಯವಲ್ಲವೆ?

3. ಈ ದೇಶದ ನಾಗರಿಕತೆಯನ್ನು ಕಳೆಗಟ್ಟಿ ಬೆಳೆದುಕೊಳ್ಳುವಂತೆ ಮಾಡುವದಕ್ಕೆ ಸಂಸ್ಕೃತದ ನೆರವು ಬೇಕೇಬೇಕು. ಸಂಸ್ಕೃತವೆಂಬ ಜೀವನದ ಉಕ್ಕಂದವು

ಹೊರಹೊಮ್ಮಿದಲ್ಲದೆ ಇಲ್ಲಿಯ ಸಂಸ್ಕೃತಿಯನ್ನು ಸಚೇತನವಾಗಿ ಮಾಡುವದೆಂಬುದು ಪರಿಹಾಸ್ಯದ ಮಾತು. ಅದನ್ನು ಬಿಟ್ಟರೆ ಯಾವ ಭಾಷೆಯನ್ನು ಉದ್ಬೋಧಗೊಳಿಸಬೇಕಾದೀತು? ಯಾವ ವಾಙ್ಮಯವನ್ನು ಅಥವಾ ಯಾವ ಕಲೆಯನ್ನು ಬೆಳೆಯಿಸಬೇಕು? ಮತ್ತೊಂದು ಭಾಷೆಯನ್ನು ಮುಂದಕ್ಕೆ ತಂದರೂ ಅದು ಜನಾಂಗದ ವಿಚಾರಗಳ ಮತ್ತು ಭಾವಗಳ ಮಾಧ್ಯಮವಾಗಬೇಕಲ್ಲವೆ! ಜನಾಂಗದ ಭಾಷೆ ಎಂದರೆ ಬರಿಯ ಒಂದು ಭೂಷಣವೊ, ದೇಶದವರ ದಿನದಿನದ ಆವಶ್ಯಕತೆಯೊ? ಸಂಸ್ಕೃತವು ಈಗಲೆ ಇಂದಿನಿಂದಲೇ ಅಂಥ ಭಾಷೆಯಾಗುವದಕ್ಕೆ ಅರ್ಹವಾಗಿದೆ. ಹೌದೋ, ಅಲ್ಲವೊ?

4. ಭರತಖಂಡದವರೆಲ್ಲ ಒಂದು ಜನಾಂಗವೆಂಬ ಹೆಮ್ಮೆಯು ಬರಿಯ ರಾಜಕೀಯಚಟುವಟಿಕೆಯಿಂದ ಉದ್ಭವಿಸೀತೊ, ಈ ದೇಶದವರ ವಿಚಾರಪ್ರವಾಹದ ಜೀವನದಿಯಾದ ಸಂಸ್ಕೃತದಿಂದ ಆದೀತೊ? ಜನಾಂಗಭಾವನೆಯು ಪರಿಪೂರ್ಣ ವಾಗಿರಲೆಂದು ನಿಜವಾಗಿ ಬಯಸುವವರು, ಈ ಭಾಷೆಯನ್ನು ಸಾರ್ವಜನಿಕವಾಗಿ ಮಾಡಿ ತಮ್ಮ ಕೀರ್ತಿಧ್ವಜವನ್ನು ಎಲ್ಲೆಲ್ಲಿಯೂ ಹಾರುವಂತೆ ಮಾಡಬೇಕು.

5. ಸಂಸ್ಕೃತವು ಹಿಂದಕ್ಕೂ ಇಂದಿಗೂ ಸುಳಿದಾಡುತ್ತಿರುವ ಒಂದಾನೊಂದು ಉತ್ತಮ ನಾಗರಿಕತೆಯ, ಸಂಸ್ಕೃತಿಯ ಉಸಿರು.

6. ಭರತಖಂಡದವರ ಅಸಾಧಾರಣಾಶಯಗಳನ್ನೊಳಗೊಂಡಿರುವ ಭಾಷೆಯೆಂದರೆ ಸಂಸ್ಕೃತವೇ. ಇಡಿಯ ಭೂಮಂಡಲದ ಐತಿಹಾಸಿಕರಿಗೂ ಪುರಾತತ್ತ್ವಜ್ಞರಿಗೂ ವಿಚಾರಪ್ರಚೋದಕವಾಗಿರುವ ಭಾಷೆಯಿದು.

* * * * *

## 17. ಸಂಸ್ಕೃತಭಾಷೆ

1. ಸಂಸ್ಕೃತಭಾಷೆಯು ಭಾರತದ ಅನೇಕ ಮುಸಲ್ಮಾನರ ಭಾಷೆಯಾಗಿರುವ ಉರ್ದುವಿಗೆ ಪರಂಪರೆಯಿಂದ ಮೂಲವಾಗಿರುತ್ತದೆ. ಇದು ದೇಶಭಾಷೆಗಳೊಂದಿಗೆ ಸೇರಿದರೆ ಹಿಂದೂಮುಸಲ್ಮಾನರ ಸಂಬಂಧವನ್ನು ಹೆಚ್ಚು ನಿಕಟವಾಗಿ ಮಾಡುವದರಲ್ಲಿ ಸಂಶಯವಿಲ್ಲವೆ.

2. ಸಂಸ್ಕೃತವು ಸರ್ವಸಾಧಾರಣಭಾಷೆಯಾದಾಗ ಮಿಕ್ಕ ದೇಶಭಾಷೆಗಳಂತೆ

ಉರ್ದುವನ್ನು ಉಳಿಸಿಕೊಳ್ಳುವದು. ಹಿಂದಿಯು ಉರ್ದುವಿನ ಸಂಸ್ಕೃತ ಪ್ರತಿಯೋಗಿಯಂತೆ ಇರುವದರಿಂದ ಅದನ್ನು ಉಳಿಸುವದರ ಬದಲು ಅಳಿಸಿಹಾಕಬಹುದಾದ ಸಂಭವವಿದೆ.

3. ಸಂಸ್ಕೃತವು ಉರ್ದು ಮಾತನಾಡದೆ ಇರುವ ಮುಸಲ್ಮಾನರಿಗೂ ಸಹಾಯಕವಾಗಿಯೇ ಆಗಿದೆ. ಏಕೆಂದರೆ ಅವರು ಹಿಂದುಗಳ ಆಯಾ ದೇಶಭಾಷೆಯನ್ನೇ ಆಡುತ್ತಿರುತ್ತಾರೆ. ಅವರಿಬ್ಬರ ಭಾವನೆಗಳೂ ಸಂಸ್ಕೃತದ ಸಂಪ್ರದಾಯವನ್ನೇ ಅನುಸರಿಸುತ್ತಿವೆಯೆನ್ನಬಹುದಾಗಿದೆ. ಬಂಗಾಳ, ಕೇರಳ, ದ್ರವಿಡದೇಶ- ಇವು ಇದಕ್ಕೆ ಉದಾಹರಣೆಯಾಗಿವೆ.

4. ಸಂಸ್ಕೃತಕ್ಕೂ ಪಾರ್ಸಿಭಾಷೆಗೂ ನಿಕಟಸಂಬಂಧವಿದೆ. ಉರ್ದುವಿಗೆ ಪಾರ್ಸಿ ಭಾಷೆ ಎಷ್ಟು ಪೋಷಕವಾಗಿದೆಯೋ ಅಷ್ಟೇ ಸಂಸ್ಕೃತವೂ ಪೋಷಕವಾಗಿರುತ್ತದೆ.

5. ಸಂಸ್ಕೃತವನ್ನು ತಿಳಿದಿರುವ ಒಂದು ಪ್ರಾಂತದ ಭಾಷೆಯ ಜನರಿಗೆ ಮತ್ತೊಂದು ದೇಶಭಾಷೆಯನ್ನು ಕಲಿಯುವದೂ ಬಹಳ ಸುಲಭವಾಗಿರುತ್ತದೆ. ಸಂಸ್ಕೃತವನ್ನು ಹಿಂದಕ್ಕಟ್ಟಿ ಹಿಂದಿಯು ಪ್ರಬಲವಾದರೆ ಈ ಸೌಲಭ್ಯವು ಎಂದಿಗೂ ದೊರಕಲಾರದು.

6. ಸಂಸ್ಕೃತಭಾಷೆಯಲ್ಲಿರುವ ಆರ್ಯಸಂಸ್ಕೃತಿಯ ಉಪದೇಶಗಳು ಮುಸಲ್ಮಾನರ ಹೃದಯವನ್ನಾಕರ್ಷಿಸುವದಕ್ಕೆ ಒಂದು ದೊಡ್ಡ ಸಾಧನವಾದಾವು. ಈಗ್ಗೆ ಇರುವ ಹಿಂದೂಮುಸಲ್ಮಾನರ ವಿರೋಧವು ನಿಜವಾಗಿ ಮನೋಭಾವಕ್ಕೂ ಸಂಸ್ಕೃತಿಗೂ ಸಂಬಂಧಿಸಿದ್ದೆಂಬುದು ಸ್ಪಷ್ಟವಾಗಿದೆ. ಇಬ್ಬರ ಮನವೂ ಒಂದಾದರೆ ಮನೆಯೂ ಒಂದಾದಂತಾದೀತು.

7. ಸಂಸ್ಕೃತವು ಬೌದ್ಧರಿಗೂ ಧಾರ್ಮಿಕಭಾಷೆಯೆನಿಸಿದೆ. ಭೂಮಂಡಲದ ನಿವಾಸಿಗಳ ನಾಲ್ಕರಲ್ಲೊಂದು ಪಾಲಿನಷ್ಟು ಸಂಖ್ಯೆ ಬೌದ್ಧರದು. ನಮ್ಮ ನೆರೆಯವರಾದ ಬೌದ್ಧರ ಮೈತ್ರಿಗೆ ಸಂಸ್ಕೃತವೂ ಒಂದು ಸಾಧನವಾದೀತಲ್ಲವೆ?

8. ಸಂಸ್ಕೃತವು ಜನಸಾಮಾನ್ಯವು ಆಡುವ ಭಾಷೆಯಲ್ಲವೆಂಬುದು ನಿಜ. ಆದರೆ ಅಷ್ಟುಮಾತ್ರಕ್ಕೆ ಅದು ಮೃತಭಾಷೆಯೆನ್ನಲಾಗದು. ಏಕೆಂದರೆ ಪ್ರಾಚೀನ ರೋಮದೇಶದ, ಮತ್ತು ಪ್ರಾಚೀನತರ ಗ್ರೀಕ(ಯವನ)ರ ವಾಗ್ಮಿಗಳಿಗಿಂತಲೂ ಹೆಚ್ಚಿನ ಸೌಲಭ್ಯದಿಂದ ಆ ಭಾಷೆಯನ್ನು ಭಾಷಣಕ್ಕೂ ಪ್ರವಚನಕ್ಕೂ ಉಪಯೋಗಿಸಬಲ್ಲ ಸಂಸ್ಕೃತಜ್ಞರು ಇನ್ನೂ ನೂರುಗಟ್ಟಲೆಯಾಗಿ ಇಲ್ಲಿ ಸಿಕ್ಕುತ್ತಾರೆ.

# 18. ಸಂಸ್ಕೃತಭಾಷೆ

1. ಸಂಸ್ಕೃತಭಾಷೆಯು ನಮ್ಮೆಲ್ಲರ ಭಾಷೆಯಾದರೆ ಹಿಂದಿನ ಇತಿಹಾಸವೂ ಸಂಪ್ರದಾಯವೂ ಅವಿಚ್ಛಿನ್ನವಾಗಿ ಲಭಿಸಿದಂತೆ ಆಗುವದು. ಭಾರತದ ಅತ್ಯಂತ ಪ್ರಾಚೀನಮಹಿಮೆಯೆಂದರೆ ಸಂಸ್ಕೃತಮಹಿಮೆಯೇ. ಅನಿವಾರ್ಯವಾಗಿ ಈ ಭಾಷೆಯು ಈಗ ಮೂಲೆಗೆ ಬಿದ್ದಿದೆ; ಅದರ ಅವನತಿಯೊಂದಿಗೆ ನಮ್ಮ ಜನಾಂಗವು ಹರಿದುಹಂಚಿಹೋಯಿತು. ನಾವು ಒಂದು ಜನವೆಂಬ ಬುದ್ಧಿ ಹಾರಿಹೋಗಿಬಿಟ್ಟಿದೆ. ಅತಿಪುರಾತನ ಸಂಸ್ಕೃತಿಯವರೆಂಬ ಹೆಮ್ಮೆಯೇ ಜನಕ್ಕೆ ಒಂದು ಆಸ್ತಿಯಲ್ಲವೆ?

2. ಸಂಸ್ಕೃತವು ನಮ್ಮೆಲ್ಲರ ಭಾಷೆಯಾಯಿತೆಂದು ಇಟ್ಟುಕೊಳ್ಳಿಘ; ಆಗ ಅದು ದೇಶಭಾಷೆಗಳನ್ನೆಲ್ಲ ಮೇಲಕ್ಕೆತ್ತುವದು. ಆಯಾ ಭಾಷೆಯವರು ಅಂತಃಶಕ್ತಿಯಿಂದಲೂ ಬಹಿಃಶಕ್ತಿಯಿಂದಲೂ ಕೂಡಿಕೊಂಡು ಭಾರತದವರೆಂಬ ಹೆಮ್ಮೆಯನ್ನು ಪಡೆದುಕೊಳ್ಳುವರು. ಇಂಥ ಕಾರ್ಯವನ್ನು ಮತ್ತೆ ಯಾವ ಭಾಷೆ ತಾನೆ ಮಾಡೀತು?

3. ಸಂಸ್ಕೃತವು ಉಚ್ಚನೀಚವೆಂಬ ಭೇದವಿಲ್ಲದೆ ಎಲ್ಲರ ಭಾಷೆ ಯಾಯಿತೆಂದರೆ ಸಾಮಾಜಿಕ, ಧಾರ್ಮಿಕ- ಈ ಎರಡೂ ಐಕ್ಯತೆಗಳೂ ತಮಗೆ ತಾವೇ ಬಂದು ಸೇರಿಕೊಳ್ಳುವವು. ವಿನಾಕಾರಣವಾಗಿ ಈ ಭಾಷೆ ಎಲ್ಲಿಯೋ ಕೆಲವರ ಸ್ವತ್ತಾಗಿ ಏತಕ್ಕೆ ಉಳಿಯಬೇಕು?

4. ಸಂಸ್ಕೃತವು ದೇಶಭಾಷೆಯೊಡನೆ ಬೆರೆತುಕೊಳ್ಳುವದು, ಇವೆರಡರ ಜೊತೆಗೆ ಇಂಗ್ಲಿಷಿನಂಥ ವಿದೇಶೀಯಭಾಷೆ ಸೇರಿಕೊಳ್ಳುವದು- ಇಷ್ಟು ವಿದ್ಯಾವಂತನೆಂದು ಹೇಳಿಕೊಳ್ಳುವ ಭಾರತದೇಶವಾಸಿಗೆಲ್ಲ ತೀರಕಡಿಮೆಯ ಜ್ಞಾನ ಸಾಧನ, ಅದೇ ತೀರ ಹೆಚ್ಚಿನ ಸಾಧನವೂ ಆಗುವದು. **ಪ್ರಾಚೀನಾರ್ವಾಚೀನ ನಾಗರಿಕತೆಯನ್ನೆಲ್ಲ ಒಳಗೊಂಡಿರುವ ಆ ಬಗೆಯ ವಿದ್ಯಾಭ್ಯಾಸವೇ ಜನಾಂಗಕ್ಕೆ ಯೋಗ್ಯವಾದದ್ದು. ಸಾಮಾನ್ಯವಿದ್ಯಾಶಾಲೆಗಳಲ್ಲಿ ದೇಶಭಾಷಾಸಂಸ್ಕೃತಗಳೂ ಪ್ರೌಢವಿದ್ಯಾಲಯಗಳಲ್ಲಿ ಸಂಸ್ಕೃತಾಂಗ್ಲಭಾಷೆಗಳೂ ಇದ್ದರೆ ಎಂಥ ಅಭಿನಂದನೀಯ ಕ್ರಮವಾದೀತು! 'ಒಂದೊಂದು ದೇಶಭಾಷೆಗೊಂದೊಂದು ಸಕಲ ವಿದ್ಯಾನಿಲಯವಿರಲಿ!' ಎಂಬ ಸೂಚನೆಗೂ ಈ ಸೂಚನೆಗೂ ಎಷ್ಟು ಅಜಗಜಾಂತರ, ಆಲೋಚಿಸಿ ನೋಡಿರಿ! ವ್ಯವಹರಣೀಯವಾದದ್ದು ಯಾವದು?**

5. ಸಂಸ್ಕೃತವು ನಮ್ಮ ದೇಶದಲ್ಲಿ ಹರಿಯಿತೆಂದರೆ ಹಿಮಾಲಯದಿಂದ ಹುಟ್ಟಿದ ಗಂಗೆಯು ಶಾಖೋಪಶಾಖೆಗಳಾಗಿ ಭಾರತದಲ್ಲೆಲ್ಲ ಹರಿಯುತ್ತಿದೆ ಎಂಬಂಥ

ಉತ್ಸಾಹವರ್ಧಕಭಾವನೆ ಬರುವದು. ಮಿಕ್ಕ ಯಾವ ಭಾಷೆಯೇ ಆಗಲಿ ಇದಕ್ಕೆ ಹೋಲಿಸಿದರೆ ಕಾಗೆ ಕುಡಿಯುವ ಸಣ್ಣ ತೊರೆಯಾಗಿರುವದು.

6. ಸಂಸ್ಕೃತವು ನಮ್ಮ ಭಾಷೆಯಜೊತೆಗೆ ಬಂದರೆ ಶ್ರದ್ಧಾಭಕ್ತಿಯಿಂದ ಅದನ್ನು ಬರಮಾಡಿಕೊಂಡೇವು. ಅದನ್ನು ಅನ್ಯಭಾಷೆ ಎಂದು ಎಂದಿಗೂ ಕಾಣಲಾರೆವು. ಯಾವ ಅನ್ಯಭಾಷೆಯ ಸ್ನೇಹವುಂಟಾದರೆತಾನೆ ನಮ್ಮ ಭಾಷೆಗೆ ಬೇಕೆನ್ನುವ ಸಹಾಯವು ಸಂಸ್ಕೃತದಿಂದ ಸಿಕ್ಕುವಮಟ್ಟಿಗೆ ದೊರೆತೀತು?

7. ಸಂಸ್ಕೃತ ಸ್ವಲ್ಪ ಜೀರ್ಣವಾದ ದೊಡ್ಡದೊಂದು ರಾಜಭವನದಂತೆ ಇರುತ್ತದೆ. ಅದನ್ನು ಒಂದಿಷ್ಟು ಜೀರ್ಣೋದ್ಧಾರಮಾಡಿ ಒಂದೆರಡು ಹೊಸ ಕೊಟ್ಟಡಿಗಳಂತೆ ಈಗಿನ ಜ್ಞಾನದ ಶಾಖೆಗಳನ್ನು ತಗಲುಹಾಕಿದರೆ ಸಾಕು, ಪ್ರಪಂಚದ ಅತ್ಯಂತಮುಂಬರಿದಿರುವ ಭಾಷೆಗಳ ಸಾಲಿಗೆ ಸರಿನಿಲ್ಲುವದಕ್ಕೆ ತಕ್ಕ ಭಾಷೆಯಾಗಿಬಿಡುವದು. ಮಿಕ್ಕ ಯಾವ ಭಾಷೆಯೇ ಆಗಲಿ, ಆ ಸ್ಥಾನಕ್ಕೆ ಬರುವದಕ್ಕೆ ಎಷ್ಟು ಶ್ರಮ, ಎಷ್ಟು ಧನವ್ಯಯ, ಎಷ್ಟು ದೀರ್ಘಕಾಲ ನಿರೀಕ್ಷಣೆ!

8. ಸಂಸ್ಕೃತವು ವಿದ್ಯಾಭ್ಯಾಸದಲ್ಲಿ ಅಂಗವಾದರೆ ಆಗಲೆ ಹೇಳಿರುವಂತೆ ಒಂದುಸಲಕ್ಕೆ ಎರಡೇ ಭಾಷೆಗಳನ್ನು ಓದಿದರೆ ಸಾಕಾಗಿರುತ್ತದೆ. ಮತ್ತೆ ಯಾವದಾದರೂ ಜನಾಂಗದ ಭಾಷೆಯಾಗಿ ನಿಂತರೆ ಆ ಭಾಷೆ, ದೇಶಭಾಷೆ, ಸಂಸ್ಕೃತಿಯ ಭಂಡಾರವಾದ ಸಂಸ್ಕಾರ- ಇವುಗಳಲ್ಲಿ ಯಾವದಾದರೊಂದನ್ನು ಅತ್ತೊಗೆಯಬೇಕಾಗುವದು. ಇದು ಇಷ್ಟಾದದ್ದೆ?

9. ಸಂಸ್ಕೃತದಲ್ಲಿರುವ ತತ್ತ್ವಶಾಸ್ತ್ರವಾಗಲಿ, ಧರ್ಮವಾಗಲಿ ದೇಶಕಾಲಗಳ ಪರಿಚ್ಛೇದವಿಲ್ಲದ್ದಾಗಿದೆಯಾದರೂ ಅದರ ದೃಷ್ಟಿಕೋಣವನ್ನವಲಂಬಿಸುವದರಿಂದಲೇ ನಮ್ಮ ಜನಾಂಗಭಾವನೆಯು ಉತ್ಕೃಷ್ಟರೀತಿಯಿಂದ ಬೆಳೆದುಕೊಂಡೀತು. ಸಂಸ್ಕೃತವು ಉಜ್ಜೀವಿತವಾದರೆ ನಾವೂ ಉಜ್ಜೀವಿತವಾದಂತೆ. ಈ ಉಜ್ಜೀವನವು ಎಂದಾದರೂ ಆಗಲೇಬೇಕಲ್ಲವೆ?

10. **ಭಾರತದ ಅಧ್ಯಾತ್ಮಭಾವನೆಯು ಸರಿಯಾಗಿ ತನ್ನ ಪರಮಗತಿಯನ್ನು ಕಾಣಬೇಕಾದರೆ ಅದನ್ನು ದಾಟಿಸುವದಕ್ಕೆ ಸಂಸ್ಕೃತಭಾಷೆಯಲ್ಲದೆ ಮತ್ತೆ ಯಾವ ಯೋಗ್ಯನೌಕೆಯಿದೆ?**

11. ತುಲನಾತ್ಮಕಭಾಷಾಶಾಸ್ತ್ರಕ್ಕೆ ಮೂಲಪ್ರಬೋದಕವಾದ ಭಾಷೆ ಸಂಸ್ಕೃತ.

ಆದ್ದರಿಂದಲೇ ಅದನ್ನು ಗೌರವದಿಂದ ಸಾದರವಾಗಿ ಭೂಮಂಡಲದ ವಿದ್ವಾಂಸರೆಲ್ಲರೂ ಕಾಣುತ್ತಿರುವರು. ಇಂಥ ಭಾಷೆಯು ಸಜೀವವಾಗಿಯೂ ನಮ್ಮದೆಂದು ಹೇಳಿಕೊಳ್ಳುವ ಹೆಮ್ಮೆ ನಮಗೆ ಬೇಡವೆ? ಇದೊಂದು ಪ್ರಾಚೀನಾವಶೇಷವೆಂದು ತೃಪ್ತಿಪಟ್ಟರೆ ಸಾಕೆ?

12. **ಸಂಸ್ಕೃತಭಾಷೆಯ ಜನರಿವರೆಂಬ ಕಾರಣದಿಂದ ಭೂಲೋಕದ ಎಲ್ಲಾ ಭಾಗಗಳಲ್ಲಿಯೂ ಈಗಾಗಲೆ ನಮಗೊಂದು ಗೌರವದ ಸ್ಥಾನವು ದೊರೆತುಬಿಟ್ಟಿದೆ. ನಾವೂ ಅದರಿಂದ ಪ್ರಭಾವಿತರಾಗಿ ಪ್ರಪಂಚವನ್ನೆಲ್ಲ ಸಂಸ್ಕೃತ ಸಂಸ್ಕೃತಿಯ ಪ್ರಭಾವಕ್ಕೆ ಈಡುಮಾಡುವ ಕನಸು ನನಸಾಗಬೇಡವೆ?**

13. ಸಂಸ್ಕೃತವು ನಮ್ಮ ಭಾಷೆಯಾಗಿ ಬೆಳೆದರೆ, ಸಂಜೀವಿನೀಮಂತ್ರದಿಂದ ಅದರ ಚೇತನವು ಬಲವಾದರೆ, ಈ ಲೋಕಕ್ಕೆಲ್ಲ ಒಂದು ಭಾಷೆಯಿರಬೇಕೆಂದು ಎಸ್ಪರಾಂಟ ಮುಂತಾದ ಹೊಸ ಭಾಷೆಗಳ ಸೃಷ್ಟಿಗೂ ಜನರು ಕೈಹಾಕುತ್ತಿರುವ ಈ ಸಮಯದಲ್ಲಿ ಆ ವಿಶ್ವಭಾಷಾಸ್ಥಾನವು ಸಂಸ್ಕೃತಕ್ಕೆ ಒದಗಲಿ! -ಎಂದು ಹಾರೈಸುವದು ಹಗಲುಗನವರಿಕೆಯಾದೀತೇನು?

* * * * *

# 19. ಸಂಸ್ಕೃತ

1. ಸಂಸ್ಕೃತದಲ್ಲಿ ಒಂದಾನೊಂದು ತತ್ತ್ವಜ್ಞಾನವಿದೆ. ಅದು ಭರತಖಂಡದವರ ವಿಚಾರಸೂರ್ಯನ ವಿಷ್ಣುಪದವಾಗಿರುತ್ತದೆ, ಅಥವಾ ಭಾರತವಿಚಾರದ ಎಂದೇಕೆನ್ನಬೇಕು, ಪ್ರಪಂಚದ ಮಾನವರೆಲ್ಲರ ವಿಚಾರವು ತುಟ್ಟತುದಿಗೇರಿದರೆ ಮುಟ್ಟಬೇಕಾದ ಮಜಲು ಈ ತತ್ತ್ವದ ಸಿದ್ಧಾಂತ. ಅದು ವಿಷಮಜೀವನಯಾತ್ರೆಯಲ್ಲಿ ಮಾನವನಿಗೆ ಮಾರ್ಗದರ್ಶಿಯಾಗಲಿ- ಎಂಬ ಒಂದೇ ಕಾರಣದಿಂದಲೇ ಈ ಭಾಷೆಯನ್ನು ಉಳಿಸಿಕೊಳ್ಳುವದು ಅತ್ಯವಶ್ಯವಾಗಿದೆ.

2. ಸಂಸ್ಕೃತವು ತತ್ತ್ವಶಾಸ್ತ್ರದ ಭಾಷೆಯಾದ್ದರಿಂದ ಇದರಲ್ಲಿ ನೀತಿ ಮತ್ತು ಆಧ್ಯಾತ್ಮಿಕಸಾರ- ಇವೆರಡೇ ಇರುವ ಒಂದು ವಿಶ್ವಧರ್ಮವಿದೆ. ಅದರಲ್ಲಿ ನಂಬಬೇಕಾದ ಬಲಾತ್ಕಾರದ ತತ್ತ್ವಗಳೇ ಇಲ್ಲಘಿ. ತನ್ನ ಕ್ಷೇತ್ರದೊಳಕ್ಕೆ ಸೇರಿದವರೆಲ್ಲರನ್ನೂ ಯುಕ್ತಿಯಿಂದಲೂ ಮನವೊಲಿಸುವದರಿಂದಲೂ ಸನ್ಮಾರ್ಗಕ್ಕೆಳೆಯುವದೊಂದೇ ಆ ತತ್ತ್ವಶಾಸ್ತ್ರದ ಗುರಿ.

3. ಸಂಸ್ಕೃತವು ಪಾಶ್ಚಾತ್ಯರ ಕಣ್ಣಿಗೆ ಬಿದ್ದಂದಿನಿಂದ ನಾಗರಿಕ ಪ್ರಪಂಚದವರೆಲ್ಲರ ಭಾಷೆಯಾಗಿಬಿಟ್ಟಿದೆ. ಅದನ್ನು ಮೆಚ್ಚಿ ಈ ದೇಶಕ್ಕೆ ನೂರಾರು ಜನರು ಇಲ್ಲಿಗೆ ಬಂದುಹೋಗುತ್ತಿರುವರು. ಪರದೇಶದ ಸಂಸ್ಕೃತ ವಿದ್ವಾಂಸರು ಇಲ್ಲಿಗೆ ಬಂದು ಸಂಸ್ಕೃತದಲ್ಲಿ ವಾಗ್ಮಿತೆಯಿಂದ ಭಾಷಣಗಳನ್ನು ಮಾಡಿದಾಗ ನಮ್ಮ ದೇಶದವರು ತಲೆತಗ್ಗಿಸಬೇಕಾಗಿಬಂದದ್ದೂ ಉಂಟು! ಈಗಲೂ ತಮ್ಮ ಇಂಗ್ಲಿಷಿನ ಜ್ಞಾನದ ಒಣಹೆಮ್ಮೆಯಿಂದ ನಮ್ಮ ದೇಶದ ಸ್ಕೂಲುಗಳಲ್ಲಿ ಕಾಲೇಜುಗಳಲ್ಲಿ ಕೋರ್ಟುಗಳಲ್ಲಿ ಕಚೇರಿಗಳಲ್ಲಿ ಸಾಧಾರಣಸಭೆಗಳಲ್ಲಷ್ಟೆ, ಸಮ್ಮೇಲನಗಳಲ್ಲಿ ಈ ಎರವಲು ಭಾಷೆಯಲ್ಲಿಯೇ ತಪ್ಪುತಪ್ಪಾಗಿ ಉಚ್ಚರಿಸಿದ ಅಪಸ್ವರದ ಶಬ್ದಗಳನ್ನೊಳಗೊಂಡ ವಾಕ್ಯಗಳೇ ನಮಗೆ ಬೇಕಾಗಿವೆ. ಹೊರದೇಶದವರು ನಮ್ಮ ಈ ಸ್ಥಿತಿಯನ್ನು ನೋಡಿ ನಗುತ್ತಿರುವರು. ಇಂಗ್ಲಿಷನ್ನು ಉಪಯೋಗಿಸುವ ಬೇರೆ ದೇಶಗಳೂ ಇವೆ; ಅವು ತಮ್ಮ ಭಾಷೆಯ ಗೌರವವನ್ನು ತಳ್ಳಿಹಾಕಿ ಆ ಭಾಷೆಯನ್ನೇನೂ ಪೂಜಿಸುತ್ತಿಲ್ಲಷ್ಟೆ.

4. ಆಂಗ್ಲಭಾಷೆಯ ಅಕ್ಷರಯೋಜನೆ, ಉಚ್ಚಾರಣೆ, ಆ ಭಾಷೆಯ ಬೆಡಗುಗಳು-ಇವನ್ನೆಲ್ಲ ಸರಿಯಾಗಿ ಕಲಿಯುವದಕ್ಕೆ ಬೇಕಾದದ್ದರ ಅರ್ಧ ಕಷ್ಟವು ಸಂಸ್ಕೃತವನ್ನು ಕಲಿಯುವದಕ್ಕೆ ಆಗಲಾರದು. ಆಂಗ್ಲಭಾಷೆಯ ಪೂಜೆಗೆ ಲಕ್ಷ್ಮೀಕಟಾಕ್ಷ ವಿರುವಷ್ಟು ಕಾಲವೇ ಅವಕ. ಇದಕ್ಕೆ ನಾವು ಈಗ ಹಿಂದಿಯ ಆರಾಧನೆಗೆ ಒಲಿಯುತ್ತಿರುವದೇ ಸಾಕ್ಷಿಷ್ಟೆ.

5. 'ಸಂಸ್ಕೃತವು ಬ್ರಾಹ್ಮಣರ ಸ್ವತ್ತು' ಎಂದು ಹುಚ್ಚು ಬೇರೆ! ಸಂಸ್ಕೃತದಲ್ಲಿ ಹಾಗೆಂದೇನಾದರೂ ಬರೆದಿರುವ ವಾಕ್ಯವಿದೆಯೇ? ಈ ಕಲ್ಯಾಣವಾಕ್ಕನ್ನು ನಾನು ನಿಮಗೆ ಹೇಳಿದಂತೆ ಬ್ರಾಹ್ಮಣರೇ ಮುಂತಾದವರೆಲ್ಲರಿಗೂ ಹೇಳಿ!' ಎಂಬ ವಾಕ್ಯವು ಸ್ಪಷ್ಟವಾಗಿ ಕೇಳಿಬರುತ್ತಿಲ್ಲವೆ?

* * * * *

## 20. ಸಂಸ್ಕೃತ

**1962ನೆ ಡಿಸೆಂಬರು ತಿಂಗಳಲ್ಲಿ ಬೊಂಬಾಯಿಯಲ್ಲಿ ನಡೆದ ಸಂಸ್ಕೃತವಿಶ್ವಪರಿಷತ್ತಿಗೆ 1300 ಪ್ರತಿನಿಧಿಗಳು ಬಂದಿದ್ದರಂತೆ. ಅಲ್ಲಿ ಡಾ|| ಎಸ್. ರಾಧಾಕೃಷ್ಣನ್ (ಭಾರತದ ವೈಸ್‌ಪ್ರೆಸಿಡೆಂಟ್‌ರವರು) ಮಾಡಿದ ಆರಂಭಭಾಷಣದಲ್ಲಿ ಆವಿಷ್ಕಾರ ಮಾಡಿದ ಕೆಲವು ಅಭಿಪ್ರಾಯಗಳು ಮನನೀಯವಾಗಿವೆ.**

''ಯಾವ ಭಾಷೆಯಲ್ಲಿಯೇ ಆಗಲಿ ಇರುವ ಪ್ರಪಂಚದ ಉದ್ಗ್ರಂಥಗಳೆಲ್ಲ ಮಾನವಕುಲಕ್ಕೆ ಸೇರಿದವುಗಳಾಗಿವೆ. ಬಗೆಬಗೆಯ ಸಂಸ್ಕೃತಿಗಳೂ ಮತಗಳೂ ಜನಾಂಗಗಳೂ ಒಟ್ಟು ಸೇರಿರುವ ಈ ಕಾಲದಲ್ಲಿ ಹೊರತೋರಿಕೊಳ್ಳಲಿರುವ ನವೀನಪ್ರಪಂಚದ ನಾಗರಿಕರೆನ್ನಿಸಿಕೊಳ್ಳುವ ಅಧಿಕಾರವನ್ನು ಸಂಪಾದಿಸಿಕೊಳ್ಳಬೇಕಾದರೆ ನಾವು ಮತ್ತೊಬ್ಬರ ಭಾವಗಳ ಮತ್ತು ಆದರ್ಶಗಳ ವಿಷಯದಲ್ಲಿ ಸರಿಯಾದ ಸಹಾನುಭೂತಿಯ ದೃಷ್ಟಿಯನ್ನು ಸಂಪಾದಿಸಿಕೊಳ್ಳಬೇಕಾಗಿರುತ್ತದೆ.

''ಸಂಸ್ಕೃತಕ್ಕೆ ಸಂಬಂಧಿಸಿರುವ ಸಂಸ್ಕೃತಿಯು ನಮಗೆ ಒಂದಾನೊಂದು ಮತದ ದೃಷ್ಟಿಯನ್ನು ಕೊಡುತ್ತದೆ. ಅದರಲ್ಲಿ ವೈಯಕ್ತಿಕತೆಯಿರುವದಿಲ್ಲ, ಅದು ಸಾರ್ವತ್ರಿಕವಾಗಿರುತ್ತದೆ; ಈಗಿನ ಸ್ಥಿತಿಗಳಿಗೆ ಅತ್ಯಂತವಾಗಿ ಹೊಂದಿಕೊಂಡಿರುವ ಮತವದು.

''ನಾನಾತ್ವದಲ್ಲಿ ಏಕತ್ವವನ್ನು ಕಾಣುವದೇ ಭಾರತದ ಗುರಿಯಾಗಿರುತ್ತದೆ; ಹಾಗೆ ಕಾಣುವದು ನಾನಾತ್ವವನ್ನು ಅಳಿಸಿಹಾಕುವದರಿಂದಲ್ಲಷ್ಟೆ, ಭೇದಗಳನ್ನು ಉಳಿಸಿಕೊಂಡೇ ಅವುಗಳನ್ನೆಲ್ಲ ಕೂಡಿಸಿಕೊಳ್ಳುವದರಿಂದ. ಈ ದೇಶದ ಮೂಲೋದ್ದೇಶವೆಂದರೆ ನಾನಾತ್ವದಲ್ಲಿ ಏಕತ್ವವನ್ನು ಕಾಣುವದು, ವೈವಿಧ್ಯದಲ್ಲಿ ಏಕರೂಪತೆಯನ್ನು ನಿರ್ಮಿಸಿಕೊಳ್ಳುವದು. ಈ ಲೋಕದ ಮಹಾಸರಕಾರಗಳು ಸಹಕರಿಸಿಕೊಂಡಿರಬೇಕೆಂದು ನಾವು ಕೇಳಿಕೊಳ್ಳುತ್ತಿರುವದೇಕೆಂದರೆ, ನಮ್ಮ ಸಂಪ್ರದಾಯದಿಂದ ಇಂಥ ತತ್ತ್ವದೃಷ್ಟಿಯು ಕವಲೊಡೆದುಕೊಂಡಿರುತ್ತದೆಯಾದ್ದರಿಂದ.

''ಸಂಸ್ಕೃತದಲ್ಲಿ ನಮ್ಮ ದೇಶದ ಕಾವ್ಯಷ್ಟೆ, ಕಲೆ; ವಿಜ್ಞಾನ, ವೈದ್ಯ; ರಾಜನೀತಿ, ಧರ್ಮ- ಈ ಎಲ್ಲವೂ ಹುದುಗಿಕೊಂಡಿವೆ.

''ಸಂಸ್ಕೃತವು ಕೇವಲ ಹಿಂದುಗಳ ಭಾಷೆ ಎಂದು ಎಣಿಸುವುದು ತಪ್ಪಷ್ಟೆ. ಪ್ಲೇಟೊ, ಅರಿಸ್ಟಾಟಲ್, ಕ್ಯಾಂಟ್, ಹೆಗೆಲ್, ಷೇಕ್ಸ್ಪಿಯರ್, ಮಿಲ್ಟನ್, ಬ್ರೌನಿಂಗ್, ಟೆನಿಸನ್- ಇವರ ಕೃತಿಗಳನ್ನು ಓದುವಂತೆಯೇ ಬಾದರಾಯಣ, ಜೈಮಿನಿ, ಕಣಾದ, ಗೌತಮ, ವ್ಯಾಸ, ವಾಲ್ಮೀಕಿ, ಕಾಳಿದಾಸ, ಭವಭೂತಿ- ಇವರ ಕೃತಿಗಳನ್ನು ಓದಬೇಕು. ಸಂಸ್ಕೃತದಲ್ಲಿ ಮತವೂ ಅಲ್ಲದೆ ತತ್ತ್ವಶಾಸ್ತ್ರವೂ ಅಲ್ಲದೆ ಎಷ್ಟೋ ವಿಚಾರಗಳಿರುತ್ತವೆ. ಹಿಂದೂಧರ್ಮಕ್ಕೆ ಸೇರದೆ ಇರುವ ಪೂರ್ವದೇಶಗಳ ಜನರೂ ಸಂಸ್ಕೃತಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿರುತ್ತಾರೆ. ಅದರ ಮಹತ್ವವನ್ನು ಇಂದಿಗೂ ಆರಾಧಿಸುತ್ತಿದಾರೆ.''

**ಅಣ್ಣಗಳಿರ, ಸಂಸ್ಕೃತವು ಈಗ ಎಲ್ಲರ ಸ್ತೋತ್ರಕ್ಕೂ ಪಾತ್ರವಾಗುತ್ತಿದೆ. ಆದರೆ ಅದನ್ನು ದೇಶದಲ್ಲಿ ಹಬ್ಬಿಸುವದಕ್ಕೆ ನಾವು ಬರಿಯ ಹೊಗಳುಭಟ್ಟರಾದರೆ ಸಾಲದು. ಭಾರತದೇಶದ ತತ್ತ್ವಜ್ಞಾನವು ಹೇಗೆ ಶ್ರೀವಿವೇಕಾನಂದರಂಥ ತ್ಯಾಗಮೂರ್ತಿಗಳಾದ ಸಂನ್ಯಾಸಿಗಳ ಸೇವೆಯಿಂದ ಭೂಲೋಕದಲ್ಲೆಲ್ಲ ವ್ಯಾಪಿಸಿಕೊಂಡಿತೋ ಹಾಗೆಯೇ ಸಂಸ್ಕೃತಪ್ರಿಯರಾದ ನಿಷ್ಕಾಮಕರ್ಮಯೋಗಿಗಳಾದ ಕೆಲವರು ಸೊಂಟವನ್ನು ಕಟ್ಟಿ ಆ ಭಾಷೆಯ ಸೇವೆಗೆ ನಿಲ್ಲುವದು ಅತ್ಯವಶ್ಯವಾಗಿದೆ.**

1. ಯಾವ ಪತ್ರಿಕೆಯೇ ಆಗಲಿ, ಅದರ ಸಂಪಾದಕರು ಭಾರತದ ಭಕ್ತರೂ ಸಂಸ್ಕೃತಪ್ರಿಯರೂ ಆಗಿದ್ದರೆ ಪತ್ರಿಕೆಯ ಪ್ರಮಾಣಕ್ಕೆ ತಕ್ಕಂತೆ ಆಯಾ ಪತ್ರಿಕೆಯ ವಿಷಯದ ಒಂದು ಭಾಗವನ್ನು ಸಂಸ್ಕೃತದಲ್ಲಿ ಸರಳವಾದ ಶೈಲಿಯಲ್ಲಿ ಬಳಕೆಯಲ್ಲಿರುವ ಸಂಸ್ಕೃತಮಾತುಗಳಿಂದ ತಿಳಿಸುವದಕ್ಕೆ ಪ್ರಾರಂಭಿಸಬೇಕು. ಅಲ್ಲಿ ಅನಿವಾರ್ಯವಾಗಿ ಬಳಸಿದ ಸಂಸ್ಕೃತಶಬ್ದಗಳ ಅರ್ಥವನ್ನು ಪತ್ರಿಕೆಯ ಭಾಷೆಯಲ್ಲಿ ಕೊಡಬೇಕು.

2. ಗ್ರಂಥಕರ್ತರು ತಮತಮಗೆ ಮೆಚ್ಚಿನ ವಿಷಯಗಳನ್ನು-ಲೌಕಿಕ, ಧಾರ್ಮಿಕ, ತಾತ್ತ್ವಿಕ- ಯಾವ ವಿಷಯವು ತಮಗೆ ಮೆಚ್ಚೊಪ್ಪಿ, ಅದನ್ನು- ಸಣ್ಣಸಣ್ಣ ಗ್ರಂಥಗಳಲ್ಲಿ ಹೊಸದಾಗಿ ಬರೆಯಬೇಕು. ಅವುಗಳ ಅಭಿಪ್ರಾಯವನ್ನು ಸಂಕ್ಷೇಪವಾಗಿ ದೇಶಭಾಷೆಯಲ್ಲಿ ಕೊಡಬೇಕು.

3. ಶ್ರೀಮಂತರು ಸಂಸ್ಕೃತಪಾಠಶಾಲೆಗಳನ್ನು ತೆರೆದು-ಅಲ್ಲಿ ಸಂಸ್ಕೃತ ಭಾಷೆಯ ಮೂಲಕ ಎಲ್ಲಾ ವಿಷಯಗಳನ್ನೂ ಬೋಧಿಸುವದಕ್ಕೆ ಏರ್ಪಡಿಸಬೇಕು.

ಸರಕಾರದವರು ಈ ಸ್ತುತ್ಯಕಾರ್ಯಕ್ಕೆ ಕೊಡಬಹುದಾದ ಪ್ರೋತ್ಸಾಹವನ್ನು ಮುಂದಿನ ಲೇಖನದಲ್ಲಿ ಬರೆಯುವೆನು.

* * * * *

# 21. ಸಂಸ್ಕೃತ

ಸಂಸ್ಕೃತವನ್ನು ಅದಕ್ಕೆ ತಕ್ಕ ಸ್ಥಾನದಲ್ಲಿ ಕುಳ್ಳಿರಿಸಿ, ಅದರಿಂದಾಗುವ ಲಾಭವನ್ನು ಪಡೆಯುವದಕ್ಕೆ ಸರಕಾರದವರು ಏನೇನು ಮಾಡಬಹುದು?

1. ಸಂಸ್ಕೃತವನ್ನು ಭಾರತದೇಶದ ಭಾಷೆಯೆಂದು ಅನುಮೋದಿಸಬೇಕು. ಇದನ್ನು ಒಪ್ಪಿದರೆ ಇಲ್ಲಿಯೇ ಈಗಲೇ ಭಾರತದೇಶವು ಭಾಷಾದ್ವಯದ ದೇಶವಾಗಿ

ಬಿಡುವದು. ಭಾಷೆಗಳ ಹೊಡೆದಾಟವು ನಿಂತೇಹೋಗುವದು. ದೇಶವೆಲ್ಲ ಒಗ್ಗಟ್ಟಾದದ್ದು ಸರಕಾರಕ್ಕೊಂದು ಲಾಭವಲ್ಲವೆ ?

2. ಆದರೆ ಹಿಂದಿಯು ಹೇಗೋ ರಾಷ್ಟ್ರಭಾಷೆಯೆಂದಾಗಿಬಿಟ್ಟಿರುವದರಿಂದ ಸಂಸ್ಕೃತವೂ ಒಂದು ರಾಷ್ಟ್ರಭಾಷೆ ಎಂದು ಅಂಗೀಕರಿಸಬೇಕು. ಸಂಸ್ಕೃತಕಮಿಷನ್ ಸದಸ್ಯರು ಇದನ್ನು ಶಿಫಾರಸುಮಾಡಿರುತ್ತಾರೆ. ಇದರಿಂದ ಹಿಂದಿಗೂ ಮಿಕ್ಕ ಭಾಷೆಗಳಿಗೂ ಪೋಷಣೆ ಸಿಕ್ಕುತ್ತದೆ. ಸಂಸ್ಕೃತಭಾಷೆಯಿಂದ ಭಾರತಕ್ಕೆ ಐಕ್ಯವು ಬಂದೇ ಇದೆ; ಹಿಂದಿಯಿಂದ ಹೊಸದಾಗಿ ಒಗ್ಗಟ್ಟನ್ನು ನಿರ್ಮಾಣಮಾಡಬೇಕಾಗಿದೆ. ಭಾಷೆಗಳ ತಿಕ್ಕಾಟದಿಂದ ಈ ಹೊಸ ಪ್ರಯತ್ನವು ಆಯಾಸಸಾಧ್ಯವೂ, ವ್ಯರ್ಥಾಯಾಸಜನಕ.

3. **ಸಂಸ್ಕೃತದಿಂದ ಹಿಂದಿನ ಸಂಸ್ಕೃತಿಯ ಸಂಬಂಧವನ್ನು ಉಳಿಸಿದಂತೆ** ಆಗುತ್ತದೆ, ಹಿಂದಿಯು ಈಗಿನ ಭಾಷೆಗಳ ಪ್ರತಿನಿಧಿಯಾಗುತ್ತದೆ. ಲ್ಯಾಟಿನ್, ಗ್ರೀಕು- ಮುಂತಾದವುಗಳಂತೆ ಸಂಸ್ಕೃತವೂ ಹಾಳಾಗದೆ ಉಳಿದುಕೊಳ್ಳುತ್ತದೆ.

4. ಭೌತಿಕವಿಜ್ಞಾನ, ಇತಿಹಾಸ, ವಾಙ್ಮಯ, ಕಲೆಗಳು, ನ್ಯಾಯವೂ, ದೈನಂದಿನವ್ಯವಹಾರ, ಉತ್ಸವಗಳು- ಮುಂತಾದವುಗಳಿಗೆ ಬೇಕಾಗುವ ಸಂಸ್ಕೃತ ಪಾರಿಭಾಷಿಕಶಬ್ದಗಳನ್ನು ಪುರಾತನಗ್ರಂಥಗಳಿಂದ ಆರಿಸಿಕೊಳ್ಳಬೇಕು; ಇಲ್ಲದಿದ್ದರೆ ಹೊಸದಾಗಿ ಸಂಸ್ಕೃತದಲ್ಲಿ ಸುಲಭವಾಗಿ ಅರ್ಥವಾಗುವ ಶಬ್ದಗಳನ್ನು ಕಲ್ಪಿಸಬೇಕು. ಒಂದೊಂದು ದೇಶದವರು ಒಂದೊಂದು ಪರಿಭಾಷೆಯನ್ನು ಏರ್ಪಡಿಸಿಕೊಳ್ಳುವ ಅನಿಷ್ಟಪದ್ಧತಿಯು ಇದರಿಂದ ಕಣ್ಮರೆಯಾಗುತ್ತದೆ. ಭಾರತದೇಶದ ಒಗ್ಗಟ್ಟು ಬೆಳೆಯುತ್ತದೆ.

5. ಹಿಂದಿನ ಗ್ರಂಥಗಳ ಸಾರವನ್ನು ಸುಲಭತರವಾದ ಸಂಸ್ಕೃತಭಾಷೆಯಲ್ಲಿ ಬರೆಯಿಸಬೇಕು. ಹೊಸ ವಿಷಯಗಳ ಗ್ರಂಥಗಳನ್ನು ಆ ಭಾಷೆಯಲ್ಲಿ ಬರೆಯಿಸಿ ಪ್ರೋತ್ಸಾಹಿಸಬೇಕು. ದೇಶಭಾಷೆಗಳ ಅನುವಾದವನ್ನು ಅಂಥ ಮೂಲದಿಂದಲೇ ತಮ್ಮ ತಮ್ಮ ಪ್ರಾಂತಕ್ಕೆ ತಕ್ಕಂತೆ ಮಾರ್ಪಡಿಸಿ ಪ್ರಕಟಿಸಿಕೊಳ್ಳಬೇಕು. ಇದರಿಂದಲೂ ಒಗ್ಗಟ್ಟು ಹೆಚ್ಚುವದು. ಒಂದೇ ಗ್ರಂಥವನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಮಾರ್ಪಡಿಸುವ ಚಟವು ತಪ್ಪುವದು.

* * * * *

# 22. ಸಂಸ್ಕೃತ

ಕನ್ನಡದಲ್ಲಿ ವ್ಯವಹಾರಕ್ಕಾಗಿ ಉಪಯೋಗಿಸುವ ಮಾತುಗಳು ಎಷ್ಟು ಸಂಸ್ಕೃತವಾಗಿರುತ್ತವೆ?- ಎಂಬುದನ್ನು ಲಕ್ಷ್ಯವಿಟ್ಟು ನೋಡುವದರಿಂದ ಲಾಭವುಂಟು. ಇಲ್ಲಿ ಕೆಲವು ಉದಾಹರಣೆಯ ವಾಕ್ಯಗಳನ್ನು ಕೊಟ್ಟಿರುತ್ತೇನೆ. ಅವುಗಳ ಕೆಳಗೆ ಸಂಸ್ಕೃತಭಾಷೆಯ ಅನುವಾದವನ್ನೂ ಬರೆದಿದೇನೆ.

**1. 'ಕರ್ಮವೀರ, ಸಚಿತ್ರ ರಾಷ್ಟ್ರೀಯ ವಾರಪತ್ರಿಕೆ'**

**ಕರ್ಮವೀರ, ಸಚಿತ್ರ-ರಾಷ್ಟ್ರಿಯ-ವಾರಪತ್ರಿಕಾ**

2. (ಅ) 'ಭೋಜನರಪತಿಯು ಪ್ರಾಚೀನಭಾರತದಲ್ಲಿಯ ಹಡಗು ನಿರ್ಮಾಣದ ಬಗ್ಗೆಯೇ ಒಂದು ಗ್ರಂಥವನ್ನು ಬರೆದಿದ್ದಾನೆ. ಅದಕ್ಕೆ ''ಯುಕ್ತಿಕಲ್ಪತರು'' ಎಂಬ ಹೆಸರಿದೆ.'

**ಭೋಜನರಪತಿಃ ಪ್ರಾಚೀನಭಾರತೀಯನೌಕಾನಿರ್ಮಾಣಮೇವಾಧಿಕೃತ್ಯ ಗ್ರನ್ಥಮೇಕಂ ಲಿಖಿತವಾನ್ । ತಸ್ಯ 'ಯುಕ್ತಿಕಲ್ಪತರುಃ' ಇತಿ ನಾಮ ॥**

(ಆ) 'ಅದರ ವಿವರವನ್ನು ನೋಡಿದರೆ ಈ ದೇಶದಲ್ಲಿ ಈ ಉದ್ಯಮವು ಎಷ್ಟೊಂದು ಪ್ರಗತಿ ಹೊಂದಿತ್ತು ಎಂಬುದರ ಕಲ್ಪನೆ ಬರುತ್ತದೆ. ಅದರಲ್ಲಿ ಅವನು ಇಲ್ಲಿ ಕಟ್ಟಲಾಗುತ್ತಿದ್ದ ಹಡಗುಗಳ ಆಕಾರ, ಅಳತೆ, ಅವುಗಳಿಗೆ ಉಪಯೋಗಿಸುತ್ತಿದ್ದ ಕಚ್ಚಾ ಸರಕುಗಳು- ಮುಂತಾದವುಗಳ ಬಗ್ಗೆ ಬರೆದಿದಾನೆ. ವರ್ಣನೆ ತೀರಸೂಕ್ಷ್ಮ ವಿವರ ಗಳನ್ನು ಕೂಡ ಒಳಗೊಂಡಿದೆ.'

**ತಸ್ಯ ವಿಷಯವಿವರಣಾವಲೋಕನೇನ ಅಸ್ಮಿನ್ ದೇಶೇ ಅಯಮ್ ಉದ್ಯೋಗಃ ಕಿಯತೀಂ ಪ್ರಗತಿಮ್ ಪ್ರಾಪ್ತ ಆಸೀತ್ ಇತ್ಯನುಮೇಯಂ ಭವತಿ। ತತ್ರ ಹಿ ಅತ್ರ ನಿರ್ಮಿತ್ಸಿತಾನಾಂ ನೌಕಾನಾಮ್ ಆಕಾರಂ, ಪರಿಮಾಣಮ್, ಉಪಕರಣಸಾಮಗ್ರೀಂ ಚ-ಇತ್ಯಾದಿ ಸವಿವರಮ್ ಅಲೇಖೀತ್ ಸಃ। ಅತಿಸೂಕ್ಷ್ಮಾವಾನ್ತರ ವಿಷಯಾಣಾಮ್ ಅಪಿ ತತ್ರ ವರ್ಣನಮಸ್ತಿ ॥**

**ಪ್ರಭಾತ**

3. (ಅ) 'ಯಕ್ಷಗಾನದಲ್ಲಿ ಈಗ ರೂಢಿಯಲ್ಲಿರುವ ಪ್ರಬಂಧ (ಗೇಯ

ರಚನಾರೀತಿ)ಗಳ ದೃಷ್ಟಿಯಿಂದ ನೋಡಿದರೆ ಆಧುನಿಕ ಶಾಸ್ತ್ರೀಯ ಸಂಗೀತಕ್ಕೆ ಅದರ ಋಣ ಸ್ವಲ್ಪವೇ.'

**ಯಕ್ಷಗಾನೇ ಸಾಂಪ್ರತಾಂ ನಿರೂಢಾನಾಂ ಪ್ರಬನ್ಧಾಭಿಖ್ಯಾನಂ ಗೇಯ ರಚನಾರೀತೀನಾಂ ದೃಷ್ಟ್ಯಾ ಆಧುನಿಕಶಾಸ್ತ್ರೀಯಸಂಗೀತಾ ಧಮರ್ಣ್ಯಮ್ ಅಲ್ಪಮೇವೇತಿ ವಾಚ್ಯಮ್ ॥**

3. (ಆ) 'ಆದರೆ ಕಂದ, ಚೌಪದಿ, ಷಟ್ಪದಿ- ಎಂದು ಮುಂತಾಗಿ ಬಹುಸಂಖ್ಯಾತವಾಗಿ ಯಕ್ಷಗಾನದಲ್ಲಿ ಉಪಯೋಗಿಸಲ್ಪಡುತ್ತಿರುವ ಪ್ರಬಂಧಪ್ರಕಾರ ಗಳು ನಮ್ಮ ಶಾಸ್ತ್ರೀಯಸಂಗೀತದ ಪರಿಮಿತಿಗೆ ಒಳಪಟ್ಟಿರುವೆಂಬುದನ್ನು ಬೃಹದ್ದೇಶೀ, ಅಭಿಲಷಿತಾರ್ಥಚಿಂತಾಮಣಿ, ಸಂಗೀತಚೂಡಾಮಣಿ, ಸರಸ್ವತೀ ಹೃದಯಾಲಂಕಾರ, ಸಂಗೀತಸುಧಾನಿಽ-ಇತ್ಯಾದಿ ಶಾಸ್ತ್ರಗ್ರಂಥಗಳಿಂದ ಆಸಕ್ತರಾದವರು ತಿಳಿಯ ಬಹುದಾಗಿದೆ.'

**ಪರಂ ತು ಕನ್ದಮ್, ಚತುಷ್ಪದೀ, ಷಟ್ಪದೀ- ಇತ್ಯಾದೀನಾಂ ಬಹುಸಂಖ್ಯಾಕಾ ಯಕ್ಷಗಾನೇ ಪ್ರಯುಜ್ಯಮಾನಾಃ ಕವಿತಾರಚನಾ ಪ್ರಕಾರಾಃ, ಅಸ್ಮಾಕಂ ಶಾಸ್ತ್ರೀಯಸಂಗೀತನಿಯಮೈರೇವ ಪ್ರತಿಬದ್ಧಾಃ- ಇತ್ಯೇತತ್ ಬೃಹದ್ದೇಶೀ, ಅಭಿಲಷಿತಾರ್ಥಚಿನ್ತಾಮಣಿಃ, ಸಂಗೀತ ಚೂಡಾಮಣಿಃ, ಸರಸ್ವತೀಹೃದಯಾಲಂಕಾರಃ, ಸಂಗೀತರತ್ನಾಕರಃ, ಸಂಗೀತಸುಧಾನಿಧಿಃ- ಇತ್ಯಾದಿಶಾಸ್ತ್ರಗ್ರನ್ಥೇಭ್ಯೋ ವಿಜ್ಞಾತುಂ ಶಕ್ಯತೇ ಸಮುತ್ಸುಕೈಃ ॥**

## ಜೀವೋತ್ತಮ

4. 'ವಿವಿಧಜೀವಿಗಳಿಂದ ತುಂಬಿದ ಈ ಜಗತ್ತಿನಲ್ಲಿ ಮನುಷ್ಯಜೀವಿಯ ಜನ್ಮವಾದಾಗಲೇ ಧರ್ಮದ ಆವಿರ್ಭಾವವಾಯಿತು. ಅದಕ್ಕೂ ಮೊದಲು ಮನುಷ್ಯನಿಲ್ಲದ ಪಶುಪಕ್ಷಿಗಳು, ಜಲಚರಪ್ರಾಣಿಗಳು, ಕ್ರಿಮಿಕೀಟಾದಿಗಳು ಇವಿಷ್ಟೇ ಇದ್ದಾಗ ಯಾವ ವಿಽನಿಯಮವೂ ಇರಲಿಲ್ಲಘಿ.

**ವಿವಿಧಜೀವಪೂರ್ಣೇ ಅಸ್ಮಿನ್ ಜಗತಿ ಯದೈವ ಮನುಷ್ಯಜೀವಾನಾಂ ಜನ್ಮ ತದೈವ ಧರ್ಮಸ್ಯ ಆವಿರ್ಭಾವ ಆಸೀತ್ । ತತಸ್ತು ಪ್ರಾಕ್, ಮನುಷ್ಯಂ ವಿನಾ ಕೇವಲಂ ಪಶುಪಕ್ಷಿಣಃ, ಜಲಚರಪ್ರಾಣಿನಃ,**

**ಕ್ರಿಮಿಕೀಟಾದಯಶ್ಚೈವ ಆಸನ್ ತದಾ ನ ಕೋऽಪಿ ಶಾಸ್ತ್ರಕೃತನಿಯಮ ಆಸೀತ್ ॥**

**ಪೌರವಾಣಿ**

'ಶ್ರೀ ನಿಜಲಿಂಗಪ್ಪನವರು ಅವಿರೋಧವಾಗಿ ಆಯ್ಕೆಯಾದರು. ಅವರನ್ನು ಅಭಿನಂದಿಸುತ್ತೇವೆ. ಅದೃಷ್ಟದೊಡನೆ ಹೋರಾಡಿ ಹಣೆಯಬರಹವನ್ನೇ ಮಗುಚಿದಂತಾಯಿತು.'

**ಶ್ರೀನಿಜಲಿಂಗಪ್ಪಮ್ ಅವಿರೋಧೇನ ಸರ್ವೈರ್ವೃತಮ್ ಅಭಿನನ್ದಾಮಃ। ನೂನಂ ದೈವಮಪಿ ಯತ್ನೇನ ಪ್ರತಿಯುಧ್ಯ ಲಲಾಟಲಿಖಿತಮಪಿ ಪರಿಮಾರ್ಜಿತಂ ತೇನ ॥**

ಇಲ್ಲಿ ಕೊಟ್ಟಿರುವ ಸಂಸ್ಕೃತಾನುವಾದಗಳು ಕನ್ನಡಿಗರಿಗೆ ಅರ್ಥವಾಗಲಾರವೇನು?

* * * * *

## 23. ಸಂಸ್ಕೃತಭಾಷೆಯಿಂದ ದೇಶದ ಒಗ್ಗಟ್ಟು[1]

ಸಂಸ್ಕೃತವು ಹಿಂದೆ ಭಾರತದೇಶದವರ ಸಂಘಟನೆಗೆ ಕಾರಣವಾಯಿತು. ಅದರ ವಾಙ್ಮಯವು ಈ ದೇಶದ ಬಹುಭಾಗದ ಜನರಿಗೆಲ್ಲ ಸಮಾನವಾದ ಒಂದಾನೊಂದು ಪ್ರೇರಣೆಯನ್ನು ಕೊಡುವ, ಸಮಾನವಾದ ಜೀವನಕ್ರಮವನ್ನು ಅನುಸರಿಸುವ ಮಾರ್ಗವನ್ನು ಪ್ರೇರಿಸುವದಾಗಿತ್ತು.

ಈ ಭಾಷೆಯು ಹಿಂದೂಗಳೆನಿಸುವವರನ್ನೆಲ್ಲ ಒಗ್ಗಟ್ಟಾಗುವಂತೆ, ಒಂದೇ ಜೀವನಕ್ರಮವನ್ನನುಸರಿಸುವಂತೆ ಮಾಡಿತು. ಸಂಸ್ಕೃತ ವ್ಯಾಕರಣಕಾರರಾದ ಪಾಣಿನಿ, ಕಾತ್ಯಾಯನ, ಪತಂಜಲಿ- ಇವರು ಸಂಸ್ಕೃತದ ದ್ವಾರದಿಂದ ಜನರಿಗೆಲ್ಲ ವಿಚಾರಪ್ರಣಾಳಿಕೆ, ಭಾವನೆಗಳು, ಆಶೋತ್ತರಗಳು- ಇವುಗಳನ್ನೊದಗಿಸುವ ಒಂದಾನೊಂದು ಸಂಘಟನೆಯನ್ನು ಮಾಡಿಕೊಟ್ಟರು. ಸ್ಮೃತಿಕಾರರೂ,

1. ಈ ಲೇಖನದಲ್ಲಿರುವ ಹಲವು ವಿಚಾರಗಳಿಗೆ "Bhavan's Journal"ನ 2ನೆಯ ಸಂಚಿಕೆಯು ಆಧಾರವಾಗಿದೆ. ಅಭಿಪ್ರಾಯಗಳಿಗೆ ನಾನೇ ಹೊಣೆ.

ಗೃಹ್ಯಸೂತ್ರಕಾರರೂ ಜನರ ಸಮಾಜವನ್ನು ಸಂಸ್ಕರಿಸಿಕೊಳ್ಳುವ ಪ್ರಕಾರವನ್ನು ತಿಳಿಸಿದರು. ಇದರ ಫಲಿತಾಂಶವು ಭಾರತದ ಹೊರಗಿರುವ ಸಿಂಹಳ, ಬರ್ಮಾ, ಜಾವಾ, ಕ್ಯಾಂಬೋಡಿಯಾ- ಈ ಪ್ರಾಂತಗಳಿಗೂ ಒದಗಿತು. ರಾಮಾಯಣದಿಂದ 'ಸತ್ಯಧರ್ಮ'ಗಳ ಭಾವನೆಯೂ ಮಹಾಭಾರತದಿಂದ 'ಸಾಮ್ರಾಜ್ಯ' ಭಾವನೆಯೂ ಈ ದೇಶಕ್ಕೆ ಬರುವಂತಾಯಿತು.

ಮುಂದೆ ಪರಕೀಯರ ಧಾಳಿಯಿಂದ ದೇಶಕ್ಕೆ ಧಕ್ಕೆ ತಗಲಿ ಒಗ್ಗಟ್ಟು ಸಡಿಲವಾಗುವದಕ್ಕೆ ಆರಂಭವಾದರೂ ಸಂಸ್ಕೃತವು ಭಾಗವತಾದಿಪುರಾಣಗಳ ಮೂಲಕ ಭಕ್ತಿಪ್ರವಾಹವನ್ನು ಹಬ್ಬಿಸಿ ದೇಶಭಾಷೆಗಳನ್ನೆಲ್ಲ ಪುಷ್ಟಿಗೊಳಿಸಿತು. ಪ್ರತಿಯೊಂದು ದೇಶಭಾಷೆಯಲ್ಲಿಯೂ ಸಂಸ್ಕೃತದ ನೆರವಿನಿಂದ ಜೀವಕಳೆ ಕಾಣಿಸಿಕೊಂಡಿತು. ಜನರ ಜೀವನವು ಸಂಸ್ಕೃತವಾಯಿತು.

ಇತ್ತಲಾಗಿ ಹಲವು ಕಾರಣಗಳಿಂದ ಸಂಸ್ಕೃತದ ಸಹಾಯವು ಜನರಿಗೆ ತಪ್ಪಿತು. ಆಗಲೂ ಈ ಭಾಷೆಯ ಅಭಿಮಾನವನ್ನು ಬಿಡಲಾರದವರು ಇದನ್ನು ಉಳಿಸಿಕೊಂಡು ಬಂದರು. ಇಂಗ್ಲಿಷು ತಲೆಯೆತ್ತಿಕೊಂಡು ದೇಶದ ಯುವಕರನ್ನೆಲ್ಲ ಪ್ರೋತ್ಸಾಹಿಸುವ ವೇಳೆಗೆ ಗತವೈಭವವೆನಿಸಿದ್ದ ಸಂಸ್ಕೃತವಾಙ್ಮಯದಲ್ಲಿ ಅಡಗಿದ್ದ ಅಮೂಲ್ಯವಿಷಯಗಳನ್ನು ವಿದ್ವಾಂಸರು ಶೋಧಿಸಿ ತೆಗೆದರು. ಆಗ ಇಂಗ್ಲಿಷು, ಸಂಸ್ಕೃತ- ಎರಡೂ ದೇಶದ ಜೀವನದ ಜೀರ್ಣೋದ್ಧಾರವನ್ನು ಮಾಡಲಾರಂಭಿಸಿದವು. ಮತ್ತೆ ಜನರ ಜೀವನವು ಅನುಪ್ರಾಣಿತವಾಗಿ ಇಹಪರವಿಚಾರಗಳನ್ನೂ ಸಮಾಜ ರಚನೆಯ ವಿಚಾರವನ್ನೂ ಜನರು ಮನದಂದುಕೊಳ್ಳಲಾರಂಭಿಸಿದರು.

ಇಂಗ್ಲಿಷು ಭಾಷೆಯಿಂದ ನಮಗೂ ಹೊರಗಿನ ದೇಶಗಳಿಗೂ ಸಂಬಂಧವು ನಿಕಟವಾಗುತ್ತಿದೆ. ಸಂಸ್ಕೃತದ ಅಭಿಮಾನವು ಭಾರತದೇಶದಲ್ಲಿ ಅನೇಕರಿಗೆ ಮತ್ತೆ ಎದ್ದು ಕೊಂಡಿದೆ. ಸಂಸ್ಕೃತದಲ್ಲಿ ಪತ್ರಿಕೆಗಳು ಹೊರಡುತ್ತಿವೆ. ಬೇರೆಬೇರೆಯ ವಿಷಯಗಳನ್ನು ಕುರಿತ ಹಲವು ಪ್ರಾಚೀನ ಗ್ರಂಥಗಳು ಪ್ರಕಾಶವಾಗುತ್ತಿವೆ. ಪ್ರಾಚೀನ, ಅರ್ವಾಚೀನ- ಎರಡೂ ವಿಚಾರಧಾರೆಗಳನ್ನೊಳಗೊಂಡ ಹೊಸಗ್ರಂಥಗಳೂ ನಿರ್ಮಾಣವಾಗುತ್ತಿವೆ. ಹಿಂದಿಯು ರಾಷ್ಟ್ರಭಾಷೆಯೆಂದು ಗೊತ್ತಾದಮೇಲೆ ಆ ಭಾಷೆಯು ಸಂಸ್ಕೃತದ ನೆರವನ್ನೇ ಹೆಚ್ಚಾಗಿ ಪಡೆಯುತ್ತಿರಬೇಕೆಂಬ ನೀತಿಯುನ್ನು ಅನುಸರಿಸಲಾಗಿದೆ. ಹಿಂದೀ ಶಿಕ್ಷಣದ ಇಲಾಖೆಯುವರು ಆ ಭಾಷೆಯ ಅಭ್ಯಾಸಿಗಳಿಗೆ ಸಂಸ್ಕೃತದ ಶಿಕ್ಷಣವು ಅನಿವಾರ್ಯವೆಂದೂ ಸಾರುವದಕ್ಕೆ ಮೊದಲುಮಾಡಿರುತ್ತಾರೆ. ಸಂಸ್ಕೃತದ ವಿಷಯಕ್ಕೆ

ನಿಯಮಿತವಾಗಿದ್ದ ಕಮಿಟಿಯವರು ಹಿಂದಿಯ ಜೊತೆಗೆ ಸಂಸ್ಕೃತವನ್ನೂ ಐಚ್ಛಿಕ ರಾಷ್ಟ್ರಭಾಷೆಯಾಗಿ ಮಾಡಬೇಕೆಂದು ಶಿಫಾರಸ್ಸುಮಾಡಿರುತ್ತಾರೆ.

ಈ ಮುನ್ನೆಡೆಗೆ ಆಗಿರುವ ಮುಖ್ಯವಾದ ಅಡಚಣೆ ಎಂದರೆ ದೇಶವನ್ನು ಭಾಷಾವಾರುಪ್ರಾಂತಗಳಾಗಿ ಒಡೆದಿರುವದು. ಇದರ ಫಲವಾಗಿ ಕೆಲವು ಭಾಷಾ ಮತಾಂಧರು ತಮ್ಮ ತಮ್ಮ ದೇಶಭಾಷೆಯನ್ನು ಸಂಸ್ಕೃತದ ಸಂಪರ್ಕವಿಲ್ಲದಂತೆ ಶುದ್ಧ(?) ವಾಗಿರಿಸಬೇಕೆಂದೂ ಆಯಾ ದೇಶಭಾಷೆಯನ್ನೇ ಆಯಾ ಪ್ರಾಂತದ ರಾಷ್ಟ್ರಭಾಷೆಯಾಗಿ ಮಾಡಬೇಕೆಂದೂ ಪ್ರಯತ್ನಿಸುತ್ತಿರುವರು. ಈ ಆತ್ಮಹತ್ಯಾರೋಗದ ಸೋಂಕು ಕೆಲವರು ಹಿಂದೀಪ್ರಚಾರಕರಿಗೂ ತಾಕುತ್ತಿರುವಂತೆ ತೋರುತ್ತಿದೆ. ಅವರ ಪ್ರಯತ್ನವು ಸಫಲವಾದರೆ ದೇಶದ ಒಗ್ಗಟ್ಟು ಸಡಿಲವಾಗುವದರಲ್ಲಿ ಸಂಶಯವಿಲ್ಲ. ಎಷ್ಟು ದೇಶಭಾಷೆ ಗಳಿವೆಯೋ ಭಾರತವು ಅಷ್ಟು ತುಂಡುಗಳಾಗಿ ಒಡೆದು ಜನರಿಗೆ ಭಾರತೀಯರೆಂಬ ಅಭಿಮಾನವೇ ಬೇಗನೆ ಅಳಿಸಿಹೋಗುವದರಲ್ಲಿ ಸಂಶಯವಿಲ್ಲ.

ಆದರ್ಶಪ್ರಾಂತವೆನಿಸಿಕೊಂಡಿದ್ದ ಮೈಸೂರು ದೇಶದಲ್ಲಿಯೂ ಭಾಷಾಭಿಮಾನಾಂಧರು ಅಲ್ಲಲ್ಲಿರುವರು. ಕೆಲವು ದಿನಗಳ ಕೆಳಗೆ ವಿದ್ಯಾಭ್ಯಾಸದ ಇಲಾಖೆಯ ಹಿರಿಯ ಅಧಿಕಾರಿಗಳೊಬ್ಬರು ಬೆಂಗಳೂರು ಮಹಾವಿದ್ಯಾನಿಲಯದಲ್ಲಿ ಭಾಷಣ ಮಾಡುತ್ತಾ 'ಸಂಸ್ಕೃತವೇ ನಮ್ಮ ಅಧಃಪತನಕ್ಕೆ ಕಾರಣ. ಕನ್ನಡದಲ್ಲಿ ಶಾಲು ಕನ್ನಡ, ಸಿಗರೇಟು ಕನ್ನಡ- ಎಂದು ಎರಡು ಭಾಗಗಳಾಗಿವೆ' ಎಂದು ಸಂಸ್ಕೃತದ ಮತ್ತು ಇಂಗ್ಲಿಷಿನ ಪ್ರಭಾವವು ಕನ್ನಡದಮೇಲೆ ಆಗಬಾರದೆನ್ನುವ ತಮ್ಮ ಅಭಿಪ್ರಾಯವನ್ನು ಹೊರಗೆಡಹಿದರಂತೆ. 'ಹಳೆಯದೆಲ್ಲವೂ ಹಾಳು' ಎಂಬುದು ಅವರ ಸಿದ್ಧಾಂತ. ಇಂಥವರು ನಮ್ಮ ತರುಣರಿಗೆ ಕೊಡಿಸುವ ವಿದ್ಯೆಯ ಫಲವು ಏನಾಗಬಹುದೆಂಬುದನ್ನು ಊಹಿಸುವದು ಕಷ್ಟವಲ್ಲ. ನಮಗೆ ದೇಶದ ಪ್ರಾಚೀನಸಂಸ್ಕೃತಿಯ ಸಂಬಂಧವು ಕಡಿದುಹೋಗುವದು. ಈಗಿನ ನಾಗರಿಕಜಗತ್ತಿನ ಸಂಬಂಧವೂ ಇಲ್ಲದಂತಾಗುವದು. ಕನ್ನಡಿಗರೆಂದರೆ ಕೂಪಕೂರ್ಮಗಳಾಗಿ ವಟಗುಟ್ಟುತ್ತಿರಬೇಕಾದೀತು.

* * * * *

# 24. ನವೀನ ಸಂಸ್ಕೃತಸಂವಿಧಾನಸಮಿತಿ
## (New Sanskrit Board)

ಸಂಸ್ಕೃತದ ಅಭ್ಯಾಸವನ್ನು ಅಭಿವೃದ್ಧಿಗೊಳಿಸುವದಕ್ಕೆ ಭಾರತದ ಸರಕಾರದವರು ಈ ಸಮಿತಿಯನ್ನು ಹೊಸದಾಗಿ ಪರಿಷ್ಕರಿಸಿ ಏರ್ಪಡಿಸಿರುತ್ತಾರೆ. ಈ ಸಮಿತಿಯ ಕರ್ತವ್ಯಗಳೇನೆಂದರೆ :-

1. ಈ ದೇಶದಲ್ಲಿ ಸಂಸ್ಕೃತಪ್ರಚಾರ ಮತ್ತು ವಿಕಾಸ- ಇವುಗಳ ಬಗ್ಗೆ 'ನೀತಿ'ಯನ್ನು ಕುರಿತು

2. ಬೇರೆಬೇರೆಯ ಮಟ್ಟಗಳಲ್ಲಿ ಸಂಸ್ಕೃತವಿದ್ಯಾಭ್ಯಾಸದ ಪ್ರಕಾರಗಳು ಹೇಗಿರಬೇಕು; ಪಾಠನಕ್ರಮ ಮುಂತಾದವುಗಳ ಸಮೀಕರಣ, ಪಾಠ್ಯವಿಷಯಗಳು, ಪರೀಕ್ಷೆಗಳು, ಪದವಿಗಳು, ಬೇರೆಬೇರೆಯ ವರ್ಗದ ಉಪಾಧ್ಯಾಯರುಗಳಿಗಿರಬೇಕಾದ ಯೋಗ್ಯತೆ, ಅವರಿಗೆ ಕೊಡಬೇಕಾದ ಶಿಕ್ಷಣ- ಇವನ್ನು ಕುರಿತು

3. ಪಾಠಶಾಲಾಪದ್ಧತಿಯನ್ನೂ ಸ್ವತಂತ್ರವಾಗಿರುವ ಸಂಶೋಧನಾ ಸಂಸ್ಥೆಗಳನ್ನೂ ಕ್ರಮಪಡಿಸುವದನ್ನು ಕುರಿತು

4. ಪಾಠಶಾಲೆಗಳೂ ಹೈಸ್ಕೂಲುಗಳೂ ಕೇಳಿಕೊಂಡರೆ ಸಂಶೋಧನಾ ವಿಭಾಗಗಳನ್ನು ಏರ್ಪಡಿಸಿ ವಿದ್ಯಾರ್ಥಿವೇತನಗಳನ್ನು ಕೊಡಿಸುವದನ್ನು ಕುರಿತು

5. ಹೊಸ ಶೋಧಿತ ಸಂಸ್ಕೃತಪಾಠ್ಯಪುಸ್ತಕಗಳನ್ನು ಸಜ್ಜುಗೊಳಿಸಿ ಪ್ರಕಾಶಿಸುವದನ್ನು ಕುರಿತು

6. ಪಂಡಿತರಿಗೆ ಸರಕಾರದ ಗೌರವವನ್ನೂ ಪ್ರೋತ್ಸಾಹವನ್ನೂ ಕೊಡುವದನ್ನು ಕುರಿತು, ಮತ್ತು

7. ಸಂಸ್ಕೃತದ ವಿಕಾಸ ಮತ್ತು ಪ್ರಚಾರಕ್ಕಾಗಿ ಸಹಾಯಧನವನ್ನು ಕುರಿತು ಸಮಿತಿಯವರನ್ನು ಕೇಳಬಹುದಾದ ವಿಷಯಗಳನ್ನು ಕುರಿತು

ಸರಕಾರಕ್ಕೆ ತಿಳಿವಳಿಕೆಕೊಡುವದು.

ಸಂಸ್ಕೃತವನ್ನು ಗಿಳಿಯಂತೆ ಹಾಲುಹಣ್ಣುಗಳನ್ನು ಕೊಟ್ಟು ಪೋಷಿಸುವ ಉಪಾಯವಿದೆನ್ನುವದಕ್ಕೆ ಯಾವ ಸಂಶಯವೂ ಇಲ್ಲಘಿ. ಸಂಸ್ಕೃತಕ್ಕೆ ವ್ಯವಹಾರದ

ವಿಷಯುಗಳನ್ನು ಕುರಿತು ಚರ್ಚಿಸುವ ಯೋಗ್ಯತೆ ಬರುವಂತೆ ಪುಷ್ಟಿಯನ್ನು ಕೊಡಬೇಕೆಂಬ ಇಚ್ಛೆಯಿದ್ದರೆ, ಆ ಭಾಷೆಯು ಭಾರತದ ಪ್ರಾಚೀನ ಸಂಸ್ಕೃತಿಯನ್ನೂ ಈಗಿನ ನಾಗರಿಕತೆಗೆ ಬೇಕಾದ ಆವಶ್ಯಕತೆಗಳನ್ನೂ ಒದಗಿಸಿ ಭಾರತದ ಒಗ್ಗಟ್ಟನ್ನು ಬೆಳೆಯಿಸುವ ಶಕ್ತಿವಿಶೇಷವಾಗಬೇಕೆಂದಿದ್ದರೆ, ಆ ಮಾತು ಬೇರೆ.

* * * * *

## 25. ಸಂಸ್ಕೃತಸ್ತುತ್ಯಾಭಾಸ

ಕೆಲವು ವರ್ಷಗಳಿಂದ ಸಂಸ್ಕೃತಭಾಷೆಯನ್ನು ಹೊಗಳಿ ತೆಪ್ಪನಾಗುವ ಮಹಾತ್ಮರು ಹೆಚ್ಚುತ್ತಿದಾರೆ. ಈ ಏಪ್ರಿಲ್ ತಿಂಗಳಿನ 24ನೆಯ ತಾರೀಖಿನಲ್ಲಿ ನವದೆಹಲಿಯ ಲೋಕಸಭೆಯಲ್ಲಿ ನಮ್ಮ ಮಾನ್ಯ ಪ್ರಧಾನಮಂತ್ರಿ ಶ್ರೀನೆಹರುರವರು ಮಾಡಿದ ಭಾಷಣದಲ್ಲಿ ಇಂಥ ವ್ಯರ್ಥಸ್ತುತಿಯಿತ್ತು.

''ಸಂಸ್ಕೃತವು ಬಲುಮಟ್ಟಿಗೆ ಭಾರತದ ವಿಚಾರ, ಸಂಸ್ಕೃತಿ, ಸಂಪ್ರದಾಯಗಳು- ಇವಕ್ಕೆ ಪ್ರತಿನಿಧಿಯಾಗಿದೆ ಎಂದು ಧಾರಾಳವಾಗಿ ಹೇಳಬಹುದಾಗಿದೆ. ನನಗೆ ಆ ಭಾಷೆಯೇನೂ ಹೆಚ್ಚಾಗಿ ತಿಳಿಯದು, ಆದರೂ ನನಗೆ ಸಂಸ್ಕೃತವೆಂದರೆ ಬಹಳ ಮೆಚ್ಚು. ಭಾರತದಲ್ಲಿ ಸಂಸ್ಕೃತವು ಸಂಪೂರ್ಣವಾಗಿ ಮೃತ ಭಾಷೆಯಾಗಿದೆ ಎಂಬುದು ಶೋಚನೀಯ. ನಮ್ಮಗಳ ಅಭಿಮಾನಕ್ಕೆ ಪಾತ್ರವಾಗಿರುವದಕ್ಕೆಲ್ಲ ಇದೊಂದು ಭಾರಿಯ ಆಘಾತವಾಗಿದೆ.''

''ನಮ್ಮ ದುರದೃಷ್ಟದಿಂದ ಸಂಸ್ಕೃತವನ್ನು ಈಗಿನ ಭಾರತದ ಚಲಾವಣೆಯ ಭಾಷೆಯಾಗಿ ಉಜ್ಜೀವನಮಾಡುವದು ಆಗಲಾರದೆ ಇದೆ; ಆದರೆ ಸಂಸ್ಕೃತದ ಅಭ್ಯಾಸವು ಆದಷ್ಟೂ ವಿಶಾಲವಾಗುವಂತೆ ಪ್ರೋತ್ಸಾಹಿಸಿಕೊಡಬೇಕೆಂಬುದು ನನ್ನ ಇಷ್ಟ. ಪ್ರಾಕೃತವು ಆಡುವ ಭಾಷೆಯಾದಂದಿನಿಂದ -ಸುಮಾರು 2000 ವರ್ಷಗಳಿಂದಲೂ- ಅದು ಸಾಮಾನ್ಯಜನರ ಭಾಷೆಯಾಗಿರುವದು ನಿಂತುಹೋಗಿರುತ್ತದೆ. ಹೀಗಿದ್ದರೂ ಅದು ಈಗಿನ ಭಾರತೀಯಭಾಷೆಗಳಿಗೆ ಒಂದಿಷ್ಟು ಆಧಾರವಾದ ತಳಹದಿಯನ್ನು ಒದಗಿಸಿಕೊಟ್ಟಿರುತ್ತದೆ. ಅದು ಅವುಗಳಿಗೆ ಒಲವನ್ನೂ ಗಾಂಭೀರ್ಯವನ್ನೂ ಒದಗಿಸಿದೆ.''

ಇಲ್ಲಿಗೆ ಸ್ತೋತ್ರಪಾಠವು ಮುಗಿಯಿತು. 'ಭಾರತದೇಶವು ಬಹುಭಾಷಾ

ದೇಶವೆಂಬುದನ್ನು ನಾವು ಮನಗಾಣಬೇಕು' ಎಂದು ದೇಶಭಾಷೆಗಳ ವಿಷಯವನ್ನು ಅವಾಹನೆಮಾಡಿದಬಳಿಕ ಶ್ರೀ ನೆಹರುರವರು 'ಉತ್ತರಭಾರತದ ಭಾಷೆಗಳು ಸಂಸ್ಕೃತಕ್ಕೆ ಹತ್ತಿರವಾಗಿವೆ. ದಕ್ಷಿಣಭಾರತದ ಭಾಷೆಗಳು ಅಷ್ಟು ಹತ್ತಿರ ಸಂಬಂಧವಿಲ್ಲದಿದ್ದರೂ ಸಂಸ್ಕೃತಕ್ಕೂ ಅವಕ್ಕೂ ಅನೇಕ ಸಂಸ್ಪರ್ಶಗಳಿರುತ್ತವೆ' ಎಂದೂ ಒಪ್ಪಿಕೊಂಡಿರುತ್ತಾರೆ. ಭಾಷೆಗಳಿಗೆ ವಿಜ್ಞಾನಶಾಸ್ತ್ರವೇ ಮುಂತಾದ ಪ್ರೌಢವಿಚಾರಗಳಿಗೆ ಇಂಗ್ಲಿಷು ಬೇಕು- ಎಂದು ಇಂಗ್ಲಿಷನ್ನೂ ಹರಸಿರುತ್ತಾರೆ; ಆದರೆ ದೇಶಭಾಷೆಗಳಿಗೆ ಅನ್ಯಾಯವಾದೀತೆಂಬ ಅಂಜಿಕೆಯಿಂದಲೊ ಏನೊ, ವಿಜ್ಞಾನಶಾಸ್ತ್ರದ ತಿಳಿವಳಿಕೆಯನ್ನು ದೇಶಭಾಷೆಗಳ ಮೂಲಕವಾಗಿ ಹೆಚ್ಚಾಗಿ ಕೊಡುವದು ಅವಶ್ಯವೆಂದಿರುತ್ತಾರೆ. ದೇಶಭಾಷೆಗಳೂ ಬೆಳೆಯುತ್ತಿವೆ ಎಂದು ಆ ಭಾಷೆಗಳನ್ನು ಹೊಗಳಿ ಹಿಂದಿ ಮುಂತಾದ ದೇಶಭಾಷೆಗಳನ್ನು ಬೆಳೆಯಿಸಿ ಅವನ್ನು ಆಯಾಪ್ರಾಂತದ ಸರಕಾರಿ ಉದ್ಯೋಗಗಳಲ್ಲಿಯೂ ಉಪಯೋಗಿಸಬೇಕೆಂದೂ ಹೇಳಿ ಸರ್ವರ ಪ್ರೀತ್ಯಾದರಗಳಿಗೆ ಪಾತ್ರರಾಗಿರುತ್ತಾರೆ. ಕೊನೆಗೆ ದೇಶಭಾಷೆಗಳನ್ನು ಕೂಡಿಸುವ ಕೊಂಡಿ ಯಾವದು? ಹಿಂದಕ್ಕೆ ಇಂಗ್ಲಿಷಾಗಿತ್ತು, ಈಗ ಹಿಂದಿಯಾಗುವದು, ಸ್ವಾಭಾವಿಕವಾಗಿದೆ; ಹಿಂದಿಯು ಮಿಕ್ಕ ಭಾಷೆಗಳಿಗಿಂತ ಉತ್ತಮಭಾಷೆಯೆಂದೇನೂ ಅಲ್ಲ. ಶಾಸನದಲ್ಲಿ ಅದನ್ನು ಕೇಂದ್ರಕ್ಕೂ ಸರಕಾರಿಯ ಕೆಲಸಕ್ಕೂ ಉಪಯೋಗಿಸಬೇಕೆಂದು ಶಾಸನ ಘಟನೆಯಲ್ಲಿರುವದರಿಂದ ಅದನ್ನು ಉಪಯೋಗಿಸುವದೇ ಯುಕ್ತವಾಗಿದೆ- ಎಂದು ಉಪಸಂಹಾರವನ್ನು ಮಾಡಿರುತ್ತಾರೆ.

ಅಕ್ಕಿಯ ಮೇಲಿನ ಆಶೆ, ನೆಂಟರ ಮೇಲಿನ ಹಿತ - ಎಂಬ ಗಾದೆಯನ್ನು ಅನುಸರಿಸುತ್ತಿರುವ ಈ ಭಾಷಣವನ್ನು ಒಳಹೊಕ್ಕು ಪರಿಶೀಲಿಸುವ ನಿಷ್ಪಕ್ಷಪಾತಿಗಳಿಗೆ ತೋರುವದೇನೆಂದರೆ: ದೇಶಭಾಷೆಗಳು ಇಂಗ್ಲಿಷಿನ ಪ್ರಭಾವದಿಂದ ಕ್ರಮಕ್ರಮವಾಗಿ ಚೇತರಿಸಿಕೊಂಡು ಹೊಸಹೊಸಶೈಲಿಗಳನ್ನು ಅಳವಡಿಸಿಕೊಂಡು ಬೆಳೆಯುತ್ತಾ ಬಂದಿವೆಯೆಂಬುದು ನಿಜ; ಆದ್ದರಿಂದ ಅವಕ್ಕೆ ಆಯಾ ಪ್ರಾಂತದಲ್ಲಿ ಸರಿಯಾದ ಸ್ಥಾನವನ್ನು ಕೊಟ್ಟು ಪ್ರೋತ್ಸಾಹಿಸುವದು ನ್ಯಾಯಬದ್ಧವಾಗಿದೆ. ಈ ಭಾಷೆಗಳಿಗೆ ಸಂಸ್ಕೃತದಿಂದ ಆಗಿರುವ ನೆರವು ಅಷ್ಟಿಷ್ಟಲ್ಲ. ಕೆಲವು ಸಂಸ್ಕೃತಜನ್ಯವಾಗಿವೆ, ಮತ್ತೆ ಕೆಲವು ಸಂಸ್ಕೃತಪುಷ್ಟವಾಗಿವೆ.

ಪ್ರಾಕೃತಭಾಷೆಯು ಹುಟ್ಟಿದಮೇಲೆ ಕೂಡಲೆ ಸಂಸ್ಕೃತವು 'ಮೃತಭಾಷೆ' ಯಾಯಿತೆಂಬುದು ಸರಿಯಲ್ಲ. ಇದಕ್ಕೆ ಸಂಸ್ಕೃತಪ್ರಾಕೃತಗಳೆರಡನ್ನೂ ಬಳಸಿಕೊಂಡು ಬರೆದಿರುವ ನಾಟಕಗಳೇ ಸಾಕ್ಷಿ. ಸಂಸ್ಕೃತವು ಈಗಲೂ 'ಮೃತಭಾಷೆ' ಎನ್ನುವದು

ಸರಿಯಲ್ಲ; ಏಕೆಂದರೆ ಆ ಭಾಷೆಯಲ್ಲಿ ಪರಸ್ಪರ ಸಂಭಾಷಣೆಯನ್ನೂ ಪತ್ರವ್ಯವಹಾರವನ್ನೂ ಮಾಡುತ್ತಿರುವ ಪಂಡಿತರು ನಮ್ಮ ದೇಶದಲ್ಲಿ ಹಲವರಿರುತ್ತಾರೆ. ಲೌಕಿಕಭಾಷೆಗಳಿಗೆ-ಅದರಲ್ಲಿಯೂ ರಾಷ್ಟ್ರಭಾಷೆಯ ಸ್ಥಾನಕ್ಕೆ ಹಠಾತ್ತಾಗಿ ಅದರ ಅಭಿಮಾನಿಗಳು ಏರಿಸುವ ಹಿಂದಿಗೆ- ಸಂಸ್ಕೃತದಿಂದಾಗಬೇಕಾಗಿರುವ ಪೋಷಣೆಯು ಶಬ್ದಭಂಡಾರ, ಭಾರತ ಇತಿಹಾಸ ಸಂಸ್ಕೃತಿವಿಚಾರಕ್ರಮಗಳ ಸಂಪರ್ಕ ಇವುಗಳ ಒತ್ತಾಸೆಯು ಈಗಲೂ ಇವೆ. ಇದನ್ನು ಹಿಂದೀಭಾಷಾಭಿಮಾನಿಗಳೂ ಒಪ್ಪಿಕೊಂಡಿರುತ್ತಾರೆ; ಸಂಸ್ಕೃತವನ್ನು ಹಿಂದೀಭಾಷೆಯುವರು ಕಡ್ಡಾಯವಾಗಿ ಕಲಿಯಬೇಕೆಂದೂ ಕಾನೂನುಮಾಡಿಕೊಂಡಿರುವ ದೇಶಗಳೂ ಉಂಟು. ಸರ್ವಥಾ ಮೃತಭಾಷೆಯಾದ 'ಹೀಬ್ರೂ'ವಿನಂಥದ್ದು ರಾಷ್ಟ್ರಭಾಷೆಯಾಗಿರುವಲ್ಲಿ ಜೀವಂತವಾಗಿರುವದೆಂದೂ ಸರ್ವಸಂಮತವಾದ ಸಂಸ್ಕೃತವನ್ನು ಸರಕಾರದ ಕೇಂದ್ರಕ್ಕೂ ಪ್ರಾಂತಗಳಿಗೂ 'ಭಾಷಾಕೀಲಕ'ವಾಗಿ (ಭಾಷೆಗಳ 'ಕೊಂಡಿ'ಯಾಗಿ) ಮಾಡಿಕೊಳ್ಳುವದಕ್ಕೆ ದುರಭಿಮಾನವೊಂದು ಹೊರತು ಮತ್ತೆಯಾವ ಅಡ್ಡಿಯೂ ಇರುವದಿಲ್ಲ.

* * * * *

## 26. ಸಂಸ್ಕೃತದಲ್ಲಿ ಭಕ್ತಿ

ಸರಕಾರದವರು ಹಿಂದಿಯನ್ನು ರಾಷ್ಟ್ರಭಾಷೆಯೆಂದು ಮಾಡಿಬಿಟ್ಟಿರುತ್ತಾರೆ. ದಕ್ಷಿಣದ ಕೆಲವರಿಗೆ ರಾಜಕಾರಣನಿಮಿತ್ತದಿಂದ ಹೊಟ್ಟೆಯುರಿಯಾಗಿದೆ. ಇಂಗ್ಲಿಷಿಗೆ ಹೆಚ್ಚಿನ ಸ್ಥಾನವನ್ನು ಕೊಡಬೇಕೆಂಬ ಹಠವನ್ನು ತೊಟ್ಟಿರುವವರೂ ಕೆಲವರು ತಿರುಗಿಬಿದ್ದಿರುತ್ತಾರೆ. ಆದ್ದರಿಂದ ಸಂಸ್ಕೃತದ ಬಗ್ಗೆ 'ನಮ್ಮ ಹಳೆಯ ಕಾಲದ ಭಾಷೆ' ಎಂಬ ಮೋಹದಿಂದಲೊ, ಏನೊ- ಮತ್ತೆ ಕೆಲವರು ಅದನ್ನು ಹೊಗಳುವ ಕೆಲವು ಭಾಷಣಗಳನ್ನು ಮಾಡಿ ಅಥವಾ ಪತ್ರಿಕೆಗಳಲ್ಲಿ ಲೇಖನವನ್ನು ಬರೆದು ಸುಮ್ಮನಾಗುವದರಲ್ಲಿದಾರೆ.

ಯಾವ ಪಕ್ಷಕ್ಕೂ ಸೇರದೆ ತತ್ತ್ವವನ್ನು ಇದ್ದಹಾಗೆ ಕಾಣುವದಕ್ಕೆ ಸಿದ್ಧರಾಗಿರುವವರಿಗೆ ಕಾಣುತ್ತಿರುವದೇನು? **ಇಂಗ್ಲಿಷು** ನಮಗೆ ಬೇಕು; ಏತಕ್ಕೆ? ಈಗಿನ ಹೊರಗಿನ ಪ್ರಪಂಚದ ಸಂಬಂಧವಿರಬೇಕು ಎಂಬ ಕಾರಣದಿಂದ, ಅಲ್ಲವೆ? ಹೊರಗಿನ ದೇಶದ ಸಂಪರ್ಕವನ್ನು ಇಟ್ಟುಕೊಳ್ಳುವಮಟ್ಟಿಗೆ ಮೇಲುಮಟ್ಟದ ಅಧಿಕಾರಸ್ಥಾನಗಳಲ್ಲಿರುವವರು ಅಥವಾ ಜನಾಂಗಗಳ ಪರಸ್ಪರ ಸಂಬಂಧವನ್ನಿಟ್ಟು

ಕೊಳ್ಳಬೇಕೆನ್ನುವವರು ಇಂಗ್ಲಿಷನ್ನು ಕಲಿಯಬೇಕು. ಇಂಗ್ಲಿಷು ಭಾಷೆಯು ವಿಜ್ಞಾನಶಾಸ್ತ್ರಕ್ಕೆ ಅತ್ಯವಶ್ಯವಾದ್ದರಿಂದ ಆ ಭಾಷೆಯನ್ನು ಎಲ್ಲರೂ ಕಲಿಯಲೇಬೇಕು- ಎನ್ನುವವರಿದಾರೆ; ಆದರೆ ವಿಜ್ಞಾನಶಾಸ್ತ್ರದಲ್ಲಿ ಹೆಚ್ಚಿನ ತಿಳಿವಳಿಕೆಯಿರುವ ಜನಾಂಗದವರೆಲ್ಲರೂ ಕಡ್ಡಾಯವಾಗಿ ಇಂಗ್ಲಿಷನ್ನು ಕಲಿಯುತ್ತಿದ್ದಾರೆಯೆ? ಇದನ್ನು ಆಲೋಚನೆಮಾಡಬೇಕು. ವಿದ್ಯಾಭ್ಯಾಸ ಮಾಡಿರುವ ಭಾರತದೇಶೀಯರಿಗೆ ಈಗ ಇಂಗ್ಲಿಷು ಒಂದೇ ಸಾಧಾರಣ ಭಾಷೆಯಾಗಿದೆಯಾದ್ದರಿಂದ ಅದು ಉಳಿಯಬೇಕು- ಎನ್ನುವವರಿದಾರೆ. **ಮೇಲ್ತರದ ವಿದ್ಯಾಭ್ಯಾಸವಿಲ್ಲದವರು ಹೆಚ್ಚಿನ ಸಂಖ್ಯೆಯವರೊ, ಇಂಗ್ಲಿಷು ವಿದ್ಯಾಭ್ಯಾಸವಿರುವವರೊ-** ಇದನ್ನು ಯೋಚಿಸಬೇಡವೆ? ಅವರಿಗೆ ಸುಲಭವಾಗಿ ಯಾವದಾದರೂ ಭಾಷೆಯು ಸಮಾನವಾಗಿರಬಹುದಾದರೆ ಅದನ್ನು ಕಲಿಸುವದು ಉತ್ತಮವಲ್ಲವೆ? ಆ ಪರದೇಶದ ಭಾಷೆಯನ್ನು ಎಲ್ಲರಿಗೂ ಕಲಿಸುವದಕ್ಕೆ ಎಷ್ಟು ಹಣವನ್ನು ಸುರಿಯಬೇಕಾದೀತು?

**ಹಿಂದಿಯು** ಬಹುಜನರಭಾಷೆ ಎಂಬ ಕಾರಣದಿಂದ ಅದನ್ನು ಎಲ್ಲೆಲ್ಲಿಯೂ ಕಡ್ಡಾಯವಾಗಿ ಕಲಿಯಿಸಬೇಕೆಂಬುದು ಅಧಿಕಾರವಲಯದಲ್ಲಿರುವವರ ಅಭಿಪ್ರಾಯ. ಆದರೆ ಹಿಂದಿಗೆ ಸಂಸ್ಕೃತಸಹಾಯವು ಬೇಕು- ಎಂಬುದನ್ನು ಹಿಂದಿಯವರೇ ಒಪ್ಪಿಕೊಂಡಿರುತ್ತಾರೆ. ಸಂಸ್ಕೃತದಿಂದ ಪುಷ್ಟಿಯನ್ನು ಹೊಂದಬಹುದಾದ ಹಿಂದಿಯನ್ನು ಕಲಿಯುವದು ಸುಲಭವೊ, ನೇರಾಗಿ ಸಂಸ್ಕೃತವನ್ನೇ ಕಲಿಯುವದು ಸುಲಭವೊ? ಇದನ್ನು ಯಾವದಾದರೊಂದು ಗ್ರಾಮದ, ಅಥವಾ ಪಟ್ಟಣದ ಮಿಶ್ರಸಮಾಜಕ್ಕೆ ಕಲಿಸಿ ಪರೀಕ್ಷೆಮಾಡಿ ನೋಡಬಾರದೆ? ಐವತ್ತು ಜನರು ಹಿಂದಿಯನ್ನು ಕಲಿಯಲಿ, ಇನ್ನೈವತ್ತು ಜನರು ಸಂಸ್ಕೃತವನ್ನು ಅಭ್ಯಾಸಮಾಡಲಿ. ಸಂಸ್ಕೃತವನ್ನು ಕಲಿಯುವದು ಬೇಗನೆ ಸಾಧ್ಯವಾದರೆ ಆಗ ನಾವು ಯಾವ ತೀರ್ಮಾನವನ್ನು ಮಾಡಬೇಕು?

ಸಂಸ್ಕೃತವು ಪೂರ್ವದ ಮತ್ತು ಪಶ್ಚಿಮದ ನಾಗರಿಕದೇಶಗಳಲ್ಲೆಲ್ಲ ವಿಚಾರವಂತರ ಆದರಕ್ಕೆ ಪಾತ್ರವಾಗುತ್ತಿದೆ. ಆ ಭಾಷೆಯನ್ನು ಮಾತನಾಡುವದಕ್ಕೂ ಓದುವದಕ್ಕೂ ಬರೆಯುವದಕ್ಕೂ ಸುಲಭವಾಗಿ ಕಲಿಯಿಸಬಹುದೆಂದು ಪರದೇಶದ ಜನರು ಅನುಭವದಿಂದ ಮನಗಾಣುತ್ತಿದಾರೆ. ನಮ್ಮ ದೇಶದವರೂ ಹಾಗೆಯೇ ಪರೀಕ್ಷೆಮಾಡಿ ಏತಕ್ಕೆ ತೀರ್ಮಾನವನ್ನು ಮಾಡಿಕೊಳ್ಳಬಾರದು?

ಸರಕಾರದವರು ಹಿಂದಿಪ್ರಚಾರಸಭೆಗೆ ಪ್ರೋತ್ಸಾಹಕವಾಗಿ ಎಷ್ಟೋ ಹಣವನ್ನು ವೆಚ್ಚಮಾಡುತ್ತಿದ್ದಾರೆ, ಹಿಂದಿ ಪ್ರಚಾರದ ಸಭೆಯಂತೆ **ಸಂಸ್ಕೃತ ಪ್ರಚಾರಿಣೀ**

**ಸಭೆಯೊಂದನ್ನು** ಸಂಸ್ಕೃತ ಭಕ್ತರೇಕೆ ಸ್ಥಾಪನೆ ಮಾಡಬಾರದು? ಅದರ ಕೇಂದ್ರಗಳನ್ನು ಭರತಖಂಡದ ಪ್ರಾಂತಗಳಲ್ಲೆಲ್ಲ ತೆರೆಯುವಂತೆ ಏತಕ್ಕೆ ಪ್ರೋತ್ಸಾಹಿಸಬಾರದು? ಆಯಾ ಪ್ರಾಂತದ ಭಾಷೆಯ ಮಾಧ್ಯಮದಿಂದ ಸಂಸ್ಕೃತ ಪುಸ್ತಕಗಳನ್ನು ಬರೆಯುವದು, ಪ್ರಾಂತಭಾಷೆಯಲ್ಲಿ ಈಗಾಗಲೆ ಬಳಕೆಯಲ್ಲಿರುವ ಸಾವಿರಗಟ್ಟಲೆಯ ಶಬ್ದಗಳನ್ನು ಎತ್ತಿತೋರಿಸುವ ಪಾಠಗಳನ್ನು ಬರೆಯುವದು, ಕ್ಲೃಪ್ತಕಾಲಿಕಪತ್ರಿಕೆಗಳ ಮೂಲಕ ವಾಗಿಯೂ ರೇಡಿಯೊ, ಸಿನೆಮ-ಮುಂತಾದ ದ್ವಾರಗಳಿಂದಲೂ ಸಂಸ್ಕೃತಭಾಷೆಯನ್ನೇಕೆ ಪ್ರಚಾರಮಾಡಬಾರದು?

ವರ್ತಮಾನಪತ್ರಿಕೆಗಳಲ್ಲಿ ಸ್ವಲ್ಪಭಾಗವನ್ನು ಸಂಸ್ಕೃತಕ್ಕೆ ಮಿಸಲಾಗಿಡುವದು, ಮಾಸಪತ್ರಿಕೆಗಳಲ್ಲಿ ಕೆಲವು ಪಾಠಗಳನ್ನು ಹಾಕುವದು, ಸದ್ಯದ ವರ್ತಮಾನವನ್ನು ಸರಕಾರದ ಪ್ರಕಟನೆಗಳಲ್ಲಿ ಸಂಸ್ಕೃತ ಭಾಷೆಯಲ್ಲಿಟ್ಟು ತೋರಿಸುವದು- ಹೀಗೆ ಮಾಡಿದರೆ ಮುಂದಿನ ಹತ್ತುವರ್ಷಗಳಲ್ಲಿ ಸಂಸ್ಕೃತವು ಹಿಂದಿಗೆ ಸಮಾನವಾಗಿ ಅಥವಾ ಅದಕ್ಕಿಂತಲೂ ಹೆಚ್ಚಾಗಿ ಜನರ ಮನಸ್ಸನ್ನು ಆಕರ್ಷಣೆಮಾಡುವದನ್ನು ಮನಗಾಣಿಸ ಬಹುದಲ್ಲವೆ? ಆಗ ಸರಕಾರವು ಸಂಸ್ಕೃತವನ್ನು ಈಗಿನಂತೆ ಕಡೆಗಣಿಸುವದು ಸಾಧ್ಯವೆ? ಇದನ್ನು ಸಂಸ್ಕೃತಭಕ್ತರೆಲ್ಲರೂ ಸಾವಧಾನವಾಗಿ ಆಲೋಚಿಸಬೇಕು.

* * * * *

## 27. ಸಂಸ್ಕೃತಪ್ರಚಾರದಿಂದ ಸಂಸ್ಕೃತಿಗೆ ಬೆಂಬಲ

ಮೈಸೂರಿನ ಸಂಸ್ಕೃತವಿದ್ಯಾಸಮಿತಿಯಲ್ಲಿ ಸಂಸ್ಕೃತಪರೀಕ್ಷೆಗಳಲ್ಲಿ ತೇರ್ಗಡೆ ಯಾದವರಿಗೆ ಬಹುಮಾನವನ್ನು ವಿತರಣೆ ಮಾಡುವ ಸಂದರ್ಭದಲ್ಲಿ (18-8-63) ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಸರದಾರ ಕೆ.ಎಮ್ ಪಣಿಕ್ಕರ್‌ರವರು ಮಾಡಿದ ಭಾಷಣವು ದೂರದೃಷ್ಟಿಯಿಂದ ಕೂಡಿದ್ದಾಗಿತ್ತೆಂದು ನನಗೆ ತೋರುತ್ತದೆ.

ನಮ್ಮ ಉತ್ತಮಸಂಪ್ರದಾಯಗಳು, ವೈಭವ, ಮತ್ತು ಪೂರ್ವಜರಿಂದ ನಮಗೆ ಬಂದಿರುವ ಸೌಭಾಗ್ಯ- ಇವುಗಳನ್ನು ಇನ್ನೂ ಇಟ್ಟುಕೊಂಡಿರಬೇಕೆನಿಸಿದರೆ ಸಂಸ್ಕೃತ ಪ್ರೇಮವು ನಮ್ಮಲ್ಲಿರಲೇಬೇಕು- ಎಂದು ಸರದಾರರು ನುಡಿದದ್ದರಲ್ಲಿ ಪೂರ್ಣಸತ್ಯವಿದೆ. ಸಂಸ್ಕೃತವನ್ನು ಮರೆತರೆ, ಈಜಿಪ್ಟ ದೇಶವು ಹಿಂದಿನ ಸಂಬಂಧವನ್ನು ಕಡಿದುಕೊಂಡು ಬಿಟ್ಟಿರುವಂತೆ, ನಾವೂ ಕಡಿದು ಹಾಕಿಕೊಂಡಂತಾಗುವದು ಎಂದು ಅವರು ಐತಿಹಾಸಿಕ ನಿದರ್ಶನವನ್ನೂ ಕೊಟ್ಟಿರುತ್ತಾರೆ.

ಚತುರ್ದಿಕ್ಕುಗಳಲ್ಲಿಯೂ ಇರುವ ಭಾರತೀಯರಲ್ಲಿ ಕಾಣಬರುವ ಐಕ್ಯಕ್ಕೂ ಸಮಾನಸಂಸ್ಕೃತಿಗೂ ಸಂಸ್ಕೃತದ ಪ್ರಭಾವವೇ ಕಾರಣವು. ಸಂಸ್ಕೃತವನ್ನು ಎಲ್ಲರೂ ಮಾತನಾಡದೆ ಇದ್ದರೂ ಸಂಸ್ಕೃತಜ್ಞರು ದೇಶಭಾಷೆಯಮೂಲಕ ಸಂಸ್ಕೃತದಲ್ಲಿರುವ ಜ್ಞಾನವನ್ನೂ ಸಂಪ್ರದಾಯವನ್ನೂ ತಿಳಿಯ ಹೇಳುತ್ತಿದಾರೆಂಬುದು ಸತ್ಯ- ಎಂಬ ನುಡಿಯು ಅರ್ಥಪೂರ್ಣವಾಗಿರುತ್ತದೆ. ಉರ್ದುವನ್ನು ಬಿಟ್ಟರೆ ಮಿಕ್ಕ ಎಲ್ಲಾ ಭಾಷೆಗಳ ಮೇಲೂ ಸಂಸ್ಕೃತವೇ ವಾಙ್ಮಯಪ್ರಚೋದಕವಾಗಿಬಿಟ್ಟಿದೆ ಎಂಬುದೊಂದು ನಿತ್ಯಸತ್ಯ.

ಸಂಸ್ಕೃತದ ಉಜ್ಜೀವನವಾಗಬೇಕೆನ್ನುತ್ತಿರುವದು ಹಿಂದುಗಳ ಅಭಿನಿವೇಶವಲ್ಲ. ಸಂಸ್ಕೃತವೆಂಬುದು ನಮ್ಮ ಜನಾಂಗಕ್ಕೆಲ್ಲ ಸೇರಿದ್ದು; ಭಾರತವನ್ನೆಲ್ಲ ಒಂದೆಂದು ಗಣಿಸುವ ಗ್ರಂಥಗಳು ಸಂಸ್ಕೃತದಲ್ಲಿಯೇ ಕಾಣಬರುತ್ತವೆ; ಅದನ್ನು ಕೈಬಿಟ್ಟರೆ ನಮಗೆ ಉಪನಿಷತ್ತುಗಳ ಬೋಧೆಯಾಗಲಿ ಪೂರ್ವಾಚಾರ್ಯರ ಸೂಕ್ತಿಗಳಾಗಲಿ ದೊರಕುವ ಸ್ಥಾನವಿನ್ನೊಂದಿಲ್ಲ. ಸಂಸ್ಕೃತದಲ್ಲಿ ಬರೆದಿರುವವರಲ್ಲಿ ಜೈನರೂ ಬೌದ್ಧರೂ ಮುಸಲ್ಮಾನರೂ, ಕ್ರಿಸ್ತಿಯನರೂ ಸಹ ಇರುತ್ತಾರೆ. ಹಿಂದೂಚೀಣ, ಜಾವಾ, ಮಧ್ಯ ಆಸಿಯ, ಆಗ್ನೇಯ ಆಸಿಯ- ಇಲ್ಲೆಲ್ಲ ಸಂಸ್ಕೃತದ ಶಾಸನಗಳಿವೆ- ಎಂಬ ವಿಷಯಗಳು ಸಂಸ್ಕೃತದ ವೈಶಾಲ್ಯ, ನಾನಾಜನಾಂಗವ್ಯಾಪ್ತಿತ್ವ- ಇವುಗಳನ್ನು ಸೂಚಿಸುತ್ತವೆ- ಎಂಬ ಮಾತು ಸರದಾರರ ವಿಶಾಲದೃಷ್ಟಿಯನ್ನು ತಿಳಿಸುತ್ತದೆ.

ಸರದಾರ ಪಣಿಕ್ಕರ್‌ರವರ ಅರ್ಥಗರ್ಭಿತವಾದ ಭಾಷಣವನ್ನು ನಮ್ಮ ದೇಶದವರು ಮನನಮಾಡಬೇಕು. ಇಂಥ ಸಂದರ್ಭಗಳಲ್ಲಿ ಸಂಸ್ಕೃತಭಾಷೆಯ ಸ್ತುತಿಯನ್ನು ಸಂಸ್ಕೃತದಲ್ಲಿ ಮೊದಲು ಮಾಡಿ ಬಳಿಕ ದೇಶಭಾಷೆಯಿಂದ ವಿವರಿಸುವ ಪದ್ಧತಿಯಿದ್ದರೆ ಒಳ್ಳೆಯದೆಂದು ನನ್ನ ನಮ್ರಸೂಚನೆ.

* * * * *

# 28. ಆರು 'ಸ' ಕಾರಗಳು

ನಮ್ಮ ದೇಶದ ತರುಣರು **ಸಂಸ್ಕೃತ, ಸದಾಚಾರ, ಸತ್ಸಂಗ, ಸರ್ವಕರ್ಮ ಫಲತ್ಯಾಗ, ಸತ್ಯ, ಸಹಸ್ರನಾಮ-** ಎಂಬ ಆರು 'ಸ'ಕಾರಾದಿಶಬ್ದಗಳನ್ನು ಮನಸ್ಸಿನಲ್ಲಿ ಹೊರಳಾಡಿಸಿದರೆ ಅವರಿಗೆ ಇಹವೂ ಪರವೂ ದೊರಕುವವೆಂದು ನನ್ನ ಭಾವನೆ.

ಮೊಟ್ಟ ಮೊದಲು **ಸಂಸ್ಕೃತ**ವೆಂಬ ಮಾತಿನ ಅರ್ಥವನ್ನು ಮನಸ್ಸಿನಲ್ಲಿ

ಮೆಲುಕುಹಾಕುವದು ಒಳ್ಳೆಯದು. ಪೂರ್ವದಲ್ಲಿ ನಮ್ಮ ದೇಶವು ಸ್ವತಂತ್ರವಾಗಿದ್ದಾಗ ಉತ್ತಮನಾಗರಿಕರೆಂಬವರೆಲ್ಲರೂ ಸಂಸ್ಕೃತಭಾಷೆಯನ್ನೇ ಮಾತಿನಲ್ಲಿ ಬಳಸುತ್ತಿದ್ದರು. ಆಗ್ಗೆ ಸಂಸ್ಕೃತವು ಎಲ್ಲರಿಗೂ ತಿಳಿಯುತ್ತಿತ್ತೆಂಬುದು ಕಾಳಿದಾಸಾದಿಕವಿಗಳು ಬರೆದಿರುವ ನಾಟಕಗಳಿಂದ ಗೊತ್ತಾಗುತ್ತದೆ. ಆಗ ನಾಟಕಗಳನ್ನು ಅಭಿನಯಿಸಿ ತೋರಿಸುತ್ತಿದ್ದ ರೆಂಬುದಕ್ಕೆ ಆಡುವವರಿಗಾಗಿ ಬರೆದಿಟ್ಟಿರುವ ಸೂಚನೆಗಳಿಂದ ವ್ಯಕ್ತವಾಗುತ್ತದೆ. ನಾಟಕಗಳಲ್ಲಿ ಸ್ತ್ರೀಯರೂ ಆಳುಗಳೇ ಮುಂತಾದ ಕಡಿಮೆಯ ಅಂತಸ್ತಿನ ಪಾತ್ರಗಳೂ ಆಡುವ ಭಾಷೆಗಳಿಗೆ ಪ್ರಾಕೃತಭಾಷೆಗಳೆಂಬ ಹೆಸರು ಇದೆ. **ಪ್ರಾಕೃತಭಾಷೆ**ಗಳಿಗೆ ಶೂರಸೇನ, ಸೌರಾಷ್ಟ್ರ- ಮುಂತಾದ ದೇಶದ ಹೆಸರುಗಳಿರುವದನ್ನು ಮನದಂದರೆ, ಸಂಸ್ಕೃತವನ್ನು ಆಯಾ ದೇಶದ ಸಾಮಾನ್ಯ ಜನರು ಆಡುವಾಗ ಭಾಷೆಯಲ್ಲಿ ಕೆಲಕೆಲವು ಮಾರ್ಪಾಡುಗಳು ಆಗಿ ಪ್ರಾಕೃತಭಾಷೆಗಳಾಗಿರಬೇಕೆಂದು ಹೇಳಬೇಕಾಗುತ್ತದೆ. ಈಗ್ಗೆ ಕಾಣಬರುವ ಮೈಸೂರು, ಮಂಗಳೂರು, ಧಾರವಾಡ- ಮೊದಲಾದ ಉಪಪ್ರಾಂತಗಳ ಜನರು ಆಡುವ ಕನ್ನಡ ಭಾಷೆಯಲ್ಲಿ ಕೆಲಕೆಲಶಬ್ದಗಳು, ಉಚ್ಚಾರಣೆಯ ಕ್ರಮ- ಇವುಗಳಲ್ಲಿ ಪ್ರಭೇದಗಳಿರುವಂತೆಯೇ ಆಗಿನ ಬೇರೆಬೇರೆಯ ಪ್ರಾಂತದವರ ಭಾಷೆಯಲ್ಲಿ ಈ ಪ್ರಭೇದಗಳಾಗಿರಬೇಕು. ಈಗ್ಗೆ ಪ್ರಾಕೃತಭಾಷೆಗಳುಕೂಡ ಗ್ರಂಥಸ್ಥ ಭಾಷೆಗಳಾಗಿ ಅವುಗಳಿಂದ ಮಹಾರಾಷ್ಟ್ರಿ, ಗುಜರಾತಿ, ಹಿಂದಿ, ಬಂಗಾಳಿ- ಮುಂತಾದ ಉತ್ತರದೇಶದ ಭಾಷೆಗಳು ಹುಟ್ಟಿವೆ. ಹೀಗಿದ್ದರೂ ಈ ಎಲ್ಲಾ ಭಾಷೆಗಳಿಗೂ ಸಂಸ್ಕೃತವೇ ಮಾತೃಸ್ಥಾನದಲ್ಲಿರುತ್ತದೆ; ಈಗಲೂ ಅವುಗಳನ್ನಾಡುವ ಜನರಿಗೆ ವಿಚಾರಕ್ರಮವು ಸಂಸ್ಕೃತಭಾಷೆಯಲ್ಲಿರುವ ವೇದ, ಶಾಸ್ತ್ರ, ಸ್ಮೃತಿಗಳು, ಪುರಾಣಗಳು, ಕಾವ್ಯಗಳು, ನಾಟಕಗಳು- ಮುಂತಾದ ಗ್ರಂಥಗಳಿಂದಲೇ ದೊರಕಿರುತ್ತದೆ. ದಕ್ಷಿಣದೇಶದ ಭಾಷೆಗಳು ನೇರಾಗಿ ಸಂಸ್ಕೃತದಿಂದ ಹುಟ್ಟಿಲ್ಲವಾದರೂ ಸಂಸ್ಕೃತದ ಪ್ರಭಾವವು ಅವುಗಳಮೇಲೆ ಬಿದ್ದಿದೆ. ಎಷ್ಟೋ ಸಂಸ್ಕೃತಶಬ್ದಗಳಿಗೆ ದೇಶಭಾಷೆಯ ಪ್ರತ್ಯಯಗಳನ್ನು ಸೇರಿಸಿಕೊಂಡು ಜನರು ಬಳಸುತ್ತಿದ್ದಾರೆ. ಸಂಸ್ಕೃತವೊಂದೇ ನಮ್ಮ ದೇಶದವರ ಸಂಸ್ಕೃತಿಯ ಉಗಮಸ್ಥಾನವಾಗಿರುತ್ತದೆ. ಈ ಭಾಷೆಯಲ್ಲಿರುವಷ್ಟು ಶಬ್ದ ಭಂಡಾರವು ಮತ್ತೆ ಯಾವ ಭಾಷೆಯಲ್ಲಿಯೂ ಇಲ್ಲವೆಂದರೂ ಅತಿಶಯೋಕ್ತಿಯಾಗುವಂತಿಲ್ಲಷ್ಟಿ. ಭೌತಿಕವಿಜ್ಞಾನದ ಶಬ್ದಗಳನ್ನು ಮಾತ್ರ ಸೇರಿಸಿಕೊಂಡರೆ ಈ ಭಾಷೆಯು ಇಂದಿಗೂ ಪರಿಪೂರ್ಣ ಭಾಷೆಯಾಗಬಹುದಾಗಿದೆ. ನಮ್ಮ ದೇಶದವರೇ ಅಲ್ಲದೆ, ಚೀನ, ಜಪಾನು, ರಷಿಯ, ಹಾಲೆಂಡ್, ಜರ್ಮನಿ, ಇಂಗ್ಲೆಂಡು, ಅಮೆರಿಕ- ಮುಂತಾದ ನಾಗರಿಕ ದೇಶಗಳ ಜನರೂ ಇದನ್ನು ಅಭ್ಯಾಸ ಮಾಡುತ್ತಿದಾರೆ, ಇದಕ್ಕೆ ಗೌರವಸ್ಥಾನವನ್ನು ಕೊಡುತ್ತಿದಾರೆ.

ಆದ್ದರಿಂದ ಭಾರತದೇಶದವರೆನ್ನಿಸಿಕೊಳ್ಳಬೇಕಾದರೆ ಈ ಭಾಷೆಯನ್ನು ಅವಶ್ಯವಾಗಿ ನಾವು ಕಲಿಯಬೇಕು. ಅದರಿಂದ ದೇಶಭಾಷೆಗಳೆಲ್ಲವೂ ಸಜೀವವಾಗುವವು; ನಮ್ಮ ವಿಚಾರಗಳು ಉದಾತ್ತವಾಗುವವು.

**ಸದಾಚಾರವೆಂಬುದು ಎರಡನೆಯ ಸಕಾರವು.** ನಮ್ಮ ದೇಶದಲ್ಲಿ ಹಿಂದಿನಿಂದಲೂ ಬಂದಿರುವ ಉತ್ತಮವಾದ ಆಚಾರಗಳು ಆರೋಗ್ಯಕ್ಕೂ, ಆರ್ಥಿಕ ಸೌಕರ್ಯಕ್ಕೂ, ದೇಶದ ಸಂಸ್ಕೃತಿಯ ನೆನಪು ನಿಂತಿರುವದಕ್ಕೂ ಕಾರಣವಾಗಿರುತ್ತವೆ. ಅವುಗಳ ಹುಟ್ಟನ್ನೂ ಹೆಚ್ಚುಗಾರಿಕೆಯನ್ನೂ ಅರಿಯಲಾರದೆ ನಾವು ಪರದೇಶದವರ ಆಚಾರಗಳನ್ನು ಅನುಕರಿಸುವದಕ್ಕೆ ಪ್ರಾರಂಭಿಸಿರುತ್ತೇವೆ; ಹಳೆಯ ಆಚಾರಗಳನ್ನು ಇನ್ನೂ ಇಟ್ಟುಕೊಂಡಿರುವವರನ್ನು ಹಾಸ್ಯಮಾಡುವದಕ್ಕೂ ಹಿಂಜರಿಯುವದಿಲ್ಲ. ಆದರೆ ನಮ್ಮ ಎಷ್ಟೋ ಆಚಾರಗಳನ್ನು ಬೇರೆಯ ದೇಶದವರು ಚೆನ್ನಾಗಿ ಪರೀಕ್ಷೆಮಾಡಿ ಅವುಗಳ ಮಹತ್ತ್ವವನ್ನು ಕಂಡುಕೊಂಡಿರುತ್ತಾರೆಂದು ಈಗೀಗ ಗೊತ್ತಾಗುತ್ತಾಬರುತ್ತಿದೆ. ಪಾಶ್ಚಾತ್ಯರಲ್ಲಿ ವೈದ್ಯರೂ ಸಮಾಜಸುಧಾರಕರೂ ವಿಚಾರಮಾಡಿ ತಮ್ಮ ದೇಶದ ಅನಾಚಾರಗಳಿಂದ ಆಗುತ್ತಿರುವ ಅನರ್ಥಗಳನ್ನು ಹೊರಕ್ಕೆಹಾಕಿ ಸಮಾಜವನ್ನು ಸುಧಾರಣೆಮಾಡಬೇಕೆಂದು ತವಕಿಸುತ್ತಿರುವಲ್ಲಿ ನಾವು ವಿಚಾರಹೀನರಾಗಿ ಅವರು ತಿಳಿಯದೆ ಇಟ್ಟುಕೊಂಡಿರುವ ಆಚಾರಗಳನ್ನು ಅಂಧಾನುಕರಣೆಯಿಂದ ಬಳಕೆಗೆ ತರುವದಕ್ಕೆ ಪ್ರಾರಂಭಿಸಿರುತ್ತೇವೆ. ನಮ್ಮ ವೇಷಗಳಲ್ಲಿಯೂ ಆಹಾರವಿಹಾರಗಳಲ್ಲಿಯೂ ಇಂಥ ಅವಿವೇಕದ ಅನುಕರಣೆಗಳು ಎಲ್ಲಿ ಇರುತ್ತವೆ ಎಂಬುದನ್ನು ನೋಡಿ ತಿದ್ದಿಕೊಳ್ಳುವದಕ್ಕೆ ಈಗಲಾದರೂ ಪ್ರಯತ್ನಿಸುವದು ಅತ್ಯವಶ್ಯವಾಗಿದೆ. ಆರ್ಯಾಚಾರವು ಧರ್ಮಕ್ಕೆ ಮೊದಲನೆಯ ಮೆಟ್ಟಿಲು ಎಂದು ಬಲ್ಲವರು ಹೇಳುತ್ತಾರೆ. ವಾಸಸ್ಥಲವನ್ನು ಚೊಕ್ಕಟವಾಗಿಟ್ಟುಕೊಳ್ಳುವದು, ಶುಚಿಯಾಗಿರುವದು, ಹಿತಮಿತಮೇಧ್ಯಾಹಾರವನ್ನು ಕಾಲದೇಶವರಿತು ಉಪಯೋಗಿಸುವದು, ಏಕಾಂತವಾಸ, ಮಿತವಾಕ್ಕು- ಮುಂತಾದ ಆಚಾರಗಳ ಮೇಲ್ಮೆಯನ್ನು ಕುರಿತು ದೊಡ್ಡವರು ವಿಚಾರಮಾಡಬೇಕು; ತಾವೂ ಅನುಸರಿಸಿ ತಮ್ಮ ಮಕ್ಕಳಿಗೂ ತಿಳಿಯಹೇಳಬೇಕು. ಇದರಿಂದ ನಮ್ಮ ಜನಾಂಗಕ್ಕೇ ಹೆಚ್ಚಿನ ಲಾಭವುಂಟು.

**ಸತ್ಸಂಗವೆಂಬುದು ಮೂರನೆಯ ಸಕಾರವು.** ''ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ । ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥'' 'ಉಂಟಾಗುವದು', 'ಒಳ್ಳೆಯವನಾಗುವದು' ಎಂಬರ್ಥದಲ್ಲಿ ಸತ್ ಎಂಬ ಶಬ್ದವನ್ನು

ಬಳಸುತ್ತಾರೆ; ಒಳ್ಳೆಯ ಕರ್ಮವನ್ನು ಸತ್ ಎಂದೇ ಕರೆಯುವರು. ನಾವು ಯಾರ ನಡೆವಳಿಕೆಯನ್ನು ಅನುಸರಿಸಬೇಕು? ಯಾರನ್ನು ಗೌರವಿಸಬೇಕು?- ಎಂಬ ವಿಷಯವನ್ನು ವಿಚಾರಮಾಡುವದು ಅವಶ್ಯವಷ್ಟೆ? ಯಾರಿಗೆ ಹಣಕಾಸಿನ ಅನುಕೂಲ್ಯವಿರುವದೋ, ಯಾರಿಗೆ ಅಧಿಕಾರವೇ ಮುಂತಾದ ಸ್ಥಾನ ಗೌರವವಿರುವದೋ ಅವರನ್ನೇ ಆದರ್ಶಸ್ಥಾನದಲ್ಲಿ ಸಾಮಾನ್ಯಜನರು ಇಟ್ಟು ಕೊಳ್ಳುವದಕ್ಕೆ ಮೊದಲುಮಾಡಿರುತ್ತಾರೆ. ನಿಜವೇನೆಂದರೆ, ಯಾರು ಶ್ರುತಿ ಸ್ಮೃತ್ಯಾದಿಗಳನ್ನು ಅನುಸರಿಸಿ ನಡೆಯುತ್ತಿರುವರೋ, ಯಾರು ತಮ್ಮ ನಡೆನುಡಿಗಳಿಂದ ನಾಸ್ತಿಕರನ್ನು ಆಸ್ತಿಕರನ್ನಾಗಿಯೂ ಸ್ವೇಚ್ಛಾಚಾರಿಗಳನ್ನು ನೀತಿ ಮಾರ್ಗಾನುಸಾರಿಗಳನ್ನಾಗಿಯೂ ಮಾರ್ಪಡಿಸಬಲ್ಲರೋ ಅವರೇ ಸತ್ಪುರುಷರು. ಅಂಥವರನ್ನು ಮೇಲುಪಂಕ್ತಿಯಾಗಿ ಇಟ್ಟುಕೊಳ್ಳುವದರಿಂದಲೂ ಅವರ ಜೊತೆಯಲ್ಲಿ ಆಗಾಗ್ಗೆ ಸಂಭಾಷಣಾದಿಗಳ ಲಾಭವನ್ನು ಪಡೆದುಕೊಳ್ಳುವದರಿಂದಲೂ ನಮಗೂ ಸದಾಚಾರವು ಅಳವಡುತ್ತದೆ. ಮಳೆಯು ಬಂದರೆ ಕೃಷಿಕರಿಗೆಲ್ಲ ಹೇಗೆ ಸಂತೋಷವಾಗು ವದೋ ಹಾಗೆ ಸತ್ಪುರುಷರ ಸಹವಾಸದಲ್ಲಿರುವ ಜನರೆಲ್ಲರ ಮನಸ್ಸಿಗೂ ಸಂಸ್ಕಾರ ವುಂಟಾಗುತ್ತದೆ. ಉಡುಪಿನ ಡಬ್ಬು, ಊಟಉಪಚಾರಗಳಿಗೂ ವಾಸದಮನೆ, ವಾಹನ- ಮುಂತಾದವುಗಳಿಗೂ ಮಾಡುವ ದುಂದುವೆಚ್ಚ, ಅಧಿಕಾರಮದದಿಂದ ಜನರನ್ನು ತಮ್ಮಂತೆ ತಿರುಗಿಸಿಕೊಳ್ಳುವ ಶಕ್ತಿ- ಇಂಥ ಹೊರಗಿನ ಆಡಂಬರಗಳು ಸತ್ಪುರುಷರನ್ನು ಗುರುತಿಸುವದಕ್ಕೆ ಎಂದಿಗೂ ಸಹಾಯಕವಾಗಲಾರವು.

**ಸರ್ವಕರ್ಮಫಲತ್ಯಾಗ**ವೆಂಬುದು ಇನ್ನೊಂದು ಸಕಾರವು. ಮನುಷ್ಯರಲ್ಲಿ ಸ್ವಭಾವವಾಗಿಯೇ ಕಾಮಲೋಭಗಳು ಇದ್ದುಕೊಂಡಿರುತ್ತವೆ. ಆದ್ದರಿಂದ ಯಾವ ಕೆಲಸವನ್ನು ಮಾಡಿದರೂ 'ಇದರಿಂದ ನನಗೆ ಯಾವ ಲಾಭವಾಗುತ್ತದೆ, ಈ ಕೆಲಸವನ್ನು ಮಾಡಿದರೆ ಎಷ್ಟು ರೂಪಾಯಿ ಸಿಕ್ಕೀತು?'- ಎಂದೇ ಜನರು ಹವಣಿಸುತ್ತಿರುತ್ತಾರೆ. ನಾವು ಜೀವಿಸಿರುವದಕ್ಕೆ ಅನ್ನ, ಬಟ್ಟೆ, ವಾಸದ ಮನೆ- ಮುಂತಾದ ಸೌಕರ್ಯಗಳು ಅವಶ್ಯವಾಗಿರುವವೆಂಬುದಕ್ಕೆ ಎರಡಿಲ್ಲವಾದರೂ 'ನನಗೆ ಯಾವ ಪ್ರತಿಫಲವೂ ಸಿಕ್ಕದಿದ್ದರೆ ಯಾವ ಕೆಲಸವನ್ನೂ ಮಾಡಲಾರೆ' ಎಂಬುದು ಅಧಮ ವರ್ಗದ ಮನುಷ್ಯರ ಹೆಗ್ಗುರುತು ಎಂಬುದಕ್ಕೆ ಸಂಶಯವಿಲ್ಲ. ಮನುಷ್ಯನೂ ಮಿಕ್ಕ ಪ್ರಾಣಿಗಳಂತೆಯೇ ಆಹಾರನಿದ್ರಾದಿಗಳನ್ನು ಅವಲಂಬಿಸುವ ಪ್ರಾಣಿಯಾಗಿದ್ದರೂ ಅವನಿಗೆ ಅಂತಃಕರಣ ವೆಂಬ ಒಂದು ಉತ್ತಮಸಾಧನವಿದೆ. ಅದಕ್ಕೆ ಬೇಕಾದ ಸಂಸ್ಕಾರವನ್ನು ಮಾಡಿಕೊಂಡರೆ ದೇವತೆಗಳ ಸ್ಥಾನಕ್ಕೆ ಏರಬಹುದು; ತನ್ನ ಸುತ್ತಮುತ್ತಲೂ ಇರುವವರನ್ನೂ ಮೇಲಿನ

ಅಂತಸ್ತಿಗೆ ಏರಿಸಬಹುದು. ಶಾಸ್ತ್ರದಲ್ಲಿ ಹೇಳಿರುವ ಸಾಧನಗಳಿಂದ ಸ್ವಾರ್ಥತ್ಯಾಗವನ್ನು ಮಾಡಿ ಫಲಾಪೇಕ್ಷೆಯಿಲ್ಲದೆ ಪರೋಪಕಾರವನ್ನು ಮಾಡುವ ಉತ್ತಮಸಂಸ್ಕಾರದ ಅಂತಃಕರಣವನ್ನು ಸಂಪಾದಿಸಿಕೊಳ್ಳುವದೇ ಮನುಷ್ಯನಿಗೆ ಹೆಗ್ಗುರಿಯಾಗಿರಬೇಕು; ಆಗಲೆ ಅವನು ಮನುಷ್ಯನಾಗಿ ಹುಟ್ಟಿದ್ದು ಸಾರ್ಥಕವಾದಂತೆ- ಎಂದು ಶಿಷ್ಟರು ಹೇಳುತ್ತಾರೆ. ಸತ್ಪುರುಷರ ಸಹವಾಸದಿಂದ ನಮಗೆ ಈ ಸ್ವಾರ್ಥತ್ಯಾಗದ ಬುದ್ಧಿಯೂ ಅದರಿಂದಾಗುವ ಪರಮಪುರುಷಾರ್ಥವೇ ಬೇಕೆಂಬ ಹಂಬಲಿಕೆಯೂ ಗಟ್ಟಿಯಾಗುತ್ತದೆ.

**ಸತ್ಯವೆಂಬುದು ಐದನೆಯ ಸಕಾರ.** ಯಾವನಿಗೆ ಸ್ವಾರ್ಥತ್ಯಾಗವು ಅಳವಟ್ಟಿ ಪರೋಪಕಾರಬುದ್ಧಿಯಿಂದ ದುಡಿಯುವ ಜೀವನದ ಆನಂದದ ಅನುಭವವು ದೊರಕಿರುವದೋ ಅವನಿಗೆ ಸುಳ್ಳನ್ನು ಹೇಳುವ ಆವಶ್ಯಕತೆಯು ಬೀಳುವದಿಲ್ಲಷ್ಟೆ. ಕಂಡದ್ದನ್ನು ಕಂಡಂತೆ ಹೇಳುವ, ಕೇಳಿದ್ದನ್ನು ಕೇಳಿದಂತೆ ಹೇಳುವ, ತನಗೆ ತಿಳಿದದ್ದನ್ನು ತಿಳಿದಂತೆ ಹೇಳುವ ಅಭ್ಯಾಸವು ಅಂಥವನಿಗೆ ಸ್ವಾಭಾವಿಕವಾಗಿಬಿಡುತ್ತದೆ. ಇದರಂತೆ ತಾನು ಕೊಟ್ಟ ಮಾತಿಗೆ ತಪ್ಪದೆ, ಅದರಂತೆ ನಡೆಯುವ **ಸತ್ಯಸಂಧತೆ**ಯೂ ಅವನಿಗೆ ಜೀವನದ ಉಸಿರಾಗಿಬಿಡುತ್ತದೆ. ಸತ್ಯಹರಿಶ್ಚಂದ್ರಷ್ಟೆ, ಸತ್ಯಸಂಧರಾಮ- ಇವರ ಚರಿತ್ರೆಯ ಹೆಚ್ಚುಗಾರಿಕೆಯು ಅವನಿಗೆ ಅರ್ಥವಾಗುವಂತೆ ಮಿಕ್ಕವರಿಗೆ ಅರ್ಥವಾಗುವದಿಲ್ಲಷ್ಟೆ. ಇದೂ ಅಲ್ಲದೆ **ಸತ್ಯವಾದ ಪರಮಾರ್ಥ**ವೊಂದು- ಅಂದಿಗೂ ಇಂದಿಗೂ ಎಂದೆಂದಿಗೂ ತನ್ನ ಸ್ವರೂಪವನ್ನು ಮಾರ್ಪಡಿಸಿಕೊಳ್ಳದೆ ಇರುವ ತತ್ತ್ವವೊಂದು- ಇದೆಯೆ? ಇದ್ದರೆ ಅದನ್ನು ಕಂಡುಕೊಳ್ಳಬೇಕು- ಎಂಬ ತಹತಹವು ಅವನ ಮನಸ್ಸಿನಲ್ಲಿ ಹುಟ್ಟುತ್ತದೆ. ಹೀಗೆ ಸತ್ಯವಾಕ್ಯಷ್ಟೆ, ಸತ್ಯಪ್ರತಿಜ್ಞತ್ವಷ್ಟೆ, ಸತ್ಯಾನ್ವೇಷಣೆ- ಇವುಗಳಲ್ಲಿ ಆಸಕ್ತಿಯುಳ್ಳವನಾಗಿರುವದೆಂಬ ಈ ಸಾಧನಸಂಪತ್ತನ್ನು ನಮ್ಮ ದೇಶದ ಸಂಸ್ಕೃತಿಯ ಹೆಗ್ಗುರುತೆಂದು ಭಾವಿಸಿ ಅದಕ್ಕಾಗಿ ಜೀವನವನ್ನು ಅಣಿಮಾಡಿಕೊಳ್ಳುವ ಅಭ್ಯಾಸವನ್ನು ನಾವೂ ಕಲಿಯಬೇಕು; ನಮ್ಮ ಮಕ್ಕಳಿಗೂ ಇವುಗಳ ಮಹತ್ತ್ವವನ್ನು ತಿಳಿಯಹೇಳಬೇಕು.

ಇನ್ನು **ಸಹಸ್ರನಾಮವೆಂಬ ಆರನೆಯ ಸಕಾರ**ದ ವಿಚಾರಕ್ಕೆ ಕೆಲವು ಮಾತುಗಳನ್ನು ಹೇಳಿ ಈ ಸಕಾರಷಟ್ಕದ ಮನನವನ್ನು ಉಪಸಂಹಾರಮಾಡೋಣ. ಮನುಷ್ಯನು ಎಷ್ಟೇ ಪ್ರಯತ್ನಶಾಲಿಯಾಗಿರಲಿ, ಅವನಿಗೆ ದೈವಸಹಾಯವಿಲ್ಲದೆ ಯಾವ ಉತ್ತಮಸಾಧನವೂ ವಶವಾಗಲಾರದು. ಈವರೆಗೆ ನಾನು ಹೇಳಿರುವ ಸಕಾರಗಳು ನಮಗೆ ದಕ್ಕಬೇಕಾದರೆ ಸರ್ವೇಶ್ವರನಾದ ಪರಮಾತ್ಮನ ಅನುಗ್ರಹವು ಅವಶ್ಯವಾಗಿ ಬೇಕಾಗುವದು. ಆದ್ದರಿಂದ ಸತ್ಸಂಗದಿಂದ ಆ ಸರ್ವೇಶ್ವರನ ಅನುಗ್ರಹವನ್ನು ನಾವು ಪಡೆದೇ ಈ ಹೇಳಿದ ಸಾಧನಗಳನ್ನು

ಸಂಪಾದಿಸಿಕೊಳ್ಳುವದಕ್ಕೆ ಯತ್ನಿಸುವದು ಒಳ್ಳೆಯದು. 'ಸನ್ನೆ ಸಾವಿರದಾಳು ಬಲ' ಎಂಬ ಗಾದೆಯನ್ನು ನಾವೆಲ್ಲರೂ ಕೇಳಿರುತ್ತೇವಷ್ಟೆಷ? ನಾವು ಮಾಡುವ ಪುರುಷಪ್ರಯತ್ನಕ್ಕೂ ಸರ್ವೇಶ್ವರನಾದ ಭಗವಂತನ ಸಹಾಯವೇ 'ಸನ್ನೆ'ಯಾಗಿರುತ್ತದೆ. ಭಗವಂತನಲ್ಲಿ ಭಕ್ತಿಯು ಅಳವಡುವದಕ್ಕೆ ಆತನ ಗುಣ, ಕರ್ಮ, ಲೀಲೆಗಳನ್ನು ಸೂಚಿಸುವ ನಾಮಗಳನ್ನು ಕೀರ್ತನೆಮಾಡುತ್ತಿರುವದೆಂಬುದು ಉತ್ತಮಸಹಾಯವು. ನಮ್ಮ ದೇಶದಲ್ಲಿ ವಿಷ್ಣುಸಹಸ್ರನಾಮ, ಶಿವಸಹಸ್ರನಾಮ- ಮುಂತಾದ ಸಹಸ್ರನಾಮಗಳನ್ನು ಮಹಾತ್ಮರಾದ ಋಷಿಗಳು ರಚಿಸಿ ನಮಗೆ ಕೊಟ್ಟಿರುತ್ತಾರೆ. ಅವುಗಳ ಸದುಪಯೋಗವನ್ನು ನಾವು ಮಾಡಿಕೊಳ್ಳಬೇಕು. ಭಗವಂತನ ಈ ನಾಮಾವಳಿಯ ಸ್ತೋತ್ರಗಳನ್ನು ಪಠಿಸುತ್ತಾ ನಾಮಗಳ ಅರ್ಥವನ್ನು ಕೇಳುತ್ತಿರುವವರ ಮನದಲ್ಲಿ ಆ ಸರ್ವೇಶ್ವರನ ಭಕ್ತಿಯು ಮೂಡಿಕೊಳ್ಳುವದು. ಅವರಿಗೆ ಸಾತ್ತ್ವಿಕವಾದ ಆಚಾರವೂ ಸತ್ಯಪ್ರಿಯತ್ವವೂ ಸತ್ಪುರುಷರ ಸಂಗವೂ ಬೇಕೆಂಬ ಹಂಬಲಿಕೆಯು ಅವಶ್ಯವಾಗಿ ಉಂಟಾಗುವದು. **ಇಂಥ ಸಾಧನಗಳ ವಿಚಾರಗಳನ್ನೊಳಗೊಂಡ ನೂರಾರು ಗ್ರಂಥಗಳು ಅಡಗಿರುವ ಸಂಸ್ಕೃತಭಾಷೆಯ ಪ್ರೇಮವೂ ಉಕ್ಕೇರುವದು.**

ಈ ಆರು ಸಾಧನಗಳನ್ನು ಸಂಪಾದಿಸಿಕೊಳ್ಳಬೇಕೆಂಬ ಹಂಬಲಿಕೆಯನ್ನು ನಮ್ಮ ತರುಣರಿಗೆ ಉಂಟುಮಾಡುವದು ನಮ್ಮೆಲ್ಲರ ಕರ್ತವ್ಯವಾಗಿರುತ್ತದೆ.

ದೇಶಬಾಂಧವರೆ, ಭಾರತದೇಶದ ಸಂಸ್ಕೃತಿಯ ಮೇಲ್ಮೆಯನ್ನು ನೀವು ಮರೆಯದೆ ಮನಸ್ಸಿನಲ್ಲಿ ನಿಲ್ಲಿಸಿಕೊಳ್ಳಬೇಕಾದರೆ ಈ ಆರು ಸಕಾರಗಳನ್ನು ಮರೆಯದಿರಿ. **ಸಂಸ್ಕೃತಭಾಷೆಯನ್ನು** ಅಭ್ಯಾಸಮಾಡಿ ದೇವತೆಗಳಲ್ಲಿಯೂ ಋಷಿಗಳಲ್ಲಿಯೂ ಶ್ರದ್ಧಾಭಕ್ತಿಗಳನ್ನು ಸಂಪಾದಿಸಿಕೊಳ್ಳಿರಿ. **ಸದಾಚಾರವನ್ನು** ಅಳವಡಿಸಿಕೊಂಡು ಅಂತಃಶುದ್ಧಿಬಹಿಃಶುದ್ಧಿಗಳನ್ನು ಸಂಪಾದಿಸಿಕೊಳ್ಳಿರಿ. **ಸತ್ಸಂಗ**ವನ್ನು ಎಡೆಬಿಡದೆ ಮಾಡುತ್ತಾ ಅಧ್ಯಾತ್ಮವಿದ್ಯೆಯ ಮಾರ್ಗವನ್ನು ಕಂಡುಕೊಂಡು ಸುಖಿಗಳಾಗಿರಿ. ಸ್ವಾರ್ಥವನ್ನು ತ್ಯಜಿಸಿ **ಸರ್ವಕರ್ಮಫಲತ್ಯಾಗ**ವೆಂಬ ಗುರಿಯಿಂದ ಸಾರ್ವಜನಿಕ ಸೇವೆಯಲ್ಲಿ ನಿರತರಾಗುವದಕ್ಕೆ ಹವಣಿಸಿರಿ. **ಸತ್ಯ**ವನ್ನು ಆಡುವದು, **ಸತ್ಯ**ವನ್ನು ಪಾಲಿಸುವದು, **ಸತ್ಯ**ವನ್ನು ಕಂಡುಕೊಂಡು ಬಾಳನ್ನು ಸುಖಮಯವಾಗಿ ಮಾಡಿಕೊಳ್ಳುವದಕ್ಕೆ ಪ್ರಯತ್ನಿಸುವದು- ಎಂಬ ಸನ್ಮಾರ್ಗದಲ್ಲಿಯೇ ನಡೆಯಿರಿ. ಭಗವಂತನ **ಸಹಸ್ರನಾಮ**ವನ್ನು ಪಠಿಸುತ್ತಾ ಚಿತ್ತಶುದ್ಧಿಷಿ, ಭಗವದ್ಭಕ್ತಿಷಿ, ಮನಸ್ಸಿನಲ್ಲಿ ಶುದ್ಧಸಾತ್ತ್ವಿಕತೆ- ಇವುಗಳನ್ನು ಅಳವಡಿಸಿ ಕೊಳ್ಳುವದಕ್ಕೆ ಯತ್ನಿಸಿರಿ. ಈ **ಆರು ಸಕಾರ**ಗಳ ಮಹಿಮೆಯನ್ನು ನಿಮ್ಮ ಮಕ್ಕಳಿಗೂ ತಿಳಿಯಿಸಿಕೊಟ್ಟು ಆರ್ಯ ಸಂಸ್ಕೃತಿಯ ಬಾವುಟವನ್ನು ಎತ್ತಿಹಿಡಿಯಿರಿ; ಧನ್ಯರಾಗಿರಿ.

## 29. ಸಂಸ್ಕೃತವನ್ನು ಎಲ್ಲರೂ ಕಲಿಯುವದು ಅವಶ್ಯವೆ?

'ಶ್ರೇಯಾಂಸಿ ಬಹುವಿಘ್ನಾನಿ' ಒಳ್ಳೆಯದಕ್ಕೆ ಒಂಬತ್ತುಸಾವಿರ ಅಡ್ಡಿಗಳಿರುತ್ತವೆ. ಸಂಸ್ಕೃತವನ್ನು ನಾವೆಲ್ಲರೂ ಕಲಿತರೆ ನಿಜವಾಗಿಯೂ ನಮಗೆ ಶ್ರೇಯಸ್ಸೂ ಉಂಟು, ಪ್ರೇಯಸ್ಸೂ ಉಂಟು; ಆದರೆ ಅದೇನು ದೈವಮಾಯೆಯೊ, ಅದಕ್ಕೆ ಒಂದಲ್ಲೊಂದು ಬಗೆಯ ಅಡ್ಡಿಗಳಿವೆ. ಅದರ ಪ್ರಚಾರಕ್ಕೂ ಎಷ್ಟು ಆಕ್ಷೇಪಗಳು? 'ಸಂಸ್ಕೃತವು ಮೃತಭಾಷೆ' 'ಸಂಸ್ಕೃತವನ್ನು ಕಲಿಯುವದು ಕಷ್ಟ' 'ಸಂಸ್ಕೃತವು ಈಗಿನ ಕಾಲಕ್ಕೆ ಅಷ್ಟು ಬೇಕಿಲ್ಲ,' 'ಬಹುಭಾಷಾದೇಶಕ್ಕೆ ಸಂಸ್ಕೃತವನ್ನು ಸೇರಿಸಿದರೆ ಕಲಿಯುವವರಿಗೆ ತಲೆಹೊರೆ ಯಾದೀತು,' 'ಪರದೇಶಗಳ ಸಂಪರ್ಕಕ್ಕೆ ಸಂಸ್ಕೃತವು ಪ್ರಯೋಜನಕ್ಕೆ ಬಾರದು'- ಇತ್ಯಾದಿ ಇತ್ಯಾದಿ.

**1. ಸಂಸ್ಕೃತವು ಮೃತಭಾಷೆಯೆ?** ಇದಕ್ಕೆ ಎಷ್ಟೋ ಜನರು ಎಷ್ಟೋ ಸಲ ಸದುತ್ತರವನ್ನು ಕೊಟ್ಟಾಗಿದೆ. ಅದು ಲ್ಯಾಟಿನ್ ಮುಂತಾದ ಯುರೋಪಿನ ಪ್ರಾಚೀನ ಭಾಷೆಗಳಂತೆ ಮೃತವಾಗಿಲ್ಲ; ಅದನ್ನು ಈಗಲೂ ವ್ಯವಹಾರದಲ್ಲಿ ಬಳಸುವವರು ಇದಾರೆ, ಗ್ರಂಥಗಳನ್ನು ನಿರ್ಮಾಣಮಾಡುವವರೂ ಇದಾರೆ. ಅದು ಈಗಿನ ಭಾಷೆಗಳಲ್ಲಿ ಅನಿವಾರ್ಯವಾಗಿ ಹೆಣೆದುಕೊಂಡಿದೆ. ಇಸ್ರೇಲಿನಲ್ಲಿ ಹೀಬ್ರೂಭಾಷೆಯನ್ನು ಸರಕಾರಿಯ ಭಾಷೆಯಾಗಿ ಮಾಡಿಕೊಂಡಿರುತ್ತಾರಂತೆ; ಅದಕ್ಕಿಂತಲೂ ಸಂಸ್ಕೃತವು ಹೆಚ್ಚು ಮೃತಭಾಷೆ ಎನ್ನುವವರಿಗೆ ನಾಚಿಕೆಯಾಗುವದಿಲ್ಲವೇಕೆ?

**2. ಸಂಸ್ಕೃತವನ್ನು ಕಲಿಯುವದು ಕಷ್ಟವೆ?** ಕಲಿಯುವದಕ್ಕೆ ಪ್ರಾರಂಭಿಸಿ ನೋಡಿ. ಮಾತನಾಡುವಷ್ಟು ತಿಳಿವಳಿಕೆಯನ್ನು ಮೂರೇ ತಿಂಗಳಲ್ಲಿ ಕಲಿಯಿಸುವ ಪಾಶ್ಚಾತ್ತ್ಯ ದೇಶಗಳಿವೆ.

**3. ಸಂಸ್ಕೃತವು ಈಗಿನ ಕಾಲಕ್ಕೆ ಅಷ್ಟು ಬೇಕಿಲ್ಲವೆಂಬುದು ನಿಜವೆ?** ಆ ಭಾಷೆಯನ್ನು ಇನ್ನೂ ಹಲವು ದೇಶಗಳವರು ಸಕಲವಿದ್ಯಾನಿಲಯಗಳಲ್ಲಿಯೂ ಏತಕ್ಕೆ ಕಲಿಯುತ್ತಿದಾರೆ? ಸರಕಾರದವರು ಅಲ್ಲಲ್ಲಿ ಸಂಸ್ಕೃತದ ಸುಭಾಷಿತಗಳನ್ನು '**ಸತ್ಯಮೇವ ಜಯತೇ**' '**ಧರ್ಮಚಕ್ರಪ್ರವರ್ತನಾಯ**'-ಮುಂತಾದವುಗಳನ್ನು ಈಗಲೂ ಏತಕ್ಕೆ ಹೆಮ್ಮೆಯಿಂದ ಬಳಸುತ್ತಾರೆ? ಭಾರತದ ಭಾಷೆಗಳೊಳಗೆ ಇದನ್ನು ಒಂದೆಂದು (ಷೆಡ್ಯೂಲ್ 8) ಏಕೆ ಪರಿಗಣಿಸಿದಾರೆ? ಸರಕಾರಿಯ ಭಾಷೆಯೆನ್ನಲಾಗಿರುವ ಹಿಂದಿಯು ಸಂಸ್ಕೃತಪ್ರಧಾನವಾಗಿರಬೇಕೆಂದು ಏಕೆ ಸಮ್ಮತಿಸಿದ್ದಾರೆ? ಕಾನೂನುಗಳನ್ನು ಹಿಂದಿಯಲ್ಲಿ ಬರೆಯುವಾಗ ಶಬ್ದಗಳನ್ನು ಸಂಸ್ಕೃತದಿಂದಲೇ ಏತಕ್ಕೆ ಆರಿಸಿಕೊಳ್ಳುತ್ತಾರೆ

ಅಥವಾ ನಿರ್ಮಿಸಿಕೊಳ್ಳುತ್ತಾರೆ? ಹಿಮಾಲಯವೂ ತಮಗೆ ಸಂಬಂಧಪಟ್ಟಿದೆ ಎಂಬುದನ್ನು ತೋರಿಸುವದಕ್ಕೆ ಪಾರಿಭಾಷಿಕವೇದಗಳಿಂದ ಹಿಡಿದು ಕಾಳಿದಾಸನ ಕಾವ್ಯಗಳವರೆಗಿನ ಸಂಸ್ಕೃತವಾಙ್ಮಯವನ್ನೇಕೆ ತಡಕಿದರು? ಅದೂ ಒಂದು ಸರಕಾರಿಯ ಭಾಷೆಯಾಗಿರಬೇಕೆಂಬ ಸೂಚನೆಗೆ ಎಲ್ಲಾ ಪಾರ್ಟಿಗಳವರೂ ಬಹುಮತವನ್ನು ಏಕೆ ಕೊಟ್ಟರು?

**4. ಬಹುಭಾಷಾದೇಶಕ್ಕೆ ಸಂಸ್ಕೃತವು ಹೊರೆಯಾದೀತೆ?** ಬೇರೆ ಬೇರೆಯ ಭಾಷೆಯನ್ನಾಡುವ ನಮ್ಮ ದೇಶದ ಜನರಿಗೆ ಸಂಸ್ಕೃತವು ಬೇಗ ತಿಳಿಯುತ್ತದೆಯೊ, ಹಿಂದಿ ಅಥವಾ ಇಂಗ್ಲಿಷು ಬೇಗ ತಿಳಿಯುತ್ತದೆಯೊ? ದೇಶಭಾಷೆಗಳ (ಹಿಂದಿಯನ್ನು ಸೇರಿಸಿ ಎಲ್ಲಾ ಭಾಷೆಗಳ) ವ್ಯಾಕರಣಕ್ಕೆ ಸಂಸ್ಕೃತದ ತಿಳಿವಳಿಕೆ ಅತ್ಯವಶ್ಯವಲ್ಲವೆ? ಸಂಧಿ ಸಮಾಸಗಳು, ತತ್ಸಮತದ್ಭವಗಳು- ಇವುಗಳ ತಿಳಿವಳಿಕೆಗೆ ಸಂಸ್ಕೃತವಿಲ್ಲದಿದ್ದರೆ ಆದೀತೆ? ರಷ್ಯದಲ್ಲಿ ಪ್ರಾಂತಭಾಷೆ, ರಷ್ಯನ್‌ಭಾಷೆ, ಇಂಗ್ಲಿಷು-ಹೀಗೆ ಮೂರು ಭಾಷೆಗಳನ್ನು ಕಲಿಯುತ್ತಿದಾರಂತೆ. ಸ್ವಿಟ್ಸರ್ಲೆಂಡಿನಲ್ಲಿ ಜರ್ಮನ್, ಫ್ರೆಂಚ್, ಇಟಾಲಿಯನ್- ಈ ಮೂರು ಜನಾಂಗದ ಮತ್ತು ಸರಕಾರದ ಭಾಷೆಗಳಾಗಿವೆಯಂತೆ, ಕೆನಾಡದಲ್ಲಿ ಫ್ರೆಂಚ್ ಮತ್ತು ಇಂಗ್ಲಿಷು; ಪಾಕಿಸ್ತಾನದಲ್ಲಿ ಬಂಗಾಲಿ, ಉರ್ದು-ಎರಡೂ ಜನಾಂಗದ ಮತ್ತು ಸರಕಾರದ ಭಾಷೆಗಳಾಗಿವೆಯಂತೆ.

**5. ಪರದೇಶದ ಸಂಪರ್ಕಕ್ಕೆ ಸಂಸ್ಕೃತವು ಪ್ರಯೋಜನಕರವೆ?** ಪರದೇಶದವರು ಸಂಸ್ಕೃತದಲ್ಲಿ ಆದರವನ್ನು ತೋರಿಸುತ್ತಿರುವಾಗ, ನಾವು ಈ ವಿಷಯದಲ್ಲಿ ಅವಿಶ್ವಾಸವನ್ನು ತೋರಿಸುವದು ಸರಿಯಾದೀತೆ? 1960 ರಲ್ಲಿ ಭಾರತದ ಪ್ರೆಸಿಡೆಂಟರಿಗೆ ಲೆನಿನ್ ಗ್ರಾಡಿನ ಪ್ರಾಚ್ಯಸಂಶೋಧನಾ ಸಭೆಯವರು (Institute of Oriental Studies) ಸಂಸ್ಕೃತ ಭಾಷೆಯಲ್ಲಿ ಬರೆದು ಓದಿದ ಸ್ವಾಗತಪತ್ರವನ್ನು ನೋಡಬೇಕು; 1939ರಲ್ಲಿ ರವೀಂದ್ರನಾಥ್ ಟಾಗೂರ್‌ರವರಿಗೆ ಆಕ್ಸಫರ್ಡ್ ಸಕಲ ವಿದ್ಯಾನಿಲಯದವರು ಡಾಕ್ಟರು ಪದವಿಯನ್ನಿತ್ತ ಸಮಯದಲ್ಲಿ ರವೀಂದ್ರರು ಸಂಸ್ಕೃತದಲ್ಲಿತ್ತ ಪ್ರತ್ಯುತ್ತರಪತ್ರವನ್ನು ನೋಡಬೇಕು. ಟ್ಯೂಬಿಂಜನ್, ಹ್ಯಾರ್ವರ್ಡ್ ಮುಂತಾದ ಯೂನಿವರ್ಸಿಟಿಗಳಲ್ಲಿ ಸಂಸ್ಕೃತಕ್ಕಿರುವ ಆದರವನ್ನು ನೋಡಬೇಕು. ಸಂಸ್ಕೃತನಿಘಂಟು ಮುಂತಾದವುಗಳ ರಚನೆಯನ್ನು ಮಾಡಿರುವ **ಮ್ಯಾಕ್ಡೊನಾಲ್ಡ್** ಮುಂತಾದವರ ಸಾಹಸವನ್ನು ನೋಡಬೇಕು. ಪೆನ್ಸಿಲ್ವೇನಿಯ ಸಕಲವಿದ್ಯಾನಿಲಯದಲ್ಲಿ ಭಾರತದೇಶದ ತತ್ತ್ವಶಾಸ್ತ್ರಗಳ ಬಗ್ಗೆ ಡಾಕ್ಟರ್ ಪದವಿಯನ್ನು ಪಡೆದು, ಶಾಂಕರ

ವೇದಾಂತದಲ್ಲಿ (ಉಪನಿಷತ್ತುಗಳು, ಉಪದೇಶಸಾಹಸ್ರಿ ಇತ್ಯಾದಿಗಳ ವಿಷಯದ) ಸಂಶೋಧನೆಮಾಡುತ್ತಾ ಪಶ್ಚಿಮಜರ್ಮನಿಯಲ್ಲಿರುವ ಜಪಾನಿನ **ಸೆಂಗಾಕು ಮಾಯೆಡ** (Sangakumayeda M.A., Ph.d., Assistant Professor of Indian Philosophy) ಇವರ ಔತ್ಸುಕ್ಯವನ್ನು ನೋಡಬೇಕು. ನಮ್ಮ ದೇಶದಲ್ಲಿ ಸಂಸ್ಕೃತವು ಸರ್ಕಾರಿಭಾಷೆಯಾಗಲಿ, ಜನಾಂಗದ ಭಾಷೆಯಾಗಲಿ!- ಎಂದು ಸಕಾರಣವಾಗಿ ತಮ್ಮ ಅಭಿಪ್ರಾಯವನ್ನು ಕೊಟ್ಟಿರುವ ಹೊಣೆಗಾರಿಕೆಯ ಉಚ್ಚಸ್ಥಾನಗಳಲ್ಲಿರುವ ದೊಡ್ಡಮನುಷ್ಯರ ಅಭಿಪ್ರಾಯವನ್ನು ಮನದಂದುಕೊಳ್ಳಬೇಕು.

ಇದೆಲ್ಲಕ್ಕೂ ಮೇಲಾಗಿ ನಮ್ಮ ದೇಶದಲ್ಲಿ ಅತ್ಯಂತ ಪ್ರಾಚೀನಕಾಲದಿಂದಲೂ ಬೆಳೆದುಕೊಂಡುಬಂದಿರುವ ಸಂಸ್ಕೃತಿಗೆ ಆಗರವಾಗಿರುವ ವೇದ, ವೇದಾಂಗಗಳು, ಸ್ಮೃತಿ ಪುರಾಣ, ಆಗಮಗಳು, ಬೌದ್ಧಜೈನಾದಿಮತಗಳು, ಲೋಕಪ್ರಸಿದ್ಧರಾದ ಕಾಳಿದಾಸಾದಿಗಳು ಬರೆದಿರುವ ಕಾವ್ಯನಾಟಕಾದಿಗಳು, ದರ್ಶನಗಳು, ಹಿಂದೂಮತಕ್ಕೆಲ್ಲ ಅಡಿಗಲ್ಲಾಗಿರುವ ಉಪನಿಷತ್ತುಗಳು ಮತ್ತು ವೇದಾಂತದರ್ಶನ, ಆಯುರ್ವೇದ, ಜ್ಯೋತಿಷಾದಿಶಾಸ್ತ್ರಗಳು- ಇವೆಲ್ಲವನ್ನೂ ಒಳಗೊಂಡು ಭಾರತದ ಜನರ ಹೃದಯ ಗಳನ್ನೆಲ್ಲ ಒಂದು ಮಾಡಿರುವ ಸಂಸ್ಕೃತಭಾಷೆಯನ್ನು ಅಭ್ಯಾಸಮಾಡಬೇಕೆ? ಎಂಬ ಪ್ರಶ್ನೆಯನ್ನು ಎಬ್ಬಿಸಿರುವದೇ ತೀರ ನಾಚಿಕೆಗೀಡಾದದ್ದು. ನಾವು ಒಂದು ಜನಾಂಗವೆಂಬ ಅಭಿಮಾನವನ್ನುಂಟುಮಾಡಿಕೊಟ್ಟು, ನಾಗರಿಕ ಭೂಮಂಡಲಕ್ಕೆಲ್ಲ ನಮ್ಮ ಸಂಪರ್ಕವನ್ನು ಮಾಡಿಕೊಟ್ಟಿರುವ ಇಂಗ್ಲಿಷಿಗಿಂತಲೂ ನಮ್ಮ ಉಸಿರೇ ಆಗಿರುವ ಸಂಸ್ಕೃತಿಯ ನಿಲುಗನ್ನಡಿಯಾದ ಈ ಭಾಷೆಯು ನಮ್ಮ ದೇಶಕ್ಕೆ ಹೆಚ್ಚು ಅವಶ್ಯವಲ್ಲವೆ? ಇದನ್ನು ವಿಜ್ಞರು ಸಾವಧಾನವಾಗಿ ಮನಸ್ಸಿನಲ್ಲಿ ಹೊರಳಾಡಿಸಬೇಕು.

* * * * *

## 30. ಭಾರತಕ್ಕೆ ಯಾವ ಭಾಷೆ ಬೇಕು?

ಈಗ್ಗೆ ಭಾಷೆಯ ಪ್ರಶ್ನೆಯೊಂದು ನಮ್ಮ ದೇಶದಲ್ಲಿ ಬಿಡಿಸಲಾಗದ ಕಗ್ಗಂಟಾಗಿರುತ್ತದೆ. ದೇಶಭಾಷೆಗಳು ಬೆಳೆಯುವದಕ್ಕೆ ಬಹುಜನರು ಆಡುವ ಒಂದೇ ಭಾಷೆಯು ಆಯಾ ದೇಶಕ್ಕೆ ಸರಿಹೋಗುವಂತೆ ಭಾಷಾನುಸಾರವಾಗಿ ಪ್ರಾಂತಗಳನ್ನು ವಿಂಗಡಿಸಬಹುದೆಂದು ಕೆಲವು ಜನನಾಯಕರ ಸೂಚನೆಯಾಯಿತು. ಅದನ್ನನುಸರಿಸಿ ಪ್ರಾಂತಗಳೂ ಆದವು. 'ಈವೂರುಗಳು ಕನ್ನಡಕ್ಕೆ ಸೇರಬೇಕೊ, ಮಹಾರಾಷ್ಟ್ರಕ್ಕೆ

ಸೇರಬೇಕೊ'? 'ಆ ಭಾಗಗಳು ಆಂಧ್ರದೇಶದ ಆಡಳಿತದಲ್ಲಿರಬೇಕೊ, ತಮಿಳುನಾಡಿಗೆ ಸೇರಬೇಕೊ'? ಎಂಬ ವಾಗ್ಯುದ್ಧಕ್ಕೆ ಮೊದಲಾಯಿತು. ಜನಗಳ ರಾಗದ್ವೇಷಗಳು ಬೆಳೆದುಕೊಂಡವು, ಆರ್ಥಿಕಸಂಕಷ್ಟಗಳ ಪರಿಹಾರಕ್ಕೆ ಭಾಷೆಯ ಪ್ರಶ್ನೆಯೂ ಒಂದು ತೊಡಕಾಯಿತು.

ಭಾರತವು ಒಗ್ಗಟ್ಟಾಗಿರುವದಕ್ಕೆ 'ಒಂದು ಪ್ರಚಲಿತಭಾಷೆಯು ಸರ್ವಸಾಧಾರಣವಾಗಿರಬೇಕು' ಎಂದು ಜನನಾಯಕರಿಗೆ ತೋರಿತು. ಬಹುಜನರು ಆಡುತ್ತಿರುವ ಹಿಂದೀಭಾಷೆಯನ್ನೇ ಸರಕಾರಿಯ ಭಾಷೆಯಾಗಿ ಮಾಡಿಕೊಳ್ಳಬೇಕೆಂದೂ ನಿರ್ಧಾರವಾಯಿತು. ಸರಕಾರದ ಶಾಸನದ ಘಟನೆಯಲ್ಲಿ 'ಹಿಂದೀಬಾರದವರ ತೊಂದರೆಗಳ ಪರಿಹಾರಕ್ಕೆ ಲಕ್ಷ್ಯಕೊಡಬೇಕು' ಎಂಬ ಎಚ್ಚರಿಕೆಯ ಮಾತುಗಳನ್ನು ಸೇರಿಸಲಾಗಿದೆ, 'ಹಿಂದೀಭಾಷೆಯನ್ನು ಬೆಳೆಯಿಸುವದಕ್ಕೆ ಮುಖ್ಯವಾಗಿ ಸಂಸ್ಕೃತದ ಶಬ್ದಗಳನ್ನೇ ಬಳಸಿಕೊಳ್ಳಬೇಕು' ಎಂಬೀ ಎಚ್ಚರಿಕೆಯನ್ನೂ ತೆಗೆದುಕೊಂಡಾಯಿತು. ಹಿಂದೀಭಾಷೆಯನ್ನು ದೇಶದಲ್ಲೆಲ್ಲ ಹರಡುವ ಪ್ರಯತ್ನವೂ ಆಯಿತು. ಆದರೇನು? ಆ ಭಾಷೆಯೇ ಸರಕಾರದ ಭಾಷೆಯಾಗಿರಬೇಕೆಂದೂ ಇಂಗ್ಲಿಷು, ಹಿಂದಿ, ಪ್ರಾಂತದ ಭಾಷೆ-ಹೀಗೆ ಮೂರು ಭಾಷೆಗಳು ಪ್ರಚಾರಕ್ಕೆ ಬರಬೇಕೆಂದೂ ಶಾಸನವಾದಮೇಲೆ ಜನರು-ವಿಶೇಷವಾಗಿ ದ್ರಾವಿಡದೇಶದವರು-ದಂಗೆ ಎದ್ದರು. ಸರಕಾರಕ್ಕೆ ಒಂದು ಕೋಟಿಯಮೇಲಿನ ಆಸ್ತಿಯು ನಷ್ಟವಾಗಿದೆ ಎಂದು ಪತ್ರಿಕೆಗಳು ಹೇಳುತ್ತಿವೆ!

ಭಾಷೆ ಒಗಟನ್ನು ಹೇಗೆ ಬಿಚ್ಚಬೇಕು?- ಎಂದು ಎಲ್ಲರೂ ಕಕ್ಕಾಬಿಕ್ಕಿಯಾಗಿ ವಿಚಾರಿಸುವದಕ್ಕೆ ಮೊದಲುಮಾಡಿರುತ್ತಾರೆ. ಅಣ್ಣಗಳಿರ, ಸ್ವಲ್ಪ ಕಂಣ್‌ದೆರೆದು ನೋಡಿರಿ. ಶಾಸನದಲ್ಲಿ ಹದಿನಾಲ್ಕು ಭಾಷೆಗಳೊಳಗೆ ಸಂಸ್ಕೃತವೂ ಒಂದೆಂದು ಬರೆದಿದೆ. ಸಂಸ್ಕೃತದಿಂದ ಹುಟ್ಟಿರುವ ಅಥವಾ ಅದರಿಂದ ಹುಟ್ಟಿರುವದೆಂದು ಹೇಳುವಷ್ಟು ನಿಕಟವಾದ ಪ್ರಾಕೃತ, ಪಾಳಿ, ಮರಾಠಿ, ಹಿಂದಿ, ಗುಜರಾತಿ, ಬಂಗಾಳಿ-ಮುಂತಾದ ಭಾಷೆಗಳಿಗೆ ಪೋಷಣವು ಈಗಲೂ ಎಲ್ಲಿಂದ ದೊರೆಯುತ್ತಿದೆ? ಕನ್ನಡ, ತೆಲಗು, ಮಲೆಯಾಳಿ, ತಮಿಳು, ತುಳು- ಇಂಥ ದ್ರಾವಿಡ ಭಾಷೆಗಳಿಗೆ ಸ್ತನ್ಯವನ್ನು ಕೊಟ್ಟಿರುವ ಭಾಷೆ ಯಾವದು? 'ಭಾರತ'ವೆಂದು ಶಾಸನದಲ್ಲಿ ಕರೆದಿರುವ ನಮ್ಮ ದೇಶಕ್ಕೆ ಬಂದಿರುವ ಹೆಸರು ಯಾವಭಾಷೆಯದು? ಭಾರತವೆಲ್ಲ ಒಂದೇ ಸಂಸ್ಕೃತಿಗೆ ಒಳಪಟ್ಟಿರುವ ಬಹುಜನರ ದೇಶವೆಂಬ ಅಭಿಮಾನವನ್ನುಂಟುಮಾಡಿಕೊಟ್ಟಿರುವ ಮಹಾಭಾರತವು ಯಾವ ಭಾಷೆಯದು? ಈ ದೇಶದಲ್ಲಿ ವಾಸವಾಗಿರುವ (ಈಗಿನ ವ್ಯವಹಾರದಂತೆ) 'ಹಿಂದು'ಗಳೆಂಬ ಬಹುಜನರಿಗೆ ಅವರ ಸಂಸ್ಕೃತಿಯ ಮುದ್ರೆಯನ್ನೊತ್ತಿ ಸತ್ಯಧರ್ಮಗಳ

ಮೂರ್ತಿಯೆಂದು ಪ್ರಸಿದ್ಧನಾಗಿರುವ ಮರ್ಯಾದಾಪುರುಷೋತ್ತಮನ ಚರಿತ್ರೆಯನ್ನು ಕೊಟ್ಟಿರುವ ಮೂಲಭಾಷೆ ಯಾವದು? ಈ ದೇಶಕ್ಕೆ ಅತ್ಯಂತಪುರಾತನವಾದ ವೇದಗಳು, ಗೃಹ್ಯಸೂತ್ರಗಳು, ಸ್ಮೃತಿಗಳು-ಇವುಗಳನ್ನು ಒದಗಿಸಿಕೊಟ್ಟು ಧಾರ್ಮಿಕ ಪ್ರವೃತ್ತಿಗೆ ಉಗಮವಾಗಿರುವ ಭಾಷೆ ಯಾವದು? ಸಕಲಮಾನವರೇ ಅಲ್ಲ, ಸಕಲಪ್ರಾಣಿಗಳೂ ಒಬ್ಬ ಪರಮಾತ್ಮನಿಂದ ಸಿಡಿದುಬಂದಿರುವ ಚೈತನ್ಯದ ಕಿಡಿಗಳೆಂದು ಸಾರುವ ಉದಾತ್ತತತ್ತ್ವವನ್ನು ಬೋಧಿಸಿ ಭೂಮಂಡಲಕ್ಕೇ ಉಪಕಾರವನ್ನು ಮಾಡಿರುವ ಉಪನಿಷತ್ತುಗಳ ಭಾಷೆಯಾವದು? ಭರತಖಂಡದಲ್ಲೆಲ್ಲ ಅಧ್ಯಾತ್ಮದ ಆಕಾಶದಲ್ಲಿ ಬೆಳಗುತ್ತಿರುವ ತಾರೆಗಳಂತೆ ಆಗಿಹೋಗಿರುವ ಮತ್ತು ಅಲ್ಲಲ್ಲಿ ಅವತರಿಸುತ್ತಿರುವ ಸಾಧುಸಂತರುಗಳ ಹೃದಯದಲ್ಲಿ ಭಕ್ತಿಯ ಅಮೃತದ ಉಕ್ಕಂದವು ಚಿಮ್ಮುವಂತೆ ಮಾಡಿ, ದೇಶಭಾಷೆಗಳಿಗೂ ಕಳೆಯನ್ನು ಕೊಟ್ಟಿರುವ ಭಗವದ್ಗೀತೆ, ಭಾಗವತದಂಥ ಪುರಾಣಗಳು ಯಾವಭಾಷೆಯಲ್ಲಿ ಉದಯವಾಗಿವೆ? ಕಾವ್ಯ, ಚಂಪೂನಾಟಕಾದಿ ಸಾಹಿತ್ಯ ಗ್ರಂಥಗಳೂ, ಜ್ಯೋತಿಷ, ಗಣಿತ, ದಂಡನೀತಿ, ಆರ್ಥಿಕವಿಚಾರಗಳು-ಮುಂತಾದ ಲೌಕಿಕವಿಚಾರಗಳ ತವರುಮನೆಯಾಗಿ ಜೈನ, ಬೌದ್ಧ, ಮುಸಲ್ಮಾನರೇ ಮುಂತಾದ ಸಕಲಮತಗಳವರೂ ತಮ್ಮ ತಮ್ಮ ಲೇಖನಿಯನ್ನು ವ್ಯಾಪಾರಮಾಡುವದಕ್ಕೆ ಸ್ಥಳವನ್ನು ಕೊಟ್ಟಿರುವ ಭಾಷೆ ಯಾವದು?

ಈ ಭಾಷೆಯನ್ನು 'ಹದಿನಾಲ್ಕರಲ್ಲಿ ಇದೂ ಒಂದು ಭಾಷೆ' ಎಂದು ಎಣಿಸುವದು ಸರಿಯಾದೀತೆ? ಎಲ್ಲಾ ಭಾಷೆಗಳಿಗೂ ಜೀವಕಳೆಯನ್ನು ಕೊಡುತ್ತಿರುವ ಅಮರಭಾಷೆಯನ್ನು ಮೃತಭಾಷೆಯೆನ್ನಬಹುದೆ? ಈ ಲೋಕದ ಸಕಲ ವಿದ್ಯಾನಿಲಯಗಳಲ್ಲೆಲ್ಲ ಗೌರವವನ್ನು ಪಡೆದಿರುವ ಈ ಭಾಷೆಗೆ ನಾವೇ ಹೊರತಾಗಿ ಆತ್ಮವಂಚಕರಾಗಬಹುದೆ? ಆಗ್ನೇಯಪ್ರಾಂತಗಳು, ಚೀನ, ಜಪಾನು-ಮುಂತಾದ ದೇಶಗಳಿಗೆ ಸಂಸ್ಕೃತಿಯ ಸಂಬಂಧವನ್ನುಂಟುಮಾಡಿರುವ ಈ ವಿಶ್ವಬಾಂಧವ್ಯದ ಭಾಷೆಯನ್ನು ಬಿಟ್ಟು ನಾವು ಪರಿಚ್ಛಿನ್ನರಾಗಿ ಸೊರಗುವದು ಯುಕ್ತವೆನಿಸೀತೆ? ಇನ್ನಾದರೂ ಎಚ್ಚತ್ತು ಈ ಭಾಷೆಯನ್ನು ಎಲ್ಲರೂ ಸೇರಿ ಬೆಳೆಯಿಸಿಕೊಳ್ಳಿರಿ. ಹೃದಯದಿಂದ ರಕ್ತವನ್ನು ಪಡೆಯುವ ಅಂಗಗಳಂತೆ ಇದರಿಂದ ಚೈತನ್ಯರಸದ ಕಾಲುವೆಗಳನ್ನು ನಿಮ್ಮ ನಿಮ್ಮ ಭಾಷೆಗಳಿಗೆ ಹರಿಯಿಸಿಕೊಂಡು ಅಮೃತಪುತ್ರರಾಗಿರಿ !

* * * * *

# 31. ಭಾಷೆಗಳ ಗದ್ದಲ

ಜನರೆಲ್ಲರೂ ಸೇರಿ ಒಗ್ಗಟ್ಟಾಗಿರಬೇಕೆಂದು ಒಂದು ಕೋಟೆಯನ್ನು ಕಟ್ಟುವದಕ್ಕೆ ಮೊದಲುಮಾಡಿದರಂತೆ; ಅದನ್ನು ಅರ್ಧಕಟ್ಟಿ ರಾತ್ರೆ ಮಲಗಿ ನಿದ್ರೆಹೋದವರು ಏಳುವದರೊಳಗೆ ದೈವವಿಲಾಸದಿಂದ ಅವರಲ್ಲಿ ಪತ್ರಿಯೊಬ್ಬನದೂ ಒಂದೊಂದು ಭಾಷೆಯಾಗಿ ಒಬ್ಬರಮಾತು ಒಬ್ಬರಿಗೆ ತಿಳಿಯದಂತೆ ಆಗಿಬಿಟ್ಟಿತಂತೆ! ಹಾಗಾಗಿದೆ, ಭಾರತದೇಶದ ದೌರ್ಭಾಗ್ಯ! ಭಾರತದವರೆಲ್ಲರನ್ನೂ ಹೊಂದಿಸುವ ಸಂಪರ್ಕಭಾಷೆಯು ಬೇಕು- ಎಂಬ ಸದುದ್ದೇಶದಿಂದ ಪ್ರಾರಂಭಿಸಿದ ಸರಕಾರವು ಅದೇನು ಮಾಯೆಯೊ, ಹಿಂದಿಯನ್ನು ಆಡಳಿತದ ಭಾಷೆಯಾಗಿರಲೆಂದು ಆರಿಸಿಕೊಂಡಿತು; ಇಲ್ಲಿಯ ಬಹುಸಂಖ್ಯಾಕಪ್ರಜೆಗಳನ್ನು ಯಾರೋ 'ಹಿಂದು'ಗಳೆಂದು ಕರೆದದ್ದನ್ನು ನಾವೂ ಒಪ್ಪಿ ಕೊಂಡೆವು. ಭಾಷೆಯೂ 'ಹಿಂದಿ'ಯಾಗಿರಲೆಂದೆವು; ಎಲ್ಲವೂ ಹಿಂದು ಮುಂದಾಯಿತು.

''ಹಿಂದಿಯು ಬಹುಜನರಿಗೆ ಸುಲಭವಾಗಿ ತಿಳಿಯುತ್ತಿರುವ ಭಾಷೆ; ಶಾಸನದಲ್ಲಿ ಅಂಗೀಕೃತವಾದ ಭಾಷೆ. ಇಂಗ್ಲಿಷು ಯಾವದೊಂದು ಪ್ರಾಂತದ ಭಾಷೆಯೂ ಅಲ್ಲ. ಪ್ರಾಂತೀಯಭಾಷೆಗೆ ಸಹಾಯಕವೂ ಅಲ್ಲ. ಅದನ್ನು ಹಿಂದಿಯು ಬೇಡವೆನ್ನುವವರ ಮೇಲೆ ಹೇರಬಾರದು!'' ಎಂದು ಕೆಲವರು. ''ಶಾಸನವೆಂದರೇನು ಶಾಸ್ತ್ರವೆ?'' ಹದಿನೈದು ವರ್ಷಗಳಲ್ಲಿ ಹದಿನೆಂಟು ರೂಪಾಂತರವನ್ನು ಹೊಂದಿದ ಶಾಸನವನ್ನು ಮುಟ್ಟಲಾಗದೆಂಬುದು ಎಲ್ಲಿಯ ಮಡಿವಂತಿಕೆ? ಭಾಷೆಯೆಂಬುದು ಸ್ಕೂಲಿನಲ್ಲಿ ಕಲಿಯುವದಲ್ಲ. ಜನರು ಆಡುವ ಮಾತದು. ಇಂಗ್ಲಿಷು ಜನರಿಗೆ ಆಗಲೆ ಬಂದು ಬಿಟ್ಟಿದೆ; ಈಗಿನ ಬಳಕೆಗೆ ಬೇಕಾದ ಎಷ್ಟೋ ಮಾತುಗಳೂ ಆ ಭಾಷೆಯಲ್ಲಿವೆ. ಈವರೆಗೆ ಇಂಗ್ಲಿಷು ಸರಕಾರದ ಭಾಷೆಯಾಗಿತ್ತಲ್ಲ, ಅದು ಏಕೆ ಹಾಗೇ ಉಳಿಯ ಬಾರದು? ಸಾಮಾನ್ಯ ಜನರಿಗೆ ಸಂಪರ್ಕಭಾಷೆ ಏಕೆ ಬೇಕು? ದೇಶಭಾಷೆಯೇ ಸಾಕಲ್ಲವೆ?'' ಎಂದು ಮತ್ತೆ ಕೆಲವರು. ''ಹಿಂದಿ ಬಂದು ಬಿಟ್ಟಿದೆ, ಅದೂ ಇಂಗ್ಲಿಷೂ ಎರಡೂ ಸರಕಾರದ ಭಾಷೆಯಾಗಿ ಜೊತೆಯಲ್ಲಿರಲಿ, ಹಿಂದಿಯಿಲ್ಲದ ಕಡೆಗಳಲ್ಲಿ ಇಂಗ್ಲಿಷೊಂದೇ ಇರಲಿ; ಪ್ರಕಟನೆಗಳು ಎರಡೂ ಭಾಷೆಗಳಲ್ಲಿರಲಿ'' ಎನ್ನುವವರು ಇನ್ನು ಕೆಲವರು! ''ಹಿಂದಿಯು ಬಹುಸಂಖ್ಯಾತರ ಭಾಷೆಯೆಂಬುದೊಂದು ಗತ್ತುಗಾರಿಕೆ. 1961ನೆಯ ಇಸವಿಯ ಜನಗಣತಿಯಂತೆ ಬಿಹಾರದೇಶದಲ್ಲಿ 153 'ತಾಯ್ನುಡಿ'ಗಳಿವೆಯೆಂದು ತಿಳಿದುಬಂದಿದೆ, ಭೋಜಪುರೀ, ಮೈಥಿಲೀ, ಮಾಗಧೀ- ಇವುಗಳು ಹಿಂದಿಯ ಮುಖ್ಯಪ್ರಭೇಧಗಳು; ಜನರಲ್ಲಿ 'ಭೋಜಪುರೀ'

ಭಾಷೆಯವರೇ ಹೆಚ್ಚು; ಬಿಹಾರ್, ಉತ್ತರಪ್ರದೇಶಗಳಲ್ಲಿರುವ ಬಹುಜನರು ಭೋಜಪುರಿಯನ್ನಾಗಲಿ ಮೈಥಿಲಿಯನ್ನಾಗಲಿ ಆಡುತ್ತಿಲ್ಲ; ಅವರು ಉರ್ದು, ಇಂಗ್ಲಿಷು ಮಿಶ್ರಿತ ಪುರೆಹಿಂದಿಯನ್ನು ಆಡುತ್ತಾರೆ. ಹಿಂದಿ ಆಡುವವರೆಂದು ನಾವು ಎಣಿಸುವವರಲ್ಲಿ ಅವರವರಿಗೇ ಅರ್ಥವಾಗದಷ್ಟು ಭಿನ್ನಭಿನ್ನಭಾಷಾಶಾಖೆಗಳಿವೆ. ಮತ್ತೊಬ್ಬರನ್ನು ಹಿಂದೀ ಓದಿರೆಂದು ಒತ್ತಾಯಿಸುವದೇಕೆ?'' ಎಂದು ಮತ್ತೂ ಕೆಲವರು ಕೇಳುತ್ತಿದ್ದಾರೆ.

ಅಣ್ಣಗಳಿರ, ಇಂಗ್ಲಿಷರು ಇಲ್ಲಿಗೆ ಬಂದಾಗ ನಮ್ಮ ದೇಶದಲ್ಲಿ ಹಲವು ಸಂಸ್ಕೃತ ಪಾಠಶಾಲೆಗಳಿದ್ದವು; ಮುಸಲಮಾನರು ಉರ್ದುಭಾಷೆಯನ್ನಾಡುತ್ತಿದ್ದರು, ತಮ್ಮ ವಿದ್ಯಾಲಯಗಳಲ್ಲಿ 'ಅರಬಿ' ಭಾಷೆಯನ್ನು ಕೆಲವರು ಕಲಿಯುತ್ತಿದ್ದರು. **ಮಕಾಲೆ** ಮಹಾಶಯನ ಶಿಫಾರಿಸಿನಿಂದ ಸಂಸ್ಕೃತಕ್ಕೆ ಕೊಡುವ ಪ್ರೋತ್ಸಾಹವು ನಿಂತಿತು. ದೇಶಭಾಷೆ ಗಳನ್ನೆಲ್ಲ ಒಂದುಗೂಡಿಸಿ ಒಂದೇ ಸಂಸ್ಕೃತಿಯವರೆಂಬ ಹೆಮ್ಮೆಯನ್ನು ತಂದು ಕೊಡುತ್ತಿದ್ದ ತಾಯಿಬೇರಾದ ಸಂಸ್ಕೃತವು ಒಣಗುತ್ತಾಬಂದಿತು. ಇಂಗ್ಲಿಷು ವಿದ್ಯಾಭ್ಯಾಸದಿಂದ ಇಲ್ಲಿಯ ಜನರು ನಿರಾಯಾಸವಾಗಿ ಕ್ರಿಸ್ತಿಯನ್ ಮತದವರಾಗುವರೆಂಬ ನಂಬಿಕೆ ಮಕಾಲೆಗೆ ಇತ್ತೆಂಬುದು ಅವನು ತನ್ನ ತಂದೆಗೆ ಬರೆದ ಪತ್ರವೊಂದರಿಂದ ಈಗ ಗೊತ್ತಾಗಿದೆ. ಆದರೆ ಇಂಗ್ಲಿಷುವಿದ್ಯಾಭ್ಯಾಸದಿಂದ ಇಂಗ್ಲಿಷರೇ ನಾಸ್ತಿಕರಾದಂತೆ ನಮ್ಮ ದೇಶವದವರೂ ನಾಸ್ತಿಕರಾದರೆಂಬ ಅಂಜಿಕೆಯು ಪಾಪ! ಮಕಾಲೆಗೆ ಇರಲಿಲ್ಲ. ಈಗ ಆದದ್ದು ಆಗಿಹೋಗಿದೆ. ಇಂಗ್ಲಿಷನ್ನು ಕಲಿಯಬೇಡಿರೆಂದಾಗಲಿ, ದೇಶಭಾಷೆಗಳನ್ನು ಬೆಳೆಯಿಸಬೇಡಿರೆಂದಾಗಲಿ ನಾನು ಹೇಳುತ್ತಿಲ್ಲ. ನಿಮ್ಮ ದೇಶದ ಸಂಸ್ಕೃತಿಯು ಬದುಕಬೇಕಾದರೆ ಕೂಡಲೆ ಸಂಸ್ಕೃತವನ್ನು ಓದುವದಕ್ಕೆ ಮೊದಲುಮಾಡಿರಿ. ಅದನ್ನು ಬೇಗನೆ ಕಲಿಯಬಹುದು; ಅದರಿಂದ ದೇಶಭಾಷೆಗಳನ್ನೂ ಬೆಳೆಯಿಕೊಳ್ಳಬಹುದು, ದೇಶದ ಸಂಸ್ಕೃತಿಯನ್ನೂ ಉಜ್ಜೀವಿತವಾಗಿ ಮಾಡಿಕೊಳ್ಳಬಹುದು- ಎಂದಿಷ್ಟೇ ನನ್ನ ವಾದ! ಇದಕ್ಕೆ ಉದಾಹರಣೆಗಳನ್ನು ಕೊಡುತ್ತಾಹೋಗುವೆನು, ದಯವಿಟ್ಟು ಕೇಳಿರಿ. **ಮೊದಲನೆಯದಾಗಿ, ರಾಷ್ಟ್ರ ವ್ಯವಹಾರಕ್ಕೆ ಸಂಸ್ಕೃತವು ಅವಶ್ಯವಾಗಿಬೇಕು.** ಇದನ್ನು ಸುತಃಟಗೊಳಲಿಸುವುದಕ್ಕಾಗಿ ರಾಜಕೀಯವ್ಯವಹಾರದ ಪಾರಿಭಾಷಿಕಶಬ್ದಗಳನ್ನು 'ಹಿಂದಿ' ಎಂಬ ಹೆಸರಿನಿಂದ ಶಾಸನದಲ್ಲಿ ಸೇರಿಸಿರುವ ಕೆಲವು ಸಂಸ್ಕೃತಶಬ್ದಗಳನ್ನು ಇಲ್ಲಿ ಕೊಡುವೆನು;

accusation-ಅಭಿಯೋಗ, adhoc-ತದರ್ಥ, adjourn-ಅವಕದಾನ,

ಕಾಲದಾನ administrative function-ಪ್ರಶಾಸನೀಯಕೃತ್ಯ adoption-ದತ್ತಕಗ್ರಹಣ, advice-ಮನ್ತ್ರಣಾ, advocate-ಅಭಿವಕ್ತಾ, air navigation-ವಿಮಾನಪರಿವಹನ, alienation-ಅನ್ಯಸಂಕ್ರಾಮಣ, amendment-ಸಂಶೋಧನ, arbitrator-ಮಧ್ಯಸ್ಥ ನಿರ್ಣಯ, audit-ಲೇಖಾಪರೀಕ್ಷಾ, ಗಣನಾಪರೀಕ್ಷಾ, ballot- ಶಲಾಕಾ, betting-ಪಣಕ್ರಿಯಾ, bill of lading-ವಹನಪತ್ರ, broadcasting- ಪ್ರಸಾರಣ, bye-election- ಉಪನಿರ್ವಾಚನ, capital-ಮೂಲಧನ, chairman-ಸಭಾಪತಿ, chief commissioner- ಮುಖ್ಯಆಯುಕ್ತ, chief justice-ಮುಖ್ಯ ನ್ಯಾಯಾಧಿಪತಿ, citizenship-ನಾಗರಿಕತಾ, civil court-ವ್ಯವಹಾರ ನ್ಯಾಯಾಲಯ, coinage-ಟಙ್ಕಣ, commute-ಲಘುಕರಣ, company -ಸಮುದಾಯ, comptroller and auditor general-ನಿಯನ್ತ್ರಕ ಮಹಾಲೇಖಪರೀಕ್ಷಕ, constituent assembly-ಸಂವಿಧಾನ ಸಭಾ, contingency fund-ಆಕಸ್ಮಿಕತಾ ನಿಧಿ, countervailing duty- ಪ್ರತಿಶುಲ್ಕ, stamp duty -ಮುದ್ರಾಂಕಶುಲ್ಕ, employer's liability-ನಿಯೋಜಕದಾತವ್ಯ, local board- ಸ್ಥಾನೀಯಮಣ್ಡಲೀ, mineral-ಖನಿಜ, misbehaviour-ದುರಾಚಾರ, municipal tramways-ನಗರರಥಾಯನ, pension-ನಿವೃತ್ತಿ ವೇತನ

ಇತ್ಯಾದಿ, ಇತ್ಯಾದಿ. ಹೀಗೆ ಸಂಸ್ಕೃತಶಬ್ದಗಳನ್ನು ರಾಶಿರಾಶಿಯಾಗಿ ಹಾಕಿಕೊಂಡು ಅವುಗಳನ್ನು ಆಚರಣೆಗೆ ತರಬಹುದಾದರೆ ಸರಕಾರದ ಭಾಷೆಯು ಸಂಸ್ಕೃತವೇ ಆದರೇನು? ಅದರಿಂದ ಯಾರಿಗಾದರೂ ಆತಂಕವಾದೀತೇನು? ಇದನ್ನು ವಾಚಕರೆಲ್ಲರೂ ಸಾವಧಾನವಾಗಿ ಪರ್ಯಾಲೋಚಿಸಬೇಕು.

ಸರಕಾರದವರು ಗೊತ್ತುಮಾಡಿದ ವಿವಿಧಭಾಷೆಗಳ ಪ್ರತಿನಿಧಿಗಳಾಗಿದ್ದ ನಲವತ್ತೊಂದುಜನ ಪ್ರತಿಭಾವಂತರು ಏರ್ಪಡಿಸಿಕೊಂಡ ಭಾಷಾಸಮ್ಮೇಳನದಲ್ಲಿ ಅಂಗೀಕೃತವಾದ ಪಾರಿಭಾಷಿಕಶಬ್ದಗಳಿವು. ಆದರೆ ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ಕೌಟಿಲ್ಯನ ಅರ್ಥಶಾಸ್ತ್ರ-ಮುಂತಾದವುಗಳಲ್ಲಿ ಇದೇ ಜಾತಿಯ ಪದಗಳು ಯಾವವಾದರೂ ಇದ್ದವೆ?- ಎಂಬುದು ಇಲ್ಲಿ ಸ್ಪಷ್ಟವಾಗಿಲ್ಲ. ಹೇಗೆ ಆಗಲಿ, ಎಲ್ಲಾ ಭಾಷೆಯ ಜನರಿಗೂ ಸುಲಭವಾಗಿ ಅರ್ಥವಾಗಬಹುದೆಂದು ಸಮ್ಮೇಳನದವರು ಆರಿಸಿಕೊಂಡ ಶಬ್ದಗಳಿವು ಎಂಬುದಕ್ಕಂತೂ ಸಂಶಯವಿಲ್ಲ. ಸಂಸ್ಕೃತಶಬ್ದಗಳೇ ಬಹುಜನಸಂಮತವೆಂಬುದಕ್ಕಂತೂ ಇದೊಂದು ದೊಡ್ಡಸಾಕ್ಷಿ-ಎನ್ನಬಹುದಲ್ಲವೆ?

ಈಗ ಇನ್ನೊಂದು ವಿಚಾರ; ಸರಕಾರದವರು ಒಂದು ಸಮಿತಿಯನ್ನೇರ್ಪಡಿಸಿ ಸಂಸ್ಕೃತದ ವಿಷಯಕ್ಕೆ ವರದಿಮಾಡುವಂತೆ ಕೇಳಿಕೊಂಡರು. ಆ ಭಾಷೆಯ ಅಭಿವೃದ್ಧಿಯ ವಿಷಯಕ್ಕೆ ವಿವಿಧಪ್ರಾಂತಗಳಿಂದ ಮತಸಂಗ್ರಹವನ್ನು ಮಾಡಿದ ಸಮಿತಿಯವರು **ಸಂಸ್ಕೃತವೂ ಒಂದು ರಾಷ್ಟ್ರಭಾಷೆಯಾಗಿ ಅಂಗೀಕೃತವಾದರೆ ಒಳ್ಳೆಯದೆಂದು ಶಿಫಾರಸುಮಾಡಿದರು.** ಅದನ್ನೂ ಕಡೆಗಣಿಸುವದಕ್ಕಿಲ್ಲವಷ್ಟೆ?

ಮುಂದಿನ ಲೇಖನದಲ್ಲಿ ಮತ್ತೊಂದು ದೃಷ್ಟಿಯಿಂದ ಈ ವಿಚಾರವನ್ನು ಮುಂದುವರೆಯಿಸುವೆನು.

* * * * *

# 32. ದೇಶಭಾಷೆಗಳಿಗೆ ಸಂಸ್ಕೃತದ ನೆರವು

ರಾಷ್ಟ್ರಭಾಷೆಯು ಯಾವದೇ ಆಗಲಿ, ಅದಕ್ಕೆ ಸಂಸ್ಕೃತದ ನೆರವು ಅಗತ್ಯ-ಎಂಬುದನ್ನು ಹಿಂದಿನ ಲೇಖನದಲ್ಲಿ ತಿಳಿಸಿದ್ದೆನು. ಹಿಂದಿಯು ಹಿಂದಿಯಾಗಿ, ಹದಿಮೂರರ ಜೊತೆಗೆ ಹದಿನಾಲ್ಕನೆಯ ಭಾಷೆಯಾಗಿ, ಉಳಿದುಕೊಂಡರೂ ಅದಕ್ಕೆ ಸಂಸ್ಕೃತದ ನೆರವಿಲ್ಲದೆ ಬದುಕಿರುವುದಕ್ಕೆ ಆಗುವಂತಿಲ್ಲವೆಂಬುದು ಎಲ್ಲರಿಗೂ ತಿಳಿದೇ ಇದೆ. ಹಿಂದಿಯ ಜನರು ತಮ್ಮ ಭಾಷೆಗೆ ಎಷ್ಟೋ ಸಂಸ್ಕೃತ ಗ್ರಂಥಗಳನ್ನು ಪರಿವರ್ತನೆ ಮಾಡಿಕೊಂಡಿರುತ್ತಾರೆ; ಆದರೆ ಅವುಗಳಲ್ಲಿ ಸಂಸ್ಕೃತಶಬ್ದಗಳನ್ನು ಇದ್ದ ಹಾಗೆಯೇ ಇಟ್ಟುಕೊಂಡು ಕೊನೆಯಲ್ಲಿ 'ಹೈ' 'ನಹೀ' ಎಂತ ಜೋಡಿಸಿದ ಭಾಷಾಂತರೀಕರಣವೇ ಹೇರಳವಾಗಿರುತ್ತದೆ. ಇದನ್ನು ತಿಳದಿರುವದರಿಂದಲೇ ಏನೊ, ಸರಕಾರದವರೂ 'ಹಿಂದಿ ಭಾಷೆಯನ್ನು ಬೆಳೆಯಿಸುವದಕ್ಕೆ ಮುಖ್ಯವಾಗಿ ಸಂಸ್ಕೃತವನ್ನೇ ಉಪಯೋಗಿಸಿ ಕೊಳ್ಳಬೇಕು' ಎಂಬ ವಿಧಿಯನ್ನು ಏರ್ಪಡಿಸಿಕೊಂಡರು.

ಹೇಗೆ ಇರಲಿ, ಈಗ್ಗೆ ನಮಗೆ ತಿಳಿಯಬರುವ ಹಿಂದಿ ಎಂದರೆ 'ಸಂಸ್ಕೃತ ಮಿಶ್ರಿತ ಅಪಭ್ರಂಶಭಾಷೆ' ಎಂದೇ ಹೇಳಬೇಕಾಗಿದೆ. ಇದಕ್ಕೆ ಉದಾಹರಣೆಯಾಗಿ ಇಲ್ಲಿ ಒಂದು ಅವತರಣಿಕೆಯನ್ನು ಕೊಡುವೆನು.

''ಉಪರ್ಯುಕ್ತ ಕಥನಾನುಸಾರ **ಹಮಾರೇ** ದೇಶಮೇ ಅತಿ ಪ್ರಾಚೀನ ಕಾಲಮೇ-ಇತನೇ ಪ್ರಾಚೀನಕಾಲಮೇ **ಜಬ ಕಿ** ಪ್ರಾಚೀನ ಭೂಭಾಗಮೇ, **ಜೋ** ರಾಷ್ಟ್ರ **ಆಜ ಅಗ್ರಗಣ್ಯಕಹೇ ಜಾತೇ ಹೈ, ಉನಮೇಸೇ ಕಿತನೋಂ ಕಾ ಇಸ** ಸ್ವರೂಪಮೆ ಉದಯಭೀ **ನಹೀ ಹುಆ ಥಾ, ಉಸಕಾಲಮೇ-ಕ್ಯಾ** ಸಂಸಾರಕಾ **ಕೋಈ**

ಕಾರಣ **ಹೈ** ಯದಿ **ಹೈತೋ ವಹ** ಚೇತನ ಹೈ ಯಾ ಜಡ. **ಉಸಕೇ** ಸಾಥ ಮನುಷ್ಯಕಾ **ಕ್ಯಾ** ಸಂಬನ್ಧ **ಹೈ, ಉಸಕಾ** ಸಾಕ್ಷಾತ್ಕಾರ **ಹೋ ಸಕತಾ ಹೈ ಯಾ ನಹೀ, ಯದಿ ಹೋ ಸಕತಾ ಹೈ ತೋ ಕಿಸ ಉಪಾಯಸೇ?' ಇಸ ಪ್ರಕಾರಕೆ** ಗಹನ ತಾತ್ವಿಕ ವಿಷಯೋಂ ಪರ ಚರ್ಚಾ **ಚಲಾಕರ** ಏತದ್ವಿಷಯಕ ಸಿದ್ಧಾನ್ತ ನಿಶ್ಚಿತಕಿಯಾ **ಜಾತೇಥೇ!''**

ಮೇಲಿನ ಮಹಾವಾಕ್ಯದಲ್ಲಿ ಕಪ್ಪಕ್ಷರದಲ್ಲಿರುವ ಶಬ್ದಗಳು ಮಾತ್ರ ಹಿಂದಿ, ಅಥವಾ ಅಪಭ್ರಂಶಸಂಸ್ಕೃತ; ಮಿಕ್ಕದ್ದೆಲ್ಲವೂ ಸುಸಂಸ್ಕೃತ. **ದೇಶಭಾಷೆಗಳಲ್ಲಿ ಒಂದೆನಿಸಿರುವ ಹಿಂದಿಗೆ ಸಂಸ್ಕೃತವೇ ಉಸಿರು ಎನ್ನುವುದಕ್ಕೆ ಮತ್ತೆ ಬೇರೆ ಸಾಕ್ಷಿ ಬೇಕಿಲ್ಲವಷ್ಟೆ?**

ಈಗ ನಮ್ಮ ದೇಶದ ಭಾಷೆಯಾಗಿರುವ ಕನ್ನಡದತ್ತ ತಿರುಗೋಣ. ಕನ್ನಡವೆಂಬ ಮಾತು 'ಕರ್ಣಾಟ'ವೆಂಬುದರ ಅಪಭ್ರಂಶವೆಂದು ಕೆಲವರು, ಅದನ್ನೇ ಕರ್ಣಾಟವೆಂದು ಸಂಸ್ಕೃತಕ್ಕೆ ತಿರುಗಿಸಿಕೊಂಡಿದಾರೆಂದು ಕೆಲವರು-ಹೀಗೆ ವಿವಾದವಿರುವದನ್ನು ಇಲ್ಲಿ ವಿಚಾರಿಸಬೇಕಾದದ್ದಿಲ್ಲ. ಕನ್ನಡಕ್ಕೆ ಸಂಸ್ಕೃತದ ಸಹಾಯವು ಬೇಕೆ, ಸಂಸ್ಕೃತದ ಹಂಗಿಲ್ಲದೆಯೇ ಕನ್ನಡವು ಬೆಳೆಯಬಲ್ಲದೆ?- ಎಂಬಿದನ್ನು ಸ್ವಲ್ಪ ನೋಡೋಣ.

ಕನ್ನಡವು ಗ್ರಂಥಸ್ಥಭಾಷೆಯಾಗುವಹೊತ್ತಿಗೆ ಅದಕ್ಕೆ ವ್ಯಾಕರಣ, ಛಂದಸ್ಸು, ಅಲಂಕಾರ-ಮುಂತಾದ ಶಾಸ್ತ್ರಗಳು ಬೇಕೆನಿಸಿತು. ಆ ಶಾಸ್ತ್ರಗಳನ್ನು ಬರೆಯುವದಕ್ಕೆ ಹೊರಟಿರುವವರು ಸಂಸ್ಕೃತದಲ್ಲಿ ಹೆಚ್ಚಿನ ಅಭಿಮಾನವಿದ್ದವರೆನ್ನುವದಕ್ಕೆ ಯಾವ ಸಂಶಯವೂ ಇಲ್ಲ. ಸಂಸ್ಕೃತದಲ್ಲಿಯೇ ಬರೆದಿರುವ ಶಬ್ದಸ್ಮೃತಿ, ಶಬ್ದಾನುಶಾಸನ ಮುಂತಾದ ಗ್ರಂಥಗಳು ಇದಕ್ಕೆ ಸಾಕ್ಷಿ. ಸದ್ಯಕ್ಕೆ ಅವುಗಳನ್ನು ಬಿಟ್ಟು ಕನ್ನಡದಲ್ಲಿಯೇ ಇರುವ ಎರಡು ವ್ಯಾಕರಣಗ್ರಂಥಗಳನ್ನು ಇಲ್ಲಿ ಪರಿಶೀಲಿಸೋಣ.

ಕನ್ನಡಕ್ಕೆ ವ್ಯಾಕರಣವನ್ನು ಬರೆದಿರುವವರೆಲ್ಲರೂ ಗ್ರಂಥಕ್ಕೆ ಸಂಸ್ಕೃತದ ಹೆಸರನ್ನೇ ಇಟ್ಟುಕೊಂಡಿರುತ್ತಾರೆ. ಉದಾಹರಣೆಗೆ 'ಶಬ್ದಮಣಿದರ್ಪಣ' 'ಶಬ್ದಾದರ್ಶ' ಎಂಬ ಗ್ರಂಥಗಳಿಗೆ ಕನ್ನಡದ ಹೆಸರನ್ನೇನೂ ಗ್ರಂಥಕರ್ತರು ಇಟ್ಟಿಲ್ಲ.

ವ್ಯಾಕರಣಶಬ್ದವಂತೂ ಸಂಸ್ಕೃತವಷ್ಟೆ? ಶಬ್ದಮಣಿದರ್ಪಣದಲ್ಲಿ ಉದಾಹಸಿರುವ ಒಂದು ಪದ್ಯವು ಹೀಗಿದೆ.

**ಪಳಗನ್ನಡದ ಪದಂಗೊಳೆ**
**ಕೊಳೆಸಕ್ಕದಮಂ ತಗುಳ್ಚಿ ಜಾಣೆಡೆ ಮುತ್ತಂ।**

**ಮೆಳಸಂ ಕೋದಂತಿರೆ ಪೇ**
**ಳ್ವಳಿಗವಿಗಳ ಕವಿತೆ ಬುಧರ ನೆರ್ದೆಗೊಳಿಸುಗುಮೆ ॥**

ಇದು ಸಮಾಸದ ಉತ್ತರಪದದ ಆದಿಯಲ್ಲಿರುವ ಕಕಾರಕ್ಕೆ ಗಕಾರಾದೇಶವು ಬಂದಿರುವದಕ್ಕೆ ಉದಾಹರಣೆ. ಹಳಗನ್ನಡದ ಪದಕ್ಕೆ ಕೊಳೆಸಕ್ಕದ (ಸಂಸ್ಕೃತ) ತಗುಲಿಸಿದರೆ ಮುತ್ತನ್ನೂ ಮೆಣಸನ್ನೂ ಪೋಣಿಸಿದಂತೆ ಆಗುವದೆಂದು ಹಳಿಯುವ ಈ ಸಂದರ್ಭದಲ್ಲಿಯೇ 'ಕೊಳೆಸಕ್ಕದ'ವೆಂಬ ಶಬ್ದವಿದೆ; 'ಅಳಿಗವಿ' ಎಂಬ ಅರಿಸಮಾಸವಿದೆ. ಸಂಸ್ಕೃತವನ್ನು ತಪ್ಪಿಸಿಕೊಳ್ಳುವದು ಈ ಕವಿಗೂ ಆಗಿಲ್ಲ; ಮಂಗಲಶ್ಲೋಕದಲ್ಲಿ ನೋಡಿದರೆ ಸಂಸ್ಕೃತಶಬ್ದಗಳೇ ತುಂಬಿತುಳುಕುತ್ತಿವೆ:

**ಶ್ರೀವಾಗ್ದೇವಿಗೆ ಶಬ್ದಾದಿ**
**ನಾವಾವಿಂದ್ರಿಯವ ವಿಷಯಮಂ ಶ್ರೋತ್ರದೊಳು।**
**ದ್ಭಾವಿಪ ನಿರ್ಮಲಮೂರ್ತಿಗಿ**
**ಳಾವಂಧ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ ॥**

ಇಲ್ಲಿ 'ಅವಾ' 'ಅಪ್ಪೆಂ' ಎರಡು ಮಾತುಗಳು ಮಾತ್ರ ಕನ್ನಡ !

ಇನ್ನು ಪಾರಿಭಾಷಿಕಶಬ್ದಗಳತ್ತ ತಿರುಗೋಣ. 'ಪ್ರಾಸ, ಛಂದಸ್ಸು, ಅನ್ವಯ, (6) ಸಂಬಂಧ, ಅಭಿದೇಯ, ಶಕ್ಯಾನುಷ್ಠಾನ, ನಿಜೇಷ್ಟಸಿದ್ಧಿ (7) ಸಂಽ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ (8-) ಇವು **ಪೀಠಿಕೆ** ಯಲ್ಲಿರುವ ಪಾರಿಭಾಷಿಕಶಬ್ದಗಳು, 'ಅಕ್ಕರ', 'ವರ್ಣ', 'ಸ್ವರ', 'ವ್ಯಂಜನ', 'ಸವರ್ಣ', 'ಹ್ರಸ್ವ', 'ಽೀರ್ಘ', 'ಪ್ಲುತ' 'ನಾಮಿ', 'ಅನುಸ್ವಾರ', 'ವಿಸರ್ಗ', 'ವರ್ಗ', 'ಅನುನಾಸಿಕ', 'ಆದೇಶ', 'ಪದ', 'ವಿಭಕ್ತಿ'-ಇವು **ಸಂಜ್ಞಾಪ್ರಕರಣ**ದಲ್ಲಿರುವವು. ಹೀಗೆಯೇ 'ಕೃತ್', 'ತದ್ಧಿತ', 'ಭೂತಭವಿಷ್ಯ'-ಮುಂತಾದ ಸಂಸ್ಕೃತ ವ್ಯಾಕರಣದ ಶಬ್ದಗಳೇ ಇಲ್ಲಿ ಧುಮುಕಿವೆ. ಹಚ್ಚೇಕೆ? ಕನ್ನಡಕ್ಕೆ ಹೊಂದಲಿ, ಹೊಂದದಿರಲಿ- ಈ ಪಾರಿಭಾಷಿಕಶಬ್ದಗಳೇ ನಮಗೆ ಬೇಕು; ದ್ವಿವಚನವು ಕನ್ನಡದಲ್ಲಿಲ್ಲದಿದ್ದರೂ ಅದನ್ನೂ ಗ್ರಹಿಸಬೇಕು! ಸಂಸ್ಕೃತಶಬ್ದಗಳನ್ನು ಕನ್ನಡದಲ್ಲಿ ನೇರಾಗಿ ಅಥವಾ ಅಪಭ್ರಂಶವಾಗಿ ಉಪಯೋಗಿಸುವದಕ್ಕೆ ನಿಯಮಗಳೂ ಬೇಕು.

ಇದಂತಿರಲಿ. ಕವಿಗಳು ಪ್ರಯೋಗಿಸಿರುವ 'ಗೂಢ' ಪದಗಳಿಗೆ ಅರ್ಥವನ್ನು ಬರೆದಿರುವದು ಹೀಗೆ;- 'ಪರ್ಪರಿಕೆಯೆಂದು ಕರ್ಕಶತೆ', 'ನಿಕ್ಕುವವೆಂದು

ನಿಶ್ಚಯುಮಮ್', 'ನಿಗ್ಗಮುವೆಂದು ಗಜದಂತಂ', 'ನೆಲಕಲನೆಂದು ಲೋಭಿ', 'ಪನ್ನತಿಕೆಯೆಂದು ಪರಾಕ್ರಮಂ', 'ಪುಗ್ಗಾಯ್ಲನೆಂದು ಗರ್ವಿತಂ', 'ಮುನ್ನೀರೆಂದು ಸಮುದ್ರಮ್', ಇಲ್ಲಿ ಕನ್ನಡವೇ ಕಷ್ಟವಾಗಿದೆ, ಸಂಸ್ಕೃತವೇ ತಟ್ಟನೆ ಅರ್ಥವಾಗುವಂತಿದೆ!

ಧಾತುಗಳಿಗೆ ಅರ್ಥವನ್ನು ಬರೆದಿರುವ ಬಗೆ ಹೀಗೆ; 'ಈ ಪ್ರದಾನೇ', 'ಓ ಸ್ನೇಹೇ', 'ಕಾ ರಕ್ಷಣೇ', 'ಕೀ ರಕ್ತ ಪಕ್ವೇ', 'ಮಿಸುಕು ಸ್ಪನ್ದನೇ', 'ಮುಸುಕು ಆವರಣೇ' ಇತ್ಯಾದಿ- ಸಂಸ್ಕೃತದಲ್ಲಿ ಭೀಮಕೃತವಾಗಿರುವ ಧಾತುಪಾಠದಂತೆಯೇ ಕರ್ಣಾಟಧಾತುವನ್ನು ಬರೆದಿದೇನೆಂದು ಪ್ರತಿಜ್ಞೆಮಾಡಿದ್ದರಿಂದ ಕನ್ನಡದ ಧಾತುವಿಗೆ ಸಂಸ್ಕೃತದಲ್ಲಿ ಅರ್ಥವನ್ನು ಬರೆಯಬೇಕಾಯಿತು!

ಇನ್ನು 'ಹೊಸಗನ್ನಡವ್ಯಾಕರಣ'ವಾದ **ಶಬ್ದಾದರ್ಶ**ದತ್ತ ಕಣ್ಣನ್ನು ಹೊರಳಿಸೋಣ. ಇದು 'ಕನ್ನಡ ಹೈಸ್ಕೂಲು ಹೆಡ್‌ಮಾಸ್ತರಾಗಿದ್ದ ಬಿ. ಮಲ್ಲಪ್ಪ- ಅವರಿಂದ ರಚಿಸಲ್ಪಟ್ಟಿತು' ಎಂದು ಸಂಸ್ಕೃತಕ್ಕೆ ಒಪ್ಪಾದ 'ಕರ್ಮಣಿ' ಪ್ರಯೋಗದಲ್ಲಿಯೇ ತಿಳಿಸಿಕೊಡಲಾಗಿದೆ, ಇದನ್ನು ಟೆಕ್ಸ್ಟ್‌ಬುಕ್ ಕಮಿಟಿಯವರು ಎರಡು ಸಲ ತಿದ್ದಿರುತ್ತಾರೆ, ಇದರಲ್ಲಿಯೂ ಶಬ್ದಮಣಿದರ್ಪಣದಂತೆಯೇ ಸಂಧಿ (ಲೋಪ, ಆಗಮ, ಆದೇಶ), ನಿತ್ಯ, ವಿಕಲ್ಪ ಪ್ರಕೃತಿಭಾವ, ಸಂಸ್ಕೃತಸಂಧಿಗಳು, ಪ್ರಾತಿಪದಿಕ, ಲಿಂಗವಚನವಿಭಕ್ತಿಪ್ರತ್ಯಯಗಳು- ಮುಂತಾದ ಸಂಸ್ಕೃತವ್ಯಾಕರಣದ ಪಾರಿಭಾಷಿಕಶಬ್ದಗಳು ಹಾಗೆಯೇ ಉಳಿದಿವೆ. ಪ್ರಥಮಾವಿಭಕ್ತಿ, ದ್ವಿತೀಯಾವಿಭಕ್ತಿ, ಎಂಬ ಹೆಸರುಗಳು (ಸಂಸ್ಕೃತದಲ್ಲಿರುವ ದೀರ್ಘವಾದ 'ಪ್ರಥಮಾ' 'ದ್ವಿತೀಯಾ' ಮುಂತಾದ ದೀರ್ಘಗಳೊಡನೆ) ಹಾಗೆಯೇ ಉಳಿದಿವೆ; 'ಕರ್ತರಿ', 'ಕರ್ಮಣಿ'- ಎಂಬ 'ಸಪ್ತಮೀ' ವಿಭಕ್ತಿಗಳ ಹೆಸರುಗಳು ಹಾಗೆಯೇ ಇವೆ.

ಅಂತೂ ಸಂಸ್ಕೃತದ ಅನುಕರಣವು- ಕೆಲವು ಕಡೆ ಕೈ ಬಿಡಬಹುದಾಗಿದ್ದರೂ- ಕನ್ನಡದ ವ್ಯಾಕರಣಕಾರರನ್ನು ಕೈ ಬಿಡಲಿಲ್ಲ. ತತ್ಸಮತದ್ಭವಗಳನ್ನು ವಿಶದಪಡಿಸುವದಂತೂ ಅವರಿಗೆ ಅನಿವಾರ್ಯವಾಗಿರುತ್ತದೆ,

ಕನ್ನಡಕ್ಕೆ ಸಂಸ್ಕೃತದ ಸಹಾಯವು ಬೇಡವೆನ್ನುವದಕ್ಕೆ ಆಗುವಂತಿಲ್ಲವೆಂಬುದು ಈ ವ್ಯಾಕರಣಪರೀಕ್ಷೆಯಿಂದಲೇ ಸುಸ್ಫುಟವಾಗಿದ್ದರೂ ಕನ್ನಡದಲ್ಲಿರುವ ಕಾವ್ಯಾದಿಗಳನ್ನು ಸ್ವಲ್ಪ ಇಣಿಕಿನೋಡುವದರಿಂದಲೂ ಲಾಭವುಂಟು. ಆ ಕೆಲಸಕ್ಕೆ ಇನ್ನೊಂದು ಲೇಖನದಲ್ಲಿ ಕೈಹಾಕುವೆನು.

* * * * *

# 33. ಕನ್ನಡಕಾವ್ಯಗಳಲ್ಲಿ ಸಂಸ್ಕೃತ

ಹಿಂದಿನ ಲೇಖನದಲ್ಲಿ ದೇಶಭಾಷೆಗಳಿಗೆ ಸಂಸ್ಕೃತದ ನೆರವು ಎಷ್ಟು ಅವಶ್ಯವೆನ್ನುವದನ್ನು ವಿಶದಪಡಿಸುವದಕ್ಕಾಗಿ ಎರಡು ವ್ಯಾಕರಣಗ್ರಂಥಗಳ ಉದಾಹರಣೆಯಿಂದ ಕನ್ನಡದಲ್ಲಿ ಶಾಸ್ತ್ರಗ್ರಂಥಗಳನ್ನು ಬರೆದವರೆಲ್ಲ ಸಂಸ್ಕೃತವನ್ನು ಅವಲಂಬಿಸಬೇಕಾಯಿತೆಂಬುದನ್ನು ತೋರಿಸಿಕೊಟ್ಟಿದ್ದೆನು. ಇದಕ್ಕೆ ಕಾರಣವನ್ನು ಹುಡುಕಬೇಕಾಗಿಲ್ಲ ; ಏಕೆಂದರೆ ಶಾಸ್ತ್ರಗಳು ಕಾವ್ಯಾದಿಗ್ರಂಥಗಳನ್ನು ಆಶ್ರಯಿಸಿಯೇ ಹುಟ್ಟುತ್ತವೆ. ಕಾವ್ಯಗ್ರಂಥಗಳು ಸಂಸ್ಕೃತವನ್ನು ಅವಲಂಬಿಸಿರುವಲ್ಲಿ ಶಾಸ್ತ್ರಕಾರರು ಹೇಗೆತಾನೆ ಆ ಭಾಷೆಯನ್ನು ಬಿಡುವದಕ್ಕಾದೀತು?

ಕನ್ನಡಕಾವ್ಯಗಳಿಗೆ ಸಂಸ್ಕೃತವು ಜೀವನಾಡಿ ಎಂಬುದನ್ನು ಕೆಲವು ಕಾವ್ಯಗಳನ್ನು ಅವಲೋಕಿಸುವದರಿಂದ ಗೊತ್ತುಮಾಡಬಹುದು. ಮೊಟ್ಟಮೊದಲು ಹಳಗನ್ನಡದ ಕಾವ್ಯಗಳತ್ತ ಕಣ್ಣನ್ನು ಹೊರಳಿಸಿದರೆ ಮಂಗಳಕ್ಕಾಗಿ ಆ ಕಾವ್ಯಗಳು ಬರೆದಿರುವ ವೃತ್ತಗಳಲ್ಲಿ ಸಂಸ್ಕೃತಭಾಷೆಯನ್ನು ಬಳಸದಿದ್ದರೆ ಅಮಂಗಲವೆಂದೇ ಭಾವಿಸಿದ್ದಂತೆ ತೋರುತ್ತದೆ. ಇದಕ್ಕೆ ಇಲ್ಲಿ ಕೆಲವು ಉದಾಹರಣೆಗಳನ್ನು ಕೊಡುವೆನು.

**ಶ್ರೀರಾಮಾನಟ ಕೌಸ್ತುಭದ್ಯುತಿಕಿರತ್ಪುಷ್ಪಾಂಜಲಿಕ್ಷೇಪವ ।**
**ಕ್ಷೋರಂಗಸ್ಥಿತೆಯಾದ, ಪಾದನಖರೋಚಿರ್ಗಂಗೆ ಪೃಥ್ವೀಶಕೋ ।**
**ಟೀರವ್ಯಾಪ್ತಿಗೆ ಸಂದ, ಚಕ್ರರವಿ ದೈತ್ಯಧ್ವಾಂತಮಂ ಗೆಲ್ದ ಭೂ ।**
**ಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ ॥1॥**

**-ಜಗನ್ನಾಥವಿಜಯ**

ಇಲ್ಲಿ ಎಷ್ಟು ಕನ್ನಡದ ಶಬ್ದಗಳಿವೆಯೆಂಬುದನ್ನು ಸುಲಭವಾಗಿ ಎಣಿಸಿಕೊಳ್ಳಬಹುದು. ಇಲ್ಲಿ ವಿಶೇಷ್ಯವಾದಮೇಲೆಯೇ ವಿಶೇಷಣಗಳನ್ನಿಟ್ಟಿರುವ ಶೈಲಿಯನ್ನು ಲಕ್ಷಿಸಬೇಕು.

**ಶ್ರೀಪಾದದ್ವಿತಯಪ್ರದಕ್ಷಿಣಕೃತಿವ್ಯಾಸಕ್ತಗೀರ್ವಾಣಕಾಂ ।**
**ತಾಪಾಂಗಪ್ರತಿಬಿಂಬಕೋಟಿಘಟಿತಸ್ಮೇರಸ್ಥಲೇನ್ದೀವರ ॥**
**ಶ್ರೀಪೂರ್ಣಂ ಹಿಮವನ್ನಗೇಂದ್ರಮೆನೆ ಕಣ್ಗಿಂಬಾದ ಚಾಂದ್ರಪ್ರಭಂ ।**
**ರೂಪಂ ದಿವ್ಯಮಚೋಮರುನ್ನದಿಯಿನೆಮ್ಮೊಳ್ ಮಾಳ್ಕೆ ನೈರ್ಮಲ್ಯಮಂ ॥2॥**

**-ಚಂದ್ರಪ್ರಭಪುರಾಣ**

ಮಂಗಲಶ್ಲೋಕಗಳಿಗೆ ಮೇಲಿನ ಎರಡು ಉದಾಹರಣೆಗಳು ಸಾಕು. ಕವಿಗಳ ಸಂಸ್ಕೃತದೀರ್ಘಸಮಾಸಗಳ ಪ್ರೇಮವು ಇಲ್ಲಿ ಎದ್ದು ಕಾಣುತ್ತದೆ.

ಶ್ಲೇಷಾರ್ಥಪ್ರದರ್ಶನದಲ್ಲಿ ಆದರವನ್ನು ಈ ಪದ್ಯದಲ್ಲಿ ಕಾಣಬಹುದು:

**ಹರಿಯಂತಿರನೇಕಪಾಪಹರಣೈಕಪ್ರೌಢಮಂ ಕಿನ್ನರೇ ।**
**ಶ್ವರನೆಂತಂತಿರಗಣ್ಯಪುಣ್ಯಜನತಾಸೌಂದರ್ಯಮಂ ಮೇರುಭೂ ।**
**ಧರಮೆಂತಂತಿರೆ ಪುಷ್ಪದಂತಪರಿವೃತ್ತೋದಾತ್ತಮಂ ಭವ್ಯರಾ ।**
**ದರಿಸಲ್ ಭಕ್ತಿಯಿನಾಂ ವಿನಿರ್ಮಿಸುವೆನೀ ಶ್ರೀಮತ್ಕಥಾಬಂಧಮಂ ॥3॥**

**-ಚಂದ್ರಪ್ರಭಪುರಾಣ**

ಈ ಕೆಳಗಿರುವದು ಸಮುದ್ರವರ್ಣನೆ:

**ಉರಗೇಂದ್ರಾಭಿನುತಾಂತರಂಗಬಹಿರಂಗಶ್ರೀಯುತಂ ವೃತ್ತರ ।**
**ತ್ನರುಚಿವ್ಯಾವೃತನಿಷ್ಕಳಂಕಹೃದಯಂ ನಿತ್ಯಂ ಗಭೀರಂ ಸುರಾ**
**ಸುರಸೇವ್ಯಂ ಕಮಠಪ್ರಣೂತವಿಭವಂ ಶ್ರೀಪಾರ್ಶ್ವತೀರ್ಥೇಶನಂ**
**ತಿರೆ ಪೂರ್ಣಂ ಲವಣಾರ್ಣವಂ ಸೊಗಯಿಮಂ ನೀಲಪ್ರಭಾಡಂಬರಂ ॥4॥**

**-ಪಾರ್ಶ್ವನಾಥಪುರಾಣ**

ಇದು ದೇಶದ ವರ್ಣನೆ:

**ಕಳಕಂಠಕ್ಕತನುತೆ ಚಾ ।**
**ಪಳತಾರೋಪಣವಿಕಾರಮಳಿಗಾಮ್ರಕುಜಾ ।**
**ವಳಿಗೆ ಮಧುವಿಕೃತಿ ಮಾನವ ।**
**ಕುಳಕ್ಕೆ ಕನಸಿನೊಳಮಿಂತಿವಿಲ್ಲಾ ನಾಡೊಳ್ ॥5॥**

**- ರಾಮಚಂದ್ರಚರಿತಪುರಾಣ**

ಇಲ್ಲಿ ಕಿತ್ತಿಲೆಗಿಡದ ವರ್ಣನೆಯಿದೆ:

**ಶಿತಿಕಂಠನಂತಪರ್ಣಾ ।**
**ನ್ವಿತಮಿದು ತಾನೆನಿಸಿ ತಳ್ತ ತನಿವಣ್ಗಳ ಸಂ ।**
**ತತಿಯಿಂದ ತುರುಂಗಿ ನೆರೆ ಕ**
**ಣ್ಗತಿಶಯಮಾಗಿರ್ದುದಲ್ಲಿ ನಾರಂಗಕುಜಂ ॥6॥**

**-ಶಾಂತೀಶ್ವರಪುರಾಣ**

ಆನೆಗಳಾಟದ ವರ್ಣನೆಯಿದು:

**ಭೋರೆಂದೆರಗುವ ಜಲಧರ ।**
**ಧಾರಾಪುಷ್ಕರದಿನಾತ್ಮಕರಪುಷ್ಕರಮಂ ।**
**ಪೂರಿಸಿ ಸಿಂಪಿಣಿಯಂ ಕಾಂ ।**
**ತಾರದೊಳಾಡಿದುವು ಕರಿಗಳುಂ ಕರಿಣಿಗಳುಂ ॥7॥**

**-ಮಲ್ಲಿನಾಥಪುರಾಣ**

ನಗರದ ವರ್ಣನೆಯಿದು:

**ಕಿಳಿರ್ವಶ್ವಂಗಳ ನಿನದಂ ।**
**ತಳರ್ವ ಗಜಂಗಳ ನಿಬದ್ಧನಿಗಳಧ್ವನಿ ಕೆಂ ।**
**ದಳಿರ್ವಣ್ಣದ ಕೇತನದೊಳ್**
**ಮಿಳಿರ್ವುದು ಘಂಟಾನಿನಾದಮಲ್ಲಿಡಿದಿರ್ಕುಂ ॥8॥**

**-ರಾಜಶೇಖರ ವಿಲಾಸ**

ಒಬ್ಬ ವ್ಯಾಧನ ವರ್ಣನೆ:

**ಮುತ್ತಮದಲ್ಲದೆ ಘನಸುಖ ।**
**ಚಿತ್ತಂ ಚಿತ್ತಜನ ಪೋಲೆ ಮನ್ಮಥರಾಗೋ**
**ನ್ಮತ್ತನದೊರ್ವಂ ಲುಬ್ಧಕ ।**
**ನತ್ತಿತ್ತಂ ಶಬರಿಯಿಲ್ಲದೊಂದಡಿಯನಿಡಂ ॥9॥**

**-ಗಿರಿಜಾಕಲ್ಯಾಣ**

ಇದು ಚಂದ್ರನ ವರ್ಣನೆ

**ದಶಮುಖತಾಮಸಭಾವ ।**
**ಪ್ರಶಮನಕೃತಿ ವಾರಿರಾಶಿವಿಕ್ಷೋಭಕಲಾ ।**
**ಕುಶಲಂ ಸತ್ಪಥಗಂ ಸ್ನಿ ।**
**ಗ್ಧಶುಭಾಲೋಕನದೆ ರಾಮಚಂದ್ರಂ ಚಂದ್ರಂ ॥10॥**

**-ಚಿಕ್ಕದೇವರಾಜವಿಜಯ**

ಹಳಗನ್ನಡದ ವಾಕ್ಯಗಳ ಉದಾಹರಣೆ ಸಾಕು. ಇನ್ನು ಈಚಿನ ಕಾವ್ಯಗಳತ್ತ ತಿರುಗೋಣ:

ವಂದಾರುಜನಕೆ ವಾಂಛಿತಫಲಗಳನೀವ। ಮಂದಾರತರುಗೆ ಮಾಧವಗೆ।
ಕುಂದುಗಳಿಲ್ಲದೆ ಗುಣ ಕರುಗೊಂಡ ಮು। ಕುಂದನಿಗಾನು ವಂದಿಪೆನು॥
ಲೋಕಶಾಸ್ತ್ರವನಾಲೋಚಿಸಿ ತಿಳಿದದ। ರೈಕಮತ್ಯವನಳವಡಿಸಿ।
ಏಕಪತ್ನಿಯರೆಸಗುವ ದಿನಚರ್ಯೆಯ। ಜೋಕೆ ತಪ್ಪದೆ ಸೊಲ್ಲಿಸುವೆನು॥

-ಹದಿಬದೆಯಧರ್ಮ

ಚಿಂತೆಯೇಕೈ ಕೃಷ್ಣನಾರೆಂ
ದೆಂತು ಕಂಡೆ ಚತುರ್ದಶಾರ್ಥದ
ತಂತುರೂಪನು ತಾನೆ ಎನ್ನದೆ ನಿನಗೆ ಶ್ರುತಿವಚನ ॥
ತಂತುವಿನ ಪಟ ಮೃತ್ತಿಕೆಯ ಘಟ
ದಂತೆ ಜಗದೀತನಲಿ ತೋರ್ಕು ಮು ।
ರಾಂತಕನ ಸುಯ್ಧಾನ ನಿನಗಿರಲಂಜಲೇಕೆಂದ ॥
ಏಕಮೇವಾದ್ವಿತೀಯಮೆಂಬ ನಿ ।
ರಾಕುಳಿತತೇಜೋನಿಧಿಗೆ ಮಾ ।
ಯಾಕಳತ್ರದೊಳಾಯ್ತು ನಿಜಗುಣಬೋಧವದರಿಂದ ॥
ಆಕಮಳಭವನೀ ಮುಕುಂದ ಪಿ ।
ನಾಕಿಯೆಂಬಭಿಧಾನದೊಳಿತ್ರ್ಗು।
ಣಾಕೃತಿಯ ಕೈಕೊಂಡನುರುಲೀಲಾವಿನೋದದಲಿ॥

-ಇವು ಗದುಗಿನ ಭಾರತದಿಂದ ಆರಿಸಿದವು

ಲಸದಮಲರತ್ನಸೋಪಾನದಿಂ ಮೀನದಿಂ ।
ಬಿಸವನಾಸ್ವಾದಿಸುವ ಚಕ್ರದಿಂ ನಕ್ರದಿಂ ।
ದೆಸೆದೆಸೆಗೆ ಬೀರ್ವ ತನಿಗಂಪಿನಿಂ ತಂಪಿನಿಂ ತೊಳಪ ಹಿಮಕರಕಾಂತದ ।
ಪೊಸಸಂಣಿಗೆವೊಲಿಡಿದ ಪುಳಿನದಿಂ ನಳಿನದಿಂ
ದೊಸೆದು ಬಿನದಿಪ ಹಂಸಕೇಳಿಯಿಂದೋಳಿಯಿಂ ।
ದೆಸೆದ ನೀರ್ವಕ್ಕಿಗಳ ಸಂಗದಿಂ ಭೃಂಗದಿಂದಾ ಕೊಳಂ ಕಣ್ಗೆಸೆದುದು ॥

-ಜೈಮಿನಿಭಾರತ

ಜಲಧಿಯನ್ನುರೆ ಕುಡಿವ ಬಡಬಾ ।
ನಲವ ನುಂಗುವ ನೆಲನನಿಬ್ಬಗೆ ।
ಗೊಳಿಪ ನಿಖಿಳಕುಲಾದ್ರಿಗಳ ಕಿತ್ತಭ್ರತಳಕಿಡುವ? ।
ಜಲಜಬಂಧು ಹಿಮಾಂಶುಗಳ ಕುಂ ।
ಡಲವನಿಕ್ಕುವ ಕೋಟಿ ಬಡಬಾ ।
ನಲಬಲಾನ್ವಿತಭಟರ ನಳನರ್ಬುದವ ತೋರಿಸಿದ ॥

-ತೊರವೆರಾಮಾಯಣ

ಸಿರಿಪಾಣಿಯರಸನ ಚಿದಚಿದಧೀಶನ । ಪರಮಯೋಗೀಂದ್ರವಂದಿತನ ।
ನಿರುಪಾಧಿಸದ್ಗುಣನಿಧಿಯ ನಿರ್ಮಲನ ಶ್ರೀ । ಚರಣಂಗಳೆ ಶರಣೆನಗೆ
ವೀರನ ವಿಭವೋದಾರನ ವಿಜ್ಞಾನ । ಸಾರನ ಸರ್ವಕಾರಣನ ।
ಭೂರಿತೇಜನ ಭುವನೈಕಾಧಾರನ । ನಾರಾಯಣನ ನಂಬಿದೆನು ॥
ಶರಣಾಗತಜನವತ್ಸಲನಾಪನ್ನ । ಪರಿಪಾಲನತತ್ಪರನ ।
ಪರಿಪೂರ್ಣಕಾಮನ ಭಕ್ತಮಂದಾರನ । ಸಿರಿಯಡಿಗಳನೆ ಸೇರುವೆನು ॥

-ಕರ್ಣವೃತ್ತಾಂತಕಥೆ

ಕೈಹುಣ್ಣಿಗೆ ಕನ್ನಡಿ ಬೇಕಿಲ್ಲವಷ್ಟೆ? ಕನ್ನಡದ ಕಾವ್ಯಗಳಿಗೆ ಸಂಸ್ಕೃತದ ಪೋಷಣೆ ಅತ್ಯವಶ್ಯವೆಂಬುದು ಸುಸ್ಫುಟವಾಗಿದೆ. ಸಂಸ್ಕೃತದ ಪರಿಚಯವಿಲ್ಲದವರಿಗೆ ಹಿಂದಿನ ಕನ್ನಡಕಾವ್ಯಗಳನ್ನು ಸವಿಯುವ ಯೋಗವಿಲ್ಲವೆಂದೇ ಒಪ್ಪಬೇಕು. ಇನ್ನು ಈಗ ಪ್ರಚಲಿತವಾಗಿರುವ ಹೊಸಗನ್ನಡದಲ್ಲಿರುವ ಗದ್ಯಪದ್ಯಗಳ ಭಾಷೆಯ ಸ್ಥಿತಿಯನ್ನೂ ವೃತ್ತಾಂತಪತ್ರಿಕೆಗಳು, ವ್ಯವಹಾರದ ಕಾಗದಪತ್ರಗಳು ಮುಂತಾದವುಗಳ ಭಾಷೆಯ ರೂಪವನ್ನೂ ನೋಡಿ ಅದಕ್ಕೆ ಸಂಸ್ಕೃತದ ಸಂಬಂಧವು ಎಷ್ಟು ಮಟ್ಟಿಗೆ ಇದೆ ಎಂಬುದನ್ನು ಗೊತ್ತುಮಾಡುವದು ಉಳಿದಿದೆ.

* * * * *

## 34. ಈಗಿನ ಕನ್ನಡವೂ ಸಂಸ್ಕೃತವೂ

ಹಿಂದಿನ ಲೇಖನದಲ್ಲಿ 'ಹಿಂದಿನ ಕನ್ನಡ ಕಾವ್ಯಗಳಿಗೆ ಸಂಸ್ಕೃತವು ಜೀವನಾಡಿ' ಎಂಬುದನ್ನು ಮನಗಾಣಿಸುವದಕ್ಕೆ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದೆನು. ಈಗ

ಇಂದಿನ ಕನ್ನಡಕ್ಕೆ ಸಂಸ್ಕೃತವು ಬೇಕೆ? ನಮ್ಮ ಕನ್ನಡಿಗರಿಗೆ ಸಂಸ್ಕೃತದ ಜ್ಞಾನವು ಅವಶ್ಯವೆ? ಎಂಬುದನ್ನು ವಿಚಾರಿಸುವವರಿಗಾಗಿ ಮೊದಲು ಕೆಲವು ಗದ್ಯಪದ್ಯಗಳ ಉದಾಹರಣೆಗಳನ್ನು ಕೊಟ್ಟು ಬಳಿಕ ವೃತ್ತಾಂತಪತ್ರಿಕೆಗಳ ಭಾಷೆಯತ್ತ ಕಣ್ಣನ್ನು ಹೊರಳಿಸುವೆನು. ಉದಾಹರಣೆಗೆ ನಾನು ಆರಿಸಿಕೊಳ್ಳುವ ಬರಹವು ಯಾವದು? ಎಂಬುದನ್ನು ಓದುಗರು ಲಕ್ಷಿಸಬಾರದು; ಈಗಿನ ಕನ್ನಡದ ಸ್ಥಿತಿ ಹೇಗಿದೆ?- ಎಂಬ ಪ್ರಶ್ನೆಗೆ ಉತ್ತರವು ಇಲ್ಲಿದೆ ಎಂದಿಷ್ಟೇ ಮನಸ್ಸಿಗೆ ತಂದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

**1.** **ವೈಶಾಖ ಶುಕ್ಲ ಪೂರ್ಣಿಮಾ ರಾತ್ರಿ ಹಬ್ಬಿದೆ ಸುತ್ತ**
**ಕರಗಿಹೋಗಿದೆ ಕತ್ತಲೆಯ ಹುತ್ತ**
**ಹೆಡೆ ಮುದುರಿಬಿದ್ದಿದೆ ಕೆಳಗೆ ಸಾಷ್ಟಾಂಗವಿನ್ಯಾಸದಲಿ**
**ಮಿನುಗು ದೀಪದಮೆಯ್ಯ ನಗರ ವಿಸ್ತಾರ**
**ಆಕಾಶಾದ್ಯಂತ ಹರಿದಿದೆ ಬೆಳುದಿಂಗಳಿನ ಪ್ರಭಾಪೂರ !** **॥1॥**

**2.(ರ.)** **ಈ ಉದ್ಯಾನಶೋಭೆಗೆ ರಸೋದ್ದೀಪನಂಗೊಂಡು**
**ಮೈಮರೆಯದಿರು ಭಕ್ತಿಮೂರ್ಭೆಗೆ ಸಂದು !**

**(ವೀ.)** **ಅರಣ್ಯಾದ್ರಿ ಸೃಷ್ಟಿಸೌಂದರ್ಯದಿಂ ಭಾವನಾವಶನಾಗುವಾ**
**ನಿನ್ನ ರೂಢಿಯ ನೆನೆದು ನಮಗಿನಿತು ಆಶಂಕೆ** **॥2॥**

3. **ನಿಸ್ತರಂಗ ಮನಸ್‌ಶರಧಿ**
**ಅಹಂಕಾರ ನಿರಸನದಿ**
**ಬುದ್ಧಿಯುರುಳೆ ಭಾವವರಳೆ**
**ಪ್ರಣವಶ್ರುತಿ ವಿಪಂಚಿನೀ** **॥3॥**

**ಒಳಗುಲಿಯೆ ವಿಹಂಗಸ್ವನ**
**ಮಾಂ ತು ವೇದ ನ ಕಶ್ಚನ**
**ಭೂಮಿ ನಭಕ್ಕೆಸೆಯಿತೆನ್ನ**
**ನಿಗೋ ವಿಗಳಿತತನುಮನಾ**

ಕನ್ನಡವನ್ನೇ ಮುಖ್ಯವಾಗಿ ಬಳಸಿ ಬೆಳೆಯಿಸಬೇಕೆಂಬ ಪಣವನ್ನು ತೊಟ್ಟಿರುವವರ ಮೂರು ಪದ್ಯಗಳನ್ನು ಇಲ್ಲಿ ಉದಾಹರಿಸಿದೆ. ಅವರಿಗೂ ಸಂಸ್ಕೃತ ಪ್ರಾಚುರ್ಯವು ಒಮ್ಮೊಮ್ಮೆ ರುಚಿಸುತ್ತಿದೆ.

**ಪ್ರಿಯಳೆ ಕೇಳೀ ದೇಹ ಭ್ರಾಂತಿಯು**
**ಮಯವೆನಿಪ ಜೀವನಿಗೆ ತೋರ್ಪವು**
**ನಿಯತದಿಂದಂ ಪಂಚಕೋಶಗಳಾವೆನಲ್ಕನ್ನ ।**
**ಮಯದ ಕೋಶವು ಬಳಿಕ ಪ್ರಾಣದ**
**ಮಯ, ಮನೋ(?)ಕಾಯ ಮತ್ತು ಬುದ್ಧಿಯ**
**ಮಯವದಾನಂದಾಖ್ಯ ಕೋಶಗಳಿಂತು ಲಲಿತಾಂಗಿ ॥1॥**

**ಋಷಿಗಳಿರ ಜಗದಲ್ಲಿ ಪಾಪವು**
**ನಶಿಸೆ ಪಶ್ಚಾತ್ತಾಪಕೆಣೆಯಾ**
**ದಸಮಪ್ರಾಯಶ್ಚಿತ್ತಮಿಲ್ಲವು ಸತ್ಯವೀ ಮಾತು ।**
**ವಿಷಯಿಯಾಗಿಹ ಮನುಜನವಿಹಿತ**
**ವಿಷಯ ಸೇವಿಸಿ ನಂತರಂ ತಾಂ**
**ವ್ಯಸನಪಡುವನು ಧರ್ಮತಪ್ಪಿದೆನಹಹ ತಾನೆನುತ ॥2॥**

ಸಂಸ್ಕೃತದ ಮೇಲೆ ದ್ವೇಷವೂ ಇಲ್ಲದೆ ಮೋಹವೂ ಇಲ್ಲದೆ ಸಂಸ್ಕೃತಶಬ್ದಗಳನ್ನು ಬಳಸಿರುವ ಪದ್ಯಗಳೆರಡನ್ನು ಮೇಲೆ ಕಾಣಬಹುದು. ಇವುಗಳಲ್ಲಿ ಸಂಸ್ಕೃತಭಾಷೆಯ ಮರ್ಯಾದೆಯನ್ನು ಲೆಕ್ಕಿಸದೆ ಪ್ರಯೋಗಗಳಿವೆ.

ಪದ್ಯಗಳ ಉದಾಹರಣೆಗಳಿಗಿಂತ ನಡೆಗನ್ನಡದ ವಾಕ್ಯಗಳಲ್ಲಿ ಬಳಸಿರುವ ಸಂಸ್ಕೃತಶಬ್ದಗಳ ಗತಿಯನ್ನು ತಿಳಿಯುವದಕ್ಕೆ ಈಗ ಕೆಲವು ಉದಾಹರಣೆಗಳನ್ನು ಕೊಡುವೆನು:

1. (ಅ) ಹಿಂದಿನ ಜನ್ಮದಲ್ಲಿ ಶ್ರೀ ಹರಿಭಜನೆಮಾಡಿದ ಫಲದಿಂದ ಅದಕ್ಕೆ ಸುಜ್ಞಾನ ವಿದ್ದಿತಾದರೂ **ಈ ಆನೆಯೋನಿಗೆ** ತಕ್ಕ ತಾಮಸಗುಣವಿದ್ದೇತೀರಬೇಕಲ್ಲವೆ?

(ಆ) 'ಪಾಪಾತ್ಮನಾದ ಅಜಮಿಳನನ್ನು ನಾಮಮಾತ್ರದಿಂದ **ಪುನೀತನಾಗಿ** ಮಾಡಿದೆ, ನಿನ್ನ ಸಂದರ್ಶನವಾದ ಬಳಿಕ ನಾನು **ನಿರ್ದೋಷಿಯಾದೆ**: ನಿನ್ನ ಭಕ್ತನಾದ ಈ ಗಜೇಂದ್ರನ ಚರಣವನ್ನು ಹಿಡಿದೆಳೆದ ನನ್ನ **ಅಭಿಮತವನ್ನು** ಸ್ವಾಮಿಯಾದ ನೀನು ಈಗಲಾದರೂ ಅರಿತುಕೊ.'

(ಇಲ್ಲಿ ಕಪ್ಪಕ್ಷರದಲ್ಲಿರುವ ಸಂಸ್ಕೃತಶಬ್ದಗಳನ್ನು ಉಪಯೋಗಿಸಿರುವ ಬಗೆಯನ್ನು ಲಕ್ಷಿಸಿರಿ. ಅರಿಸಮಾಸವನ್ನು ಅಸಡ್ಡೆಮಾಡಿದೆ: ಅಕ್ಷರ ವಿನ್ಯಾಸವನ್ನು ಮಾರ್ಪಡಿಸಿದೆ: ಶಬ್ದಕ್ಕೆ ಅರ್ಥವನ್ನೇ ಬೇರೆಯಾಗಿ ಕಲ್ಪಿಸಿದೆ.)

2. 'ಈ ಗಾಂಽಭಕ್ತರು ಮಾಡುತ್ತಿರುವ **ದುರಾಡಳಿತ** ಯಾವ ಮಟ್ಟಕ್ಕೆ ಮುಟ್ಟುತ್ತಿದೆ, ದಿನ ಕಳೆದಂತೆಲ್ಲಾ ಎಂದರೆ ಇವರ **ಅಟ್ಟಹಾಸ**ವೆಂದರೆ ಇತಿಮಿತಿ ಇಲ್ಲದಂತೆ ಆಗಿದೆ.'

   (ದುರ್ ಉಪಸರ್ಗವು 'ಆಡಳಿತ' ಕ್ಕೂ ಗಂಟುಬಿದ್ದಿದೆ! 'ಅಟ್ಟಹಾಸ'ವೆಂದರೆ ಏನೆಂದು ಲೇಖಕರನ್ನು ಕೇಳಬೇಕು.)

3. **(ಅ)** ರಾತ್ರೆಯಲ್ಲಿ ಧ್ವಜರಕ್ಷಣೆಯ ಪವಿತ್ರಕರ್ತವ್ಯವನ್ನು ತೃಣೀಕರಿಸಿ ರಾಜ ಸೋದರಿಯ ಮಂದಿರಕ್ಕೆ ಹೋಗಿದ್ದನೆಂಬುದು **ಬಹಿರಂಗ**ವಾದರೆ **ಜನಸಾಮಾನ್ಯ**ರಲ್ಲಿ ಎಂತಹ **ವಿಪರೀತಕಲ್ಪನೆಗೆ** ಅವಕಾಶವಾದೀತು!

   (ಆ) ಆದುದರಿಂದ ವೀರಸಿಂಹನನ್ನು **ವಿಚಾರಣೆವಿನಹ** ತೀರಿಸಿ ಬಿಡುವದೇ ಲೇಸು. ಕಪ್ಪಕ್ಷರದಲ್ಲಿರುವ ಸಂಸ್ಕೃತಶಬ್ದಗಳ ಪಾಡೇನು?

4. (a) 'ಶಿವಾನುಗ್ರಹದಿಂದ **ತಪೋಕಾರಣವಾಗಿ** ಮೇಲ್ಮೆಹೊಂದಿದ ಹಿರಿಯರು, ಒಂದುಗೂಡಿ ಆ ಮಗುವಿಗೆ ನಂಬಿಯಾರೂರನು ಎಂಬ ಹೆಸರನ್ನಿಟ್ಟರು'.

   (b) ಮಹೂರ್ತವನ್ನು **ನಿಶ್ಚೈಸಿ** ಮದುವೆಯ ಓಲೆಯನ್ನು ಕಳುಹಿಸಿದನು.

   (c) ಹೀಗೆ ಬರುವ ವಿವಾಹಸಂಭ್ರಮವುಳ್ಳ ನಂಬಿಯಾರೂರನು ಸುವಾಸನೆಯನ್ನು ಸುರಿಸುವ **ವಿವಾಹಚಪ್ಪರಕ್ಕೆ** ಬಂದು ಶಂಖಗಳು ಎಲ್ಲೆಡೆಗಳಿಂದಲೂ ಮೇಘ ಕೂಟದಂತೆ ಶಬ್ದವು....

5. (a) ಶಿವಸಮುದ್ರದ್ವೀಪವು ಅದರ ಆರಂಭದಿಂದ ಇಂದಿನವರೆಗೂ ಹಲವಾರು ಘೋರಯುದ್ಧಗಳಿಗೂ ಸಾಹಸಪೂರ್ಣ ಘಟನೆಗಳಿಗೂ ಸಾಕ್ಷ್ಯರೂಪವಾಗಿದೆ.

   (b) ಈ ಗೋಲಗುಂಬದರ ಅತ್ಯಾಶ್ಚರ್ಯವಾದ ವಿಷಯವೆಂದರೆ ಒಂದೇ ಧ್ವನಿಯನ್ನು ಹಲವು ಬಾರಿ ಪ್ರತಿರ್ಧನಿಸುವ ವಿಶೇಷ ಗುಣವಾಗಿದೆ.

ಇದುವರೆಗೆ ಕೊಟ್ಟಿರುವ ಸಂಸ್ಕೃತಶಬ್ದಗಳ ಉದಾಹರಣೆಗಳ ಜೊತೆಗೆ ವೃತ್ತಪತ್ರಿಕೆಗಳಿಂದಾರಿಸಿ ಕೆಲಶಬ್ದಗಳನ್ನು ಮಾತ್ರವೇ ಇಲ್ಲಿ ಪಟ್ಟಿಯಾಗಿ ಕೊಡುವೆನು. ಕನ್ನಡಿಗರಿಗೆ ಸಂಸ್ಕೃತಶಬ್ದಗಳೇನೊ ಬೇಕು; ಆದರೆ ಅವುಗಳ ರೂಪವನ್ನು ತಿರಿಚಿ, ಇಲ್ಲವೆ ಅರ್ಥವನ್ನು ತಮಗೆ ತೋಚಿದಂತೆ ಬದಲಿಸಿ ಶಬ್ದಹತ್ಯಾದೋಷಕ್ಕೆ ಗುರಿಯಾಗುತ್ತಿದೇವೆಂಬ ಭಯವಿಲ್ಲ- ಎಂಬುದು ಇದರಿಂದ ಸುಽಟವಾದೀತೆಂದು ನಂಬಿದೇನೆ.

**ಅತ್ಯುಚ್ಛ** (ಮಹಾಪ್ರಾಣವೇಕೊ!), **ಅನಾಹುತ** (ಸಂಸ್ಕೃತದಲ್ಲಿ ಈ ಶಬ್ದವಿಲ್ಲ, ಅನಾಹುತ ಎಂದರೆ ಬೇರೆಯ ಅರ್ಥ), **ಅತ್ಯಗತ್ಯ** (ಸಂಸ್ಕೃತ ಉಪಸರ್ಗಕ್ಕೆ ಕನ್ನಡದೊಡನೆ

ವಿವಾಹ), ಅಗಾಧಪಡುತ್ತಾರೆ. **ಅಬದ್ಧ** (ಸುಳ್ಳು ಎಂಬರ್ಥ ಎಲ್ಲಿಂದ ಬಂತೊ!); **ಅಧ್ವಾನ** (ಇದಕ್ಕೆ ದಾರಿ ಎಂಬರ್ಥವಾಗಬೇಕು, ಕನ್ನಡದವರು ಕೊಟ್ಟಿರುವ ಅರ್ಥವೇ ಬೇರೆ), **ಅವಶ್ಯಕ** (ಹ್ರಸ್ವ ಹೇಗೆ ಬಂತೊ!); **ಆಗ್ರಹ** (ಸಿಟ್ಟು ಎಂಬರ್ಥವನ್ನು ಎಲ್ಲಿಂದ ತಂದರೊ!) ಅಪರೂಪ (ಸಂಸ್ಕೃತದಲ್ಲಿರುವ ಅರ್ಥವೇ ಬೇರೆ); **ಅನುಮಾನ** (ಸಂಸ್ಕೃತದಲ್ಲಿ ಒಂದು ಪ್ರಮಾಣಕ್ಕೆ ಹೆಸರು); ಅಸ್ಥಿತ್ವ (ಎಲುಬಿನ ಭಾವ ಎಂದು ಸಂಸ್ಕೃತದರ್ಥ); **ಅನುಪಯೋಗ, ಅಭಿಮಾನಿತರು** (ಕರ್ಮಣಿಪ್ರಯೋಗ: ಅಭಿಮಾನಿಗಳು ಎಂಬರ್ಥದಲ್ಲಿ ಬರೆದಿದಾರೆ) **ಅಕಸ್ಮಾತ್, ದೈವವಶಾತ್**, ಏತೇನ, (ಸಂಸ್ಕೃತವಿಭಕ್ತಿಗಳನ್ನೇ ಪ್ರಯೋಗಿಸಲಾಗಿದೆ); **ಅವಾಂತರ, ಆಖ್ಯಾನಿಸು, ಆತುರ** (ಇವಕ್ಕೆ ಸಂಸ್ಕೃತದಲ್ಲಿ ಬೇರೆಯ ಅರ್ಥ); **ಉದ್ದಿಶ್ಯ** (ನಿಜವಾಗಿ ಅವ್ಯಯವಿದು, ಆದರೆ ನಾಮಪದವಾಗಿ ಬಳಸುತ್ತಾರೆ); **ಅಪಕೃಪೆ** (ಹೊಸದಾಗಿ ಸೃಷ್ಟಿಸಿದ ಶಬ್ದ); **ಒತ್ತಾಯಪೂರ್ವಕ** (ಸಂಸ್ಕೃತಕನ್ನಡವನ್ನು ತಾಡುಹಾಕಿದೆ); **ಉತ್ಕೃಷ್ಠ** (ಮಹಾಪ್ರಾಣವನ್ನು ಕೊಟ್ಟಿದೆ, ಇಲ್ಲದಿದ್ದರೆ-ಉತ್ಕೃಷ್ಟವಾಗಲಾರದೆಂದಿರಬೇಕು)

ಇವು ಸ್ವರಾದಿಯಾದ ಶಬ್ದಗಳು. ಇನ್ನು ವ್ಯಂಜನಾದಿಯಾದ ಕೆಲವು ಶಬ್ದಗಳನ್ನು ಮುಂದೆ ಸಾಲಾಗಿ ಬರೆಯುತ್ತೇನೆ.

**ಕಾರ್ತೀಕ, ಕ್ರಮೇಣ, ಗಂಡಾಂತರ, ಕಠಿಣ, ಗಮನಿಸು, ಕಾರ್ಯಗತಗೊಳಿಸಿ, ಕೌಶಲ್ಯ, ಗ್ರಾಮೀಣಯೋಜನೆ, ಗಮನಾರ್ಹ, ಜಗಜ್ಯೋತಿ, ಜ್ಞಾಪಕಮಾಡು, ಜನ್ಮಿಸು, ಚಾರಿತ್ರಕ, ಚತುರ್ಥಪಂಚವಾರ್ಷಿಕಯೋಜನೆ, ಜಾಗತಿಕವ್ಯಕ್ತಿಗಳು, ಜಾತ್ಯಾತೀತ, ಜೀವನಾವಶ್ಯಕ, ತತ್ವ, ನಿರಾಸೆ, ತಜ್ಞ, ನಿಜಸಂಗತಿ, ನಿಧಾನ, ದಿನೇದಿನೇ, ನಿಷ್ಠುರನುಡಿ, ನಿಸ್ವಾರ್ಥಿ, ದಿನಾಲೂ, ಹೇಳದೆ ನಿರ್ವಾಹವಿಲ್ಲ, ನಿರ್ಲಕ್ಷಿಸುತ್ತಿದ್ದಳು, ನಡುಮಧ್ಯೇ, ಪಾಶ್ಚಿಮಾತ್ಯ, ಬುಧ್ಯತೀತ, ಪಾರಿಭಾಷಿಕರು** (ಬೇರೆಯ ಭಾಷೆಯವರು ಎಂಬರ್ಥದಲ್ಲಿ), **ಪದೇ ಪದೇ, ಪ್ರಾಮುಖ್ಯಬದಲಾವಣೆಗಳು, ಪ್ರಸ್ತಾವಿಸು, ಪುನರ್ರಚನೆ, ಪ್ರಕಟಣೆ, ಮರಣಿಸು, ಮಹತ್ವ, ಮಹತ್ಕಾರ್ಯ, ಮಹಾತ್ಮ್ಯ, ಮಹಾನ್ ಸಾಹಸ. ಬಂಧೀಖಾನೆ, ಮಹಾನತೆ, ಮಧ್ಯೆ, ಬಹುಸಂಖ್ಯಾತ, ಲೌಕೀಕರು, ವೈದೀಕರು, ಲಕ್ಷವೇ ಇಲ್ಲ, ವೇಶ, ವಿನಃ, ವಿನಹ, ವಿವೇಳ್ಯ, ವ್ಯತ್ಯಾಸ, ವಿಪರೀತ, ವಿಶೇಷ (ಶ್ರಾದ್ಧವೆಂದರ್ಥ), ವಿಶೇಷಪ್ರಸಂಗಗಳು, ವಿದ್ವತ್ತುಪರೀಕ್ಷೆ, ವಿವಂಚನೆ; ವೃತ** (ವ್ರತ ಎಂದರ್ಥ), **ಪತಿವೃತೆ, ವ್ಯಾಸಂಗ** (ಸಂಸ್ಕೃತದಲ್ಲಿ ಇದಕ್ಕೆ ಬೇರೆಯ ಅರ್ಥ), **ಸೂಕ್ತ** (ಸರಿಯಾಗಿ ಹೇಳಲ್ಪಟ್ಟ ಎಂದು ಸಂಸ್ಕೃತದಲ್ಲಿ ಅರ್ಥ), **ಸಂಗತಿ** (ವಿಷಯ ಎಂಬ ಅರ್ಥ

ಸಂಸ್ಕೃತದಲ್ಲಿಲ್ಲ). **ವಮನ, ವಪನ** (ಇವೆರಡನ್ನೂ ಒಂದರ ಅರ್ಥದಲ್ಲಿ ಒಂದನ್ನು ಬಳಸಿದರು, ಮಹಾತ್ಮರೊಬ್ಬರು!), **ಸಾಂಪ್ರದಾಯ, ಸುಖೀರಾಜ್ಯ, ಸದ್ಯಃ** (ಸಂಸ್ಕೃತದಲ್ಲಿ ಕೂಡಲೆ ಎಂಬರ್ಥ), ಅಕ್ಟೋಬರಿನಲ್ಲಿ **'ಸಂಭವ'** (ಘಟನೆ ಎಂಬರ್ಥದಲ್ಲಿ ಬಳಸಿದ್ದಾರೆ), **ಸಮರ್ಪಕವಾದ ಉತ್ತರ, ಸ್ಥಳೀಕ, ಸಂಘಟಣೆ, ಶ್ರುತಿ, ಶೃತಿ** (ಶೃತಿ ಎಂಬ ಶಬ್ದಕ್ಕೆ ಮಾಡಿದ ವಿಕಾರಗಳಿವು!)

ಕನ್ನಡಿಗರಿಗೆ ಸಂಸ್ಕೃತದ ನೆರವು ನಿಜವಾಗಿ ಬೇಕಾದರೆ ಸಂಸ್ಕೃತಭಾಷೆಯನ್ನು ಸ್ವಲ್ಪಮಟ್ಟಿಗಾದರೂ ಎಲ್ಲರೂ ಕಲಿಯಬೇಕು, ಹೀಗೆ ತಮ್ಮ ನುಡಿಯನ್ನು ಪೋಷಿಸುತ್ತಿರುವ ಮಹಾಭಾಷೆಗೆ ಅಪಮಾನವನ್ನು ಮಾಡಬಾರದು- ಎಂಬ ಕಾರಣದಿಂದಲೂ ಇದರ ಪರಿಚಯವನ್ನು ಪಡೆದುಕೊಳ್ಳಬೇಕು- ಎಂಬುದು ಸ್ಪಷ್ಟವಾಗುವದಿಲ್ಲವೆ?

ಕನ್ನಡನುಡಿಯು ಈಗ ನಮ್ಮ ನಾಡಿನ ರಾಷ್ಟ್ರಭಾಷೆಯಾಗಿದೆ; ಇದನ್ನು ಎಲ್ಲಾ ವ್ಯವಹಾರಕ್ಕೂ ತಕ್ಕದ್ದಾಗುವಂತೆ ಬೆಳೆಯಿಸಿಕೊಳ್ಳಬೇಕಾದ ಭಾರವು ದಕ್ಷರಾದ ಮುಂದಾಳುಗಳಮೇಲೆ ಬಿದ್ದ ಜವಾಬ್ದಾರಿಯಾಗಿದೆ. ಇದಕ್ಕೆ ಅಲ್ಲಲ್ಲಿ ಬೇಕಾಗುವ ಪಾರಿಭಾಷಿಕಶಬ್ದಗಳನ್ನು ಸಂಸ್ಕೃತದಿಂದಲೂ ಅನ್ಯಭಾಷೆಗಳಿಂದಲೂ 'ಆಮದು' ಮಾಡಿಕೊಳ್ಳಬೇಕಾಗುವದು. ಸಂಸ್ಕೃತಶಬ್ದಗಳನ್ನೇ ಕೋರಬೇಕಾಗುವ ಸಂದರ್ಭಗಳಲ್ಲಿ ಹಿಂದಿನಗ್ರಂಥಗಳಲ್ಲಿ ಆಗಲೆ ಬಳಕೆಯಾಗಿರುವ ಪಾರಿಭಾಷಿಕಶಬ್ದಗಳನ್ನೇ ಆರಿಸಿಕೊಳ್ಳುವ ಕೃಪೆಯನ್ನು ತೋರುವದಾವಶ್ಯಕ. ಸಂಸ್ಕೃತಶಬ್ದಗಳಲ್ಲಿರುವ ಶಬ್ದಗಳ ವರ್ಣಸಂಯೋಜನೆಯನ್ನು ವಿರೂಪಗೊಳಿಸಬಾರದು, ಪ್ರಯೋಗದಲ್ಲಿಲ್ಲದ ಶಬ್ದಗಳನ್ನು ವಿಶ್ವಾಮಿತ್ರಸೃಷ್ಟಿಯನ್ನು ಮಾಡಿ ಕನ್ನಡಕ್ಕೆ ತರಬಾರದು, ಸಂಸ್ಕೃತಶಬ್ದಗಳನ್ನು ತಮ್ಮದೇ ಒಂದರ್ಥದಲ್ಲಿ ಬಳಸಬಾರದು, ಅರಿಸಮಾಸಗಳ ಉದಾಹರಣೆಗಳನ್ನು ಹೆಚ್ಚಿಸುತ್ತಾ ಹೋಗಬಾರದು, ದೀರ್ಘಸಮಾಸಗಳನ್ನು ಪ್ರಯೋಗಿಸಬಾರದು. ಇದಕ್ಕೆಲ್ಲ ಸಂಸ್ಕೃತಜ್ಞಾನವು ಬೇಕಷ್ಟೆ?

* * * * *

## 35. ಸಂಸ್ಕೃತವೊ, ಕನ್ನಡವೊ?

ಹಳೆಗನ್ನಡ, ನಡುಗನ್ನಡ, ಹೊಸಗನ್ನಡ-ಈ ಮೂರು ಬಗೆಯ ಕನ್ನಡಗಳಲ್ಲಿಯೂ ಸಂಸ್ಕೃತದ ಬೆರಕೆಯು ಅನಿವಾರ್ಯವಾಗಿರುತ್ತದೆ ಎಂಬುದನ್ನು ತೋರಿಸಿದ್ದಾಗಿದೆ. ಸಂಸ್ಕೃತದಿಂದಲೇ ನೇರಾಗಿ ತಂದಿಟ್ಟುಕೊಂಡಿರುವ ಶಬ್ದಗಳು,

ತದ್ಭವಶಬ್ದಗಳು, ವಿಚಾರವಿಲ್ಲದೆ ಅಕ್ಷರಯೋಜನೆಯನ್ನು ಮಾರ್ಪಡಿಸಿ ಅಥವಾ ಬೇರೊಂದರ್ಥದಲ್ಲಿ ಬಳಸಿ, ಸಂಸ್ಕೃತಕನ್ನಡವೆಂಬ ಎಣಿಕೆಯಿಲ್ಲದ ಬೆರಕೆಮಾಡಿ-ರೂಪಿಸಿಕೊಂಡಿರುವ ವಿಜಾತೀಯ ಶಬ್ದಗಳು ಎಂದು ಮೂರುಬಗೆಯ ಶಬ್ದಗಳು ನಮ್ಮ ಕಣ್ಣಿಗೆ ಗೋಚರವಾಗುತ್ತಿರುವವು. ಇದರ ಜೊತೆಗೆ 'ಇವು ಸಂಸ್ಕೃತವೊ, ಕನ್ನಡವೊ?' ಎಂಬ ಸಂಶಯಕ್ಕೆಡೆಗೊಡುವ ಶಬ್ದಗಳೂ ಉಂಟು. ಅವುಗಳು ಸಂಸ್ಕೃತಕ್ಕೂ ಕನ್ನಡಕ್ಕೂ ಇರುವ ನಂಟು ಎಷ್ಟು ಹತ್ತಿರವಾಗಿದೆ ಎಂಬುದಕ್ಕೆ ಸಾಕ್ಷಿಯಾಗಿರುತ್ತವೆ.'[1]

ಸಂಸ್ಕೃತದಿಂದ ರೂಪಾಂತರವನ್ನು ನೇರಾಗಿ ಹೊಂದದೆಬಂದಿರುವ ಶಬ್ದಗಳನ್ನು **'ಸಮಸಂಸ್ಕೃತ'** ಎಂದು ವ್ಯಾಕರಣಶಾಸ್ತ್ರಜ್ಞರು ಕರೆದಿರುತ್ತಾರೆ. ಇವುಗಳ ಜೊತೆಗೆ **'ತತ್ಸಮ'** ಎಂದು ಕರೆದಿರುವ **ಅಂಕ, ಅಂಗಣ, ಅಟ್ಟ, ಕಂಕಣ, ಕೋಟಿ, ಗಂಡ, ಗಲ್ಲ, ಗಾಳ, ಗೋಣಿ, ತಳ, ತೋರಣ, ಪಟ್ಟ, ಬಂದಿ, ಬಲ, ಬಿಲ, ಮಂಚ, ಮಣಿ, ಮಾಲೆ, ವಲ್ಲಿ, ಲತೆ, ಸಬಳ.** -ಎಂಬ ಶಬ್ದಗಳೂ ಇವೆ. ಇವುಗಳು ಸಂಸ್ಕೃತವೊ, ಕನ್ನಡವೊ? ಎಂಬ ಬಗ್ಗೆ ಭಾಷಾಶಾಸ್ತ್ರಜ್ಞರು ಸಂಶಯಪಡುತ್ತಿದ್ದಾರೆ. ಡಾ|| ಕಾಲ್ಡ್ವೆಲ್-ಎಂಬಾತನು ತನ್ನ ತುಲನಾತ್ಮಕವ್ಯಾಕರಣದಲ್ಲಿ ಬರೆದಿರುವದು ಮನನೀಯವಾಗಿರುತ್ತದೆ.

**(1) ಸಂಸ್ಕೃತದಲ್ಲಿ ಒಂಟಿಗನಾಗಿ ಧಾತುವಿಲ್ಲದೆ, ತನ್ನಿಂದ ಉತ್ಪನ್ನವಾಗಿರುವ ಬೇರೆಯ ಶಬ್ದಗಳು ಇಲ್ಲದೆ ಇರುವ, ಆದರೆ- ಕನ್ನಡ, ತೆಲಗು ಮುಂತಾದ ದ್ರಾವಿಡ ಭಾಷೆಗಳಲ್ಲಿ ತನಗೆ ಸಂಬಂಧಿಗಳಾಗಿರುವ ಶಬ್ದಗಳಿರುವ ಮಾತು ಸಂಸ್ಕೃತಕ್ಕೆ ಬಂದದ್ದು. (2) ಸಂಸ್ಕೃತದಲ್ಲಿ ಅದೇ ಅರ್ಥವನ್ನು ಕೊಡುವ ಹಲವು ಶಬ್ದಗಳಿದ್ದು ದ್ರಾವಿಡ ಭಾಷೆಗಳಲ್ಲಿ ತಾನೊಂದೇ ಇರುವ ಶಬ್ದವು ಸಂಸ್ಕೃತಕ್ಕೆ ಸೇರಿದ್ದಲ್ಲ. (3) ಸಂಸ್ಕೃತಕ್ಕೆ ಸಂಬಂಧಪಟ್ಟ ಆರ್ಯಭಾಷೆಗಳಲ್ಲಿ ಎಲ್ಲಿಯೂ ಇಲ್ಲದೆ ಇದ್ದು ದ್ರಾವಿಡಭಾಷೆಗಳಲ್ಲೆಲ್ಲ ಇರುವ ಶಬ್ದವು ಸಂಸ್ಕೃತಕ್ಕೆ ಹೊಸದಾಗಿ ಬಂದದ್ದು. (4) ಸಂಸ್ಕೃತ ನಿಘಂಟುಕಾರರು ಕೊಟ್ಟಿರುವ ವ್ಯುತ್ಪತ್ತಿಯು ಅಸ್ವಾಭಾವಿಕವಾಗಿದ್ದು ದ್ರಾವಿಡಭಾಷೆಗಳಲ್ಲಿ ಒಪ್ಪುವ ಧಾತುವಿನಿಂದ ದ್ರಾವಿಡಭಾಷೆಯವರು ಆ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಿರುವ ಶಬ್ದವು ದ್ರಾವಿಡಭಾಷೆಯಿಂದಲೇ ಬಂದದ್ದು. (5) ದ್ರಾವಿಡಭಾಷೆಗಳಲ್ಲಿರುವ ಅರ್ಥವು ಮುಖ್ಯವಾಗಿದ್ದು ಸಂಸ್ಕೃತದಲ್ಲಿ ಗೌಣಾರ್ಥದಲ್ಲಿಯೇ ಪ್ರಯುಕ್ತವಾಗಿರುವ ಶಬ್ದವು ಸಂಸ್ಕೃತವಲ್ಲ; ದ್ರಾವಿಡ ಭಾಷೆಗಳ ಪಂಡಿತರು ಸಂಸ್ಕೃತವನ್ನು ಗೌರವದಿಂದ ಕಾಣುತ್ತಿರು ವವರಾಗಿದ್ದರೂ ದ್ರಾವಿಡಭಾಷೆಗೆ**

---

1. ಈ ಲೇಖನದಲ್ಲಿ ನಾನು ಕಿಟ್ಟಲ್ ಸಾಹೇಬರು ಬರೆದಿರುವ ಕನ್ನಡನಿಘಂಟುವಿನ ಪೀಠಿಕೆಯಲ್ಲಿರುವ ಯುಕ್ತಿಗಳನ್ನೇ ಮುಖ್ಯವಾಗಿ ಬಳಸಿಕೊಂಡಿರುತ್ತೇನೆ.

**ಸೇರಿದ್ದೆಂದೇ ಬಾಯಿಬಿಟ್ಟು ಹೇಳುತ್ತಿರುವ ಶಬ್ದವು ಸಂಸ್ಕೃತಕ್ಕೆ ಹೊಸದಾಗಿ ಬಂದದ್ದು. ಇಂಥ ಕಾರಣಗಳು ಅನೇಕವಿದ್ದರಂತೂ ಅಂಥ ಶಬ್ದಗಳು ಸಂಸ್ಕೃತಕ್ಕೆ ದ್ರಾವಿಡಭಾಷೆಗಳಿಂದಲೇ ಬಂದಿರಬೇಕು ಎಂದು ಧಾರಾಳವಾಗಿ ನಿಶ್ಚಯಿಸ ಬಹುದು-**

ಎಂಬುದು ಆ ಪಾಶ್ಚಾತ್ತ್ಯ ವಿದ್ವಾಂಸನ ಮತ.

ರೆವರೆಂಡ್ ಎಫ್. ಕಿಟ್ಟಲ್‌ಸಾಹೇಬರು ಬರೆದಿರುವ ಕನ್ನಡ- ಇಂಗ್ಲಿಷು ನಿಘಂಟುವಿನಲ್ಲಿ ಸಂಸ್ಕೃತಕ್ಕೆ ದ್ರಾವಿಡಭಾಷೆಗಳಿಂದ ಬಂದಿರಬಹುದೆಂದು ತೋರುವ ಶಬ್ದಗಳನ್ನು- ಶರೀರಕ್ಕೆ ಸಂಬಂಧಪಟ್ಟವು, ಪ್ರಾಣಿಗಳಿಗೆ ಸೇರಿದ ಶಬ್ದಗಳು, ಮರಗಿಡಗಳಿಗೆ ಸಂಬಂಧಪಟ್ಟವು, ಲೋಹಗಳಿಗೆ ಸಂಬಂಧವಾಗಿರುವವು- ಎಂದು ಮುಂತಾಗಿ ವರ್ಗಗಳಾಗಿ ವಿಂಗಡಿಸಿ 420 ಶಬ್ದಗಳ ಒಂದು ಪಟ್ಟಿಯನ್ನು ಬರೆದಿರುತ್ತದೆ. ಅಲ್ಲಿರುವ ಶಬ್ದಗಳೆಲ್ಲ ಸಂಸ್ಕೃತಕ್ಕೆ ಹೊರಗಿನಿಂದಲೆ ಬಂದವುಗಳೆಂಬ ವಿಷಯಕ್ಕೆ ಮತಭೇದವಿರಬಹುದು. ಸಂಸ್ಕೃತದಿಂದ ದ್ರಾವಿಡಭಾಷೆಗಳಿಗೇ ಬಂದಿರಲಿ, ಸಂಸ್ಕೃತಕ್ಕೇ ಆ ಭಾಷೆಗಳಿಂದ ಬಂದಿರಲಿ, ಅಂತೂ ಕೆಲವು ಶಬ್ದಗಳು ಈ ಎರಡು ಭಾಷೆಗಳಿಗೂ ಸಮಾನವಾಗಿರುವಂತೆ ಕಾಣುತ್ತಿವೆ- ಎಂಬುದಕ್ಕೆ ಸಂಶಯವಿಲ್ಲ.

ಸಂಸ್ಕೃತವೂ ಕನ್ನಡವೂ ಒಂದಕ್ಕೊಂದು ಹತ್ತಿಕೊಂಡಿರುವ ಭಾಷೆಗಳೆಂಬುದಕ್ಕೆ ಸ್ವಲ್ಪವೂ ಸಂಶಯವಿಲ್ಲವೆಂದು ಈವರೆಗೆ ನಾನು ಬರೆದಿರುವ ಲೇಖನಗಳಿಂದ ಓದುಗರಿಗೆ ತೃಪ್ತಿಯಾಗಿರಬೇಕಷ್ಟೆ? ಇಷ್ಟು ಹತ್ತಿರವಾಗಿರುವ ಸಂಸ್ಕೃತವನ್ನು ಕಡೆಗಣಿಸುವದು ಕನ್ನಡಿಗರಿಗೆ ಯುಕ್ತವೆನಿಸೀತೆ? ಈ ಯುಕ್ತಿಗಳು ಕನ್ನಡದಂತೆ ಮಿಕ್ಕ ದ್ರಾವಿಡಭಾಷೆಗಳಿಗೂ ಅನ್ವಯಿಸುವವು. ಉತ್ತರದೇಶದಲ್ಲಿ ಬಳಕೆಯಲ್ಲಿರುವ ಸಂಸ್ಕೃತೋತ್ಪನ್ನಭಾಷೆಗಳಿಗಂತೂ ಸಂಸ್ಕೃತಸಂಬಂಧವು ಅತ್ಯಂತ ಅನಿವಾರ್ಯವಾಗಿರುತ್ತದೆ ಎಂಬುದನ್ನು ಹೇಳಬೇಕಾದದ್ದೇ ಇಲ್ಲ.

ಹೀಗೆ ಸಂಸ್ಕೃತವು ಭಾರತದೇಶದ ಭಾಷೆಗಳೊಡನೆ ಹಾಲುನೀರುಗಳಂತೆ ಹೊಂದಿಕೊಂಡಿದೆ ಎಂದಾಯಿತು. 'ಸಂಸ್ಕೃತಕ್ಕೆ ಬಹಿಷ್ಕಾರವನ್ನೇ ಹಾಕೋಣ' ಎಂದು ಪ್ರತಿಜ್ಞೆಮಾಡುವದು ನಮ್ಮ ದೇಶಭಾಷೆಗಳಿಗೆ ಮಾತೃದ್ರೋಹವಾಗುವದೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಸಂಸ್ಕೃತವನ್ನು ನಮ್ಮ ದೇಶದವರು ಹೇಗೆ ಕಾಣಬೇಕು? ಆ ಭಾಷೆ ಈಗಿನ ನಮ್ಮ ವ್ಯವಹಾರಕ್ಕೆ ಹೊಂದುಗೆಯಾಗಿದೆಯೆ? ಇದ್ದರೆ ನಾವು ಅದಕ್ಕೆ ಯಾವ ಸ್ಥಾನವನ್ನು ಕೊಡಬೇಕು?- ಎಂಬಿವೇ ಮುಂತಾದ ಪ್ರಶ್ನೆಗಳಿಗೆ ಮತ್ತೊಂದು ಲೇಖನದಲ್ಲಿ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡೋಣ.

* * * * *

# 36. ಸಂಸ್ಕೃತದೊಡನೆ ಉಳಿಯಿರಿ, ಇಲ್ಲವೆ ಅಳಿಯಿರಿ

ಅಣ್ಣಗಳಿರ, ಸಂಸ್ಕೃತವು ಕನ್ನಡಕ್ಕೆ ಎಷ್ಟರಮಟ್ಟಿಗೆ ಬೇಕಾಗಿದೆ, ಸಂಸ್ಕೃತವನ್ನು ಬಿಟ್ಟರೆ ಕನ್ನಡವು ಆತ್ಮಹತ್ಯೆಮಾಡಿಕೊಂಡತೆಯೇ ಆದೀತು- ಎಂಬುದನ್ನು ತಿಳಿಸಿದ್ದಾಯಿತು. ಈ ಮಾತು ಪ್ರತಿಯೊಂದು ದೇಶಭಾಷೆಗೂ ಅನ್ವಯಿಸುತ್ತದೆ. ಸಂಸ್ಕೃತವೇ ದೇಶಭಾಷೆಗಳು ಮೈದುಂಬಿಕೊಂಡು ಹೃಷ್ಟಪುಷ್ಟವಾಗಿರುವುದಕ್ಕೆ ಬೇಕಾಗಿರುವ ರಕ್ತಮಾಂಸಗಳು, ಉಸಿರು- ಇಷ್ಟೇ ಅಲ್ಲ, ಅವುಗಳ ಪರಮಾರ್ಥವಾದ ಇರವೆಂದರೆ ಸಂಸ್ಕೃತವೇ ಎಂಬುದನ್ನು ಯಾರೊಬ್ಬರೂ ಮರೆಯುವಂತಿಲ್ಲ.

ದೇಶಭಾಷೆಗಳೆಲ್ಲವೂ ಆಯಾ ರಾಷ್ಟ್ರದಲ್ಲಿ ಆಡಳಿತದ ಭಾಷೆಯಾಗಿರಬೇಕೆಂಬ ಹಿರಿಯಾಸೆಯನ್ನು ಪೂರ್ತಿಮಾಡಿಕೊಳ್ಳುವದಕ್ಕೆ ಪ್ರಯತ್ನಪಟ್ಟಿವೆ. ಆದರೆ ಅವು ಎಲ್ಲಾ ಬಗೆಯಿಂದಲೂ ಜೀವನದ ಎಲ್ಲಾ ವ್ಯವಹಾರಕ್ಕೂ ತಕ್ಕಷ್ಟು ಪುಷ್ಟಭಾಷೆಗಳಾಗಿ ಉಳಿಯಬೇಕಾದರೆ, ಆಯಾ ಪ್ರಾಂತದ ಭಾಷೆಯ ಸ್ಥಾನವನ್ನು ಭದ್ರವಾಗಿರಿಸಿಕೊಳ್ಳ ಬೇಕಾದರೆ ಸಂಸ್ಕೃತದ ಸಾಹ್ಯವು ಅವಕ್ಕೆ ಬೇಕು; ಇಲ್ಲದಿದ್ದರೆ ಅವುಗಳ ಕಾಲುಗಳು ಅದಿರಾಡುವದಕ್ಕೆ ಮೊದಲುಮಾಡುವವು, ಬೆನ್ನುಮೂಳೆಯು ಮುರಿದು ಹೋಗುವದು.

ಹಿಂದಿಪ್ರಚಾರದ ಉನ್ಮಾದವು ಈಗ ನಮ್ಮ ನಾಯಕರುಗಳಿಗೆ ಹೆಚ್ಚಾಗಿದೆ, ಆದರೆ ಹಿಂದಿಯು ಅರ್ಧಭಾಗಕ್ಕಿಂತ ಹೆಚ್ಚಾಗಿ ಸಂಸ್ಕೃತವೇ ಆಗಿರುತ್ತದೆ; **ಸಂಸ್ಕೃತವನ್ನು ಹಿಂದಕ್ಕೊತ್ತಿದರೆ ಹಿಂದಿಯು ಎಲ್ಲಾ ಭಾಷೆಗಳಿಗಿಂತಲೂ ಹಿಂದಕ್ಕೆ ಬೀಳುವದು; ಇದರಲ್ಲಿ ಸಂಶಯುವಿಲ್ಲ.**

ದೇಶದಲ್ಲಿ ಹಿಂದಿಯ ಜೊತೆಗೆ ಇಂಗ್ಲಿಷನ್ನು ಎಲ್ಲರೂ ಓದಲೇಬೇಕೆಂಬ ಹವಣಿಕೆಯು ಈಗ ಎದ್ದುಕೊಂಡಿದೆ. ಸಂಸ್ಕೃತವನ್ನು ಬಿಟ್ಟು ಈ ಗುರಿಯನ್ನೆ ಮುಂದು ಸಾಗಿಸಿದರೆ, 'ಮನೆಗೆ ಮಾರಿ, ಹೆರರಿಗೆ ಉಪಕಾರಿ' ಎಂಬ ಗಾದೆಗೆ ನಾವು ಉದಾಹರಣೆಯಾದೇವು' ಎಚ್ಚರಿಕೆ. ಇಂಗ್ಲಿಷು ಅನೇಕ ಜನಾಂಗಗಳಿಗೆ ಸಂಪರ್ಕಭಾಷೆ ಯಾಗಿರಬಹುದು; ಅದರಲ್ಲಿ ಉತ್ತಮವಾಙ್ಮಯವಿರಬಹುದು; ಆದರೆ ಅದನ್ನು ಜನ ಸಾಮಾನ್ಯವು ಕಲಿಯಲೇಬೇಕು- ಎಂಬುದು ಸಂಸ್ಕೃತವೆಂಬ ನಮ್ಮ ವ್ಯವಹಾರವೃಕ್ಷದ ತಾಯಿಬೇರಿಗೆ ಕೊಡಲಿಯನ್ನು ಹಾಕಿದಂತಾಗುವದು; ಇದನ್ನು ನೆನಪಿಡಿರಿ.

ಉತ್ತರದೇಶಗಳಲ್ಲಿ ದಕ್ಷಿಣದ ಭಾಷೆಯೊಂದನ್ನೂ ದಕ್ಷಿಣದೇಶದವರು

ಕಡ್ಡಾಯವಾಗಿ ಹಿಂದಿಯನ್ನೂ ಕಲಿಯಲೇಬೇಕೆಂಬ ಯೋಜನೆಯು ನಮ್ಮ ಮುಂದೆ ಇದೆ. ಇದು ಜನಗಳ ಸಂಪರ್ಕಕ್ಕೆ ಸಾಧನವೆಂದು ಹೇಳಲಾಗಿದೆ. ಆದರೆ ಆ ದೇಶದಲ್ಲಿ ಪ್ರಯಾಣಮಾಡುವವರು, ವರ್ತಕರಾಗಲಿ, ಯಾತ್ರಿಕರಾಗಲಿ, ಬೇರೆಬೇರೆಯ ಪ್ರಾಂತಗಳಲ್ಲಿ ವ್ಯವಹಾರಕ್ಕೆಂದು ಸಂಚರಿಸುವ ಪ್ರಯಾಣಿಕನಾಗಲಿ, ತಮಗೆ ಸಂಪರ್ಕಕ್ಕೆ ಬೇಕಾದ ಭಾಷೆಗಳನ್ನು ಅಗತ್ಯವಾಗಿ ಅವಶ್ಯವೆಂದು ಕಂಡಷ್ಟು ಮಟ್ಟಿಗೆ ಕಲಿತೇ ತೀರುತ್ತಾರೆ. ಇದಕ್ಕಾಗಿ ವಿದ್ಯಾಭ್ಯಾಸದ ಪಾಠದ ಪಟ್ಟಿಯಲ್ಲಿ ಈ ಕ್ರಮವನ್ನು ಒದಗಿಸುವ ಅವಿವೇಕವು ನಮ್ಮ ತಲೆಯಲ್ಲಿ ಏತಕ್ಕೆ ತೋರಿಕೊಳ್ಳಬೇಕೊ, ನನಗಂತೂ ತಿಳಿಯದು.

ಸಂಸ್ಕೃತಕ್ಕಿಂತ ದೇಶಭಾಷೆಗಳ ಪೋಷಕಭಾಷೆಯು ಹೇಗೆ ಇನ್ನೊಂದಿಲ್ಲವೋ, ಹಾಗೆಯೇ ದೇಶದ ಜನರನ್ನು ಸಂಸ್ಕೃತಿಯ ದೃಷ್ಟಿಯಿಂದ ಒಕ್ಕೂಟದಲ್ಲಿ ಸೇರಿಸುವ ಭಾಷೆ ಇದನ್ನು ಬಿಟ್ಟರೆ ಮತ್ತೊಂದು ಇಲ್ಲ. ಅಳಿಯನನ್ನು ಬಿಟ್ಟು ದಿಬ್ಬಣ ತೆರಳುವಂತೆ, ನಾವೇಕೆ ಈ ಭಾಷೆಯನ್ನು ಮೂಲೆಗೆ ಮುಟ್ಟಾಗಿಸುತ್ತಿದ್ದೇವೆಯೋ ನನಗಂತೂ ಸ್ವಲ್ಪವೂ ತಿಳಿಯದೆ ಇದೆ.

ಭಾರತದೇಶದ ಜನರಲ್ಲಿ ವಿವಿಧಭಾಷೆಗಳವರು, ವಿವಿಧವೇಷಗಳವರು ವಿವಿಧದೇಶಾಚಾರವುಳ್ಳವರು, ಬಗೆಬಗೆಯ ಮತಪ್ರಭೇದಗಳಿಗೆ ಸೇರಿದವರು- ಇಷ್ಟೆಲ್ಲ ಇದ್ದರೂ ನಮ್ಮ ವಾಙ್ಮಯಗಳೂ, ಕಲೆಗಳೂ, ಗಣಿತವೈದ್ಯಾದಿಲೌಕಿಕವಿದ್ಯೆಗಳು, ಐತಿಹಾಸಿಕಘಟನೆಗಳು- ಇವೆಲ್ಲಕ್ಕೂ ಆಧಾರವಾಗಿ ಒಂದು ಸಂಸ್ಕೃತಿಯಿದೆ. ಆ ಸಂಸ್ಕೃತಿಯನ್ನು ಉತ್ತಮ ರೀತಿಯಿಂದ ಪ್ರತಿಬಿಂಬಿಸುವ ಭಾಷೆ ಎಂದರೆ ಸಂಸ್ಕೃತವೇ ಆಗಿರುತ್ತದೆ. ಈ ದೇಶವೆಲ್ಲ ಒಂದೇ ಎಂಬುದನ್ನು ನೆನಪಿಗೆ ತರುವ 'ಆಸೇತು ಹಿಮಾಚಲಪರ್ಯಂತ' 'ಕನ್ಯಾಕುಮಾರಿಯಿಂದ ಕಾಮರೂಪದವರೆಗೆ' ಇತ್ಯಾದಿ ವಚನವ್ಯಕ್ತಿಗಳು ಸಂಸ್ಕೃತದಲ್ಲಿಯೇ ಇವೆ. ರಾಮಾಯಣ ಮಹಾಭಾರತಗಳನ್ನು ನಮಗೆ ಅನುಗ್ರಹಿಸಿದ ವ್ಯಾಸವಾಲ್ಮೀಕಿಗಳು ಭಾರತದೇಶದ ಐಕ್ಯವನ್ನು ಗಟ್ಟಿಗೊಳಿಸಿರುವರಲ್ಲದೆ 'ರಾಮ' 'ಕೃಷ್ಣ' ಎಂಬ ಎರಡು ಸುಪ್ರಸಿದ್ಧ ಭಗವದವತಾರಗಳನ್ನು ನಮ್ಮ ಬಗೆಗಣ್ಣಿನ ಮುಂದೆ ಇಟ್ಟಿರುತ್ತಾರೆ ; ಬಾದರಾಯಣರು ಮಾನವ ಜನತೆಗೇ ಏಕೆ ಇಡಿಯ ಪ್ರಾಣಿ ವರ್ಗಕ್ಕೆಲ್ಲ ಆತ್ಮನಾಗಿರುವ ಪರಬ್ರಹ್ಮವನ್ನು ತಿಳಿಸಿಕೊಟ್ಟು **'ಜಗತ್ತೆಲ್ಲವೂ ಪರಮಾರ್ಥ ವಾಗಿ ಬ್ರಹ್ಮವೇ'** ಎಂಬ ಉದಾತ್ತ ಭಾವನೆಯನ್ನು ನಮಗೆ ಕೊಟ್ಟಿರುತ್ತಾರೆ.

ಆದ್ದರಿಂದ ಭಾರತದೇಶದ ಭ್ರಾತೃವೃಂದ, 'ಸಂಸ್ಕೃತವೇ ರಾಷ್ಟ್ರದ ಅಧಿಕೃತ ಭಾಷೆಯಾಗುವಂತೆ ಜನರೆಲ್ಲರೂ ಪ್ರಯತ್ನಿಸಬೇಕು' ಎಂದು **ರಾಷ್ಟ್ರಪತಿಗಳಾದ ಡಾ|| ರಾಧಾಕೃಷ್ಣನ್‌ರವರು ಸೂಚಿಸಿರುವದನ್ನು ಲಕ್ಷ್ಯವಾಗಿಟ್ಟುಕೊಳ್ಳಿರಿ.** ವೈದಿಕಜನರು, ಸಂಸ್ಕೃತಪಂಡಿತರು, ದೇವಾಲಯಗಳ ಅಧಿಕಾರಿಗಳು, ಮಠಾಧಿಪತಿಗಳು, ವೇದಾಂತಿಗಳು, ದೇಶಾಭಿಮಾನಿಗಳು, ಉದಾರಭಾವನೆಯುಳ್ಳ ಸಮಾಜಸುಧಾರಕರು, ಗೃಹಲಕ್ಷ್ಮಿಯರೆನಿಸಿರುವ ವಿದ್ಯಾವತಿಯರಾದ ಮಹಿಳೆಯರು-ಎಲ್ಲರೂ ಸಂಸ್ಕೃತವನ್ನು ಮಾತನಾಡುವದು, ಓದುವದು, ಬರೆಯುವದು- ಇವುಗಳನ್ನು ನಿಮ್ಮ ನಿಮ್ಮ ಕ್ಷೇತ್ರಗಳಲ್ಲಿ ಪ್ರಚಾರಮಾಡಿರಿ.

* * * * *

## 37. ಸಂಸ್ಕೃತವೂ ಬ್ರಾಹ್ಮಣರೂ

ಸಂಸ್ಕೃತವು ಭರತಖಂಡದ ಭಾಷೆಗಳಲ್ಲಿ ಒಂದು ಎಂದು ಸರಕಾರದವರು ಒಪ್ಪಿರುತ್ತಾರೆ. ಗಿಳಿಯನ್ನು ಪಂಜರದಲ್ಲಿಟ್ಟು ಹಾಲನ್ನೂ ಹಣ್ಣನ್ನೂ ಕೊಡುವಂತೆ, ಸಂಸ್ಕೃತವನ್ನು 'ದೇವಭಾಷೆ' ಎಂದು ಹೊಗಳುತ್ತಾ ಅದಕ್ಕೂ ಒಂದು ಸ್ಥಾನವಿದೆ ಎಂದು ಹೇಳುತ್ತಿರುವದು ಜನಾನುರಾಗವನ್ನು ಗಳಿಸುವದಕ್ಕೆ ಒಂದು ಉಪಾಯವಾಗಿರ ಬಹುದು; ಆದರೆ ಆ ದಿವ್ಯಭಾಷೆಗೆ ಪೂಜ್ಯಭಾವವನ್ನು ತೋರಿಸುವ ಪ್ರಕಾರವೇನೂ ಇದಲ್ಲವೆಂಬುದು ಸ್ಪಷ್ಟವಿ. ಭಾರತದೇಶದ ಹಲವು ಭಾಷೆಗಳಿಗೆ ಜನನಿಯಾಗಿರುವ, ಮತ್ತು ಕೆಲವು ಭಾಷೆಗಳಿಗೆ ಧಾತ್ರಿಯಾಗಿರುವ ಈ ಭಾಷೆಯ ನಿಜವಾದ ಬೆಲೆಯನ್ನು ಕಂಡುಕೊಂಡು ಅದಕ್ಕೆ ಸರ್ವೋಚ್ಚಸ್ಥಾನವನ್ನು ಕೊಡುವ ಮನಸ್ಸು ಒಂದಲ್ಲ ಒಂದುದಿನ ಸರಕಾರದವರಿಗೂ ಬರದೆಹೋಗಲಾರದು. ಆದರೆ ಆವರೆಗೆ ಪ್ರಜಾವರ್ಗದವರೇನು ಮಾಡಬೇಕು? ಆ ಭಾಷೆಯನ್ನು ಜನಾನುರಾಗಕ್ಕೆ ತಕ್ಕದ್ದಾಗಿ ಮಾಡುವದಕ್ಕೆ ಯಾವಯಾವ ವರ್ಗದ ಜನರು ಯಾವಯಾವ ಬಗೆಯಲ್ಲಿ ಪ್ರಯತ್ನವನ್ನು ಮಾಡಬೇಕು?- ಎಂಬ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವದಕ್ಕೆ ಪ್ರಯತ್ನಿಸೋಣ.

ಮೊಟ್ಟಮೊದಲು ಈ ದೇಶದಲ್ಲಿರುವ ಬ್ರಾಹ್ಮಣವರ್ಗದವರ ಕರ್ತವ್ಯವನ್ನು ಇಲ್ಲಿ ಹೇಳಬೇಕಾಗಿದೆ. 'ಬ್ರಾಹ್ಮಣನಾದವನು ಯಾವದೊಂದು ಪ್ರಯೋಜನವನ್ನೂ ಬಯಸದೆ ವೇದವನ್ನು ಆರು ಅಂಗಗಳೊಡನೆ ಅಧ್ಯಯನಮಾಡಬೇಕು- ಎಂಬ ವಿಧಿ ಯೊಂದು ಇದೆ. ವೇದಾಧ್ಯಯನ, ಶಾಸ್ತ್ರವಿಚಾರ- ಇವುಗಳನ್ನು ತಪ್ಪದೆ ಮಾಡುವದೂ

ಮಾಡಿಸುವದೂ ಬ್ರಾಹ್ಮಣ್ಯದ ರಕ್ಷಣೆಗೆ ಅತ್ಯವಶ್ಯವಾಗಿರುತ್ತದೆ- ಎಂಬುದು ಶ್ರುತಿಸ್ಮೃತಿಗಳ ಕಟ್ಟಪ್ಪಣೆ. ಐಹಿಕಪಾರತ್ರಿಕಸುಖಕ್ಕೆ ತಮ್ಮ ತಮ್ಮ ವರ್ಣದ ಮತ್ತು ಆಶ್ರಮದ ಕರ್ಮವನ್ನು ಮಾಡುವದು ಅತ್ಯವಶ್ಯವೆಂಬುದು ನಮ್ಮ ಹಿರಿಯರ ಜೀವನಸೂತ್ರವಾಗಿತ್ತುಃ. **''ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯ ಕರ್ಮ ಫಲಮ್ ಅನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲಧರ್ಮಾಯುಃ ಶ್ರುತವೃತ್ತವಿತ್ತಸುಖಮೇಧಸೋ ಜನ್ಮ ಪ್ರತಿಪದ್ಯನ್ತೇ''** ಆಯಾ ವರ್ಣದ ಮತ್ತು ಆಶ್ರಮದವರು ತಮ್ಮತಮ್ಮ ಕರ್ಮದಲ್ಲಿಯೇ ನಿಷ್ಠರಾಗಿದ್ದರೆ ಈ ಲೋಕವನ್ನು ಬಿಟ್ಟಮೇಲೆ ಪರಲೋಕದಲ್ಲಿ ಆ ಪುಣ್ಯದ ಫಲವನ್ನು ಅನುಭವಿಸಿ, ಉಳಿದ ಕರ್ಮದ ಫಲವಾಗಿ ಅದಕ್ಕೆ ತಕ್ಕ ದೇಶ, ಜಾತಿ, ಕುಲ, ಧರ್ಮ, ಆಯುಸ್ಸುಃ, ಶಾಸ್ತ್ರಜ್ಞಾನ, ನಡತೆ, ಧನ, ಸುಖ, ಮೇಧಾಶಕ್ತಿ- ಇವುಗಳಿಂದ ಕೂಡಿದ ಜನ್ಮವನ್ನು ಪಡೆಯುತ್ತಾರೆ- ಎಂದು ಆಪಸ್ತಂಬರು ಬರೆದಿರುತ್ತಾರೆ.

ಜ್ಞಾನಕ್ಕಾಗಿಯೇ ಜೀವನವನ್ನೆಲ್ಲ ಧಾರೆಯೆರೆದು ಪರರಿಗೂ ಸದಾಚಾರ ಸದ್ವಿಚಾರಗಳಲ್ಲಿ ಆಸಕ್ತಿಯನ್ನುಂಟುಮಾಡಬೇಕೆನ್ನುವ ಗುರಿಯನ್ನೇ ಇಟ್ಟುಕೊಂಡಿರುವ ಉತ್ತಮಬ್ರಾಹ್ಮಣರು ವೇದಾಭ್ಯಾಸವನ್ನು ಮಾಡಿ, ಸಂಸ್ಕೃತಭಾಷೆಯನ್ನು ತಾವೂ ಕಲಿತು ಜನರಿಗೂ ಆ ದಿವ್ಯಭಾಷೆಯಲ್ಲಿ ಆದರವನ್ನುಂಟುಮಾಡುವದು ತಮ್ಮ ಕರ್ತವ್ಯವೂ ಪುರುಷಾರ್ಥಸಾಧನವೂ ಆಗಿರುವದೆದು ನಂಬುವ ಕಾಲವೊಂದಿತ್ತುಃ. ಆ ನಂಬಿಕೆಯು ಸಡಿಲವಾದಂತೆಲ್ಲ ಬ್ರಾಹ್ಮಣರಲ್ಲಿ ಕಾಮವು ಹೆಚ್ಚಿ ಅನಾಚಾರದಲ್ಲಿ ಆಸಕ್ತಿಯುಂಟಾಗಿರಬೇಕು. ನಮ್ಮ ದೇಶದ ದೌರ್ಭಾಗ್ಯದಿಂದ ಆರ್ಯಾಚರಣೆಯಲ್ಲಿ ಆದರವಿಲ್ಲದವರೂ ಆಾಭೌತಿಕದೃಷ್ಟಿಪ್ರಧಾನರೂ ಆದ ಪರದೇಶದವರ ಆಳ್ವಿಕೆಗೆ ನಾವು ಒಳಪಟ್ಟಮೇಲೆ, ಐಹಿಕಜೀವನವನ್ನು ನಿರ್ವಾಹಮಾಡಿಕೊಳ್ಳುವ ಹವಣಿಕೆಯಿಂದ ಬ್ರಾಹ್ಮಣರು ಕರ್ತವ್ಯವಿಮುಖರಾಗಿ ಅಧರ್ಮಕ್ಕೂ ಕೈಹಾಕಿದರು. ಕಾಲಕ್ರಮದಲ್ಲಿ ವೇದವಿಮುಖರಾದರು, ಸಂಸ್ಕೃತಭಾಷೆಯನ್ನು ಬಿಟ್ಟು ರಾಜಭಾಷೆಯಲ್ಲಿಯೇ ಆಸಕ್ತಿಯನ್ನು ವಹಿಸಿದರು. ಹೀಗೆ ಬ್ರಾಹ್ಮಣ್ಯವು ಖಿಲವಾಗಲು ಸಂಸ್ಕೃತಕ್ಕೆ ಪೋಷಣೆಯೂ ಪ್ರೋತ್ಸಾಹವೂ ಕಡಿಮೆಯಾಗಿ ಅದು ಆಡುವ ಭಾಷೆಯಾಗಿದ್ದದ್ದು ಕೃಶವಾಗಿ ಗ್ರಂಥಸ್ಥಭಾಷೆಯಾಯಿತು. ಬ್ರಾಹ್ಮಣರನ್ನೇ ಅನುಕರಿಸುತ್ತಿದ್ದ ಇತರರೂ ಅವರನ್ನೇ ಹಿಂಬಾಲಿಸಿದರು. ಸಂಸ್ಕೃತವು ಹೆಚ್ಚು ಹೆಚ್ಚಾಗಿ ಕಣ್ಮರೆಯಾಗಲು ಜನರು ತಮ್ಮ ಸಂಸ್ಕೃತಿಯನ್ನೂ ಮರೆಯುತ್ತಾ ಬಂದರು.

ಈಗಿನ ಶೋಚನೀಯಸ್ಥಿತಿಗೆ ಇಳಿದಿರುವ ಜನಸಾಮಾನ್ಯಕ್ಕೆ ಬ್ರಾಹ್ಮಣರೇ

ಮೊಟ್ಟಮೊದಲು ದಾರಿಯನ್ನು ತೋರಿಸಬೇಕೆಂಬುದು ಸ್ಪಷ್ಟವಾಗಿದೆ. ಸಂಸ್ಕೃತದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ- ಎಂಬ ನಾಲ್ಕು ಪುರುಷಾರ್ಥಗಳಿಗೂ ಸಾಧನವಾಗಿರುವ ಗ್ರಂಥಗಳು ಹೇರಳವಾಗಿವೆ. ಬ್ರಾಹ್ಮಣರಾದವರು ತಾವು ಮಾಡಿರುವ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಕೂಡಲೆ ವೇದಾಭ್ಯಾಸವನ್ನೂ ಸಂಸ್ಕೃತಾಭ್ಯಾಸವನ್ನೂ ತಮ್ಮ ವರ್ಗದವರಲ್ಲಿ ಮೊದಲು ಆಚರಣೆಗೆ ತರಬೇಕು. ಋಷಿಗಳು ತಮಗೆ ಮಾಡಿಕೊಟ್ಟಿರುವ ಉಪಕಾರದ ಋಣವನ್ನು ತೀರಿಸುವದು ಅತ್ಯವಶ್ಯವೆಂದೂ ಬ್ರಾಹ್ಮಣ್ಯವನ್ನು ತಾವೂ ರಕ್ಷಿಸಿಕೊಂಡರೆ ಧರ್ಮವೇ ರಕ್ಷಿತವಾಗುವದೆಂದೂ ನಂಬಿ ಅಲ್ಲಲ್ಲಿ ಸಂಸ್ಕೃತಪಾಠಶಾಲೆಗಳನ್ನು ಸ್ಥಾಪಿಸಿ ಜನಸಾಮಾನ್ಯಕ್ಕೆ ಆ ಭಾಷೆಯ ಪರಿಚಯವನ್ನು ಮಾಡಿಕೊಡುವ ಪ್ರಯತ್ನವನ್ನು ಮಾಡಬೇಕು. ಸಂಸ್ಕೃತಭಾಷೆಯಲ್ಲಿ ಪ್ರಚಲಿತವಿಷಯಗಳನ್ನು ಕುರಿತು ಗ್ರಂಥಗಳನ್ನು ಲಲಿತವಾದ ಭಾಷೆಯಲ್ಲಿ ರಚಿಸಿಕೊಳ್ಳಬೇಕು. ಇಂಗ್ಲಿಷುಭಾಷೆಯಲ್ಲಿ ಲೌಕಿಕವಿಚಾರಗಳನ್ನು ಕುರಿತ ಪುಸ್ತಕಗಳು ಸಿದ್ಧವಾಗಿರುವದನ್ನೇ ಅನುಕರಿಸಿ ಸುಲಭವಾಗಿ ಹುಡುಗರೂ ವಯಸ್ಕರೂ ತಿಳಿಯುವದಕ್ಕೆ ತಕ್ಕ ವಿಷಯಗಳನ್ನು ಒಳಗೊಂಡ ಬೇರೆಬೇರೆಯ ಅಂತಸ್ತಿನ ಸಂಸ್ಕೃತಪುಸ್ತಕಗಳನ್ನು ಹೊರಕ್ಕೆ ತರಬೇಕು. ಬರಿಯ ಕಾವ್ಯಗಳನ್ನು ಓದಿಸಿ ಕೃತಾರ್ಥರಾಗುವೆವೆಂಬ ಹುಚ್ಚು ನಂಬಿಕೆಯನ್ನು ಬದಿಗಿಟ್ಟು ಗಣಿತ, ಇತಿಹಾಸ, ಭೂವಿವರಣೆ, ಆರೋಗ್ಯಶಾಸ್ತ್ರ- ಮುಂತಾದ ವಿಷಯಗಳನ್ನು ಕುರಿತ ಗ್ರಂಥಗಳನ್ನು ಓದುವದು, ಅರ್ಥವನ್ನು ಹೇಳುವದು, ವಿಷಯಗಳನ್ನು ಕುರಿತು ಸಂಭಾಷಣೆ ಮಾಡುವದು-ಮುಂತಾದ ಕ್ರಮಗಳನ್ನು ಅನುಸರಿಸಬೇಕು.

**ಎಲ್ಲಕ್ಕೂ ಮೊದಲು ಸಂಸ್ಕೃತಭಾಷೆಯಲ್ಲಿ ಸಂಭಾಷಣೆ ಮಾಡುವ ಪದ್ಧತಿಯನ್ನು ಆಚರಣೆಗೆ ತರಬೇಕು.** ಮನೆಯಲ್ಲಿ ಹೆಂಗಸರು, ಮಕ್ಕಳು, ಅತಿಥಿಗಳು, ಅಭ್ಯಾಗತರು- ಮೊದಲಾದವರೊಡನೆ ಸಂಸ್ಕೃತದಲ್ಲಿಯೇ ಮಾತನಾಡುವದಕ್ಕೆ ಬೇಕಾದ ಸಂಭಾಷಣೆಯ ಪುಸ್ತಕಗಳನ್ನು ಏರ್ಪಡಿಸಿಕೊಳ್ಳಬೇಕು. ಭಾಷೆಯ ತಳಹದಿಯಾಗಿ ಅತ್ಯವಶ್ಯವಾಗಿ ಬೇಕಾಗುವ ಸರ್ವನಾಮಗಳು, ವಿಶೇಷಣಗಳು, ಸಂಖ್ಯಾವಾಚಕಗಳು, ಅವ್ಯಯಗಳು, ದಿನದಿನದ ವ್ಯವಹಾರದಲ್ಲಿ ಬಳಕೆಯಲ್ಲಿರುವ ವಸ್ತುಗಳ ಹೆಸರುಗಳು- ಇವುಗಳನ್ನು ಕುರಿತ ಪ್ರಧಾನಶಬ್ದಗಳನ್ನೊಳಗೊಂಡ ಸಂಭಾಷಣೆಯ ಪುಸ್ತಕವೊಂದನ್ನು ಪ್ರಕಟಿಸಿ ಭಾಷಾಭಿಮಾನಿಗಳ ಸಹಾಯದಿಂದ ಉಚಿತವಾಗಿ ಜನಸಾಮಾನ್ಯರಲ್ಲಿ ಹಂಚುವ ಕಾರ್ಯವನ್ನು ಪ್ರಾರಂಭಿಸಬೇಕು. ನಮ್ಮ ದೇಶದ ಆಚಾರ, ವ್ಯವಹಾರಗಳ ಪರಿಚಯವನ್ನು ಮಾಡಿಕೊಡುವ ವಾಕ್ಯಗಳನ್ನೇ ಹೆಚ್ಚಾಗಿ ಬಳಸಬೇಕು. ವೃತ್ತಾಂತಪತ್ರಿಕೆ

ಗಳಲ್ಲಿ ಬರುವ ಸುದ್ದಿಗಳನ್ನು ಕುರಿತು ಸಣ್ಣಸಣ್ಣ ವಾಕ್ಯಗಳಿಂದ ಮಾತಾಡುವ ಪದ್ಧತಿಯನ್ನು ಬಳಕೆಗೆ ತರಬೇಕು.

**ಜನಸಾಮಾನ್ಯಕ್ಕೆ ಸಂಸ್ಕೃತದಲ್ಲಿ ಆದರವನ್ನುಂಟುಮಾಡುವದಕ್ಕೆ ಬ್ರಾಹ್ಮಣರೇ ಮೊದಲು ಮುಂದಕ್ಕೆ ಬರಬೇಕು.** ಈಗಿನ ರಾಜಕಾರಣದ ಗದ್ದಲದಲ್ಲಿ ಸಿಕ್ಕಿಕೊಂಡಿರುವವರೆಲ್ಲರಿಗೂ ಒಮ್ಮೆಗೇ ಇದರಲ್ಲಿ ರುಚಿ ತೋರಲಾರದೆಂಬುದು ನಿರೀಕ್ಷಿಸತಕ್ಕದೇ ಆಗಿದೆ. ಆದರೂ ಸ್ವಾರ್ಥಪರರಲ್ಲದೆ, 'ಇದು ಪರಮೇಶ್ವರನ ಆರಾಧನೆ, ಆತನು ಪ್ರಸನ್ನನಾದರೆ ನನ್ನ ಕರ್ತವ್ಯವನ್ನು ನೆರವೇರಿಸಿದಂತೆ ಆಯಿತು' ಎಂಬ ಬುದ್ಧಿಯಿಂದ ಈ ಮಹಾಕಾರ್ಯದಲ್ಲಿ ತೊಡುಗುವದಕ್ಕೆ ಸಿದ್ಧರಾಗುವ ಮಹನೀಯರು ಕೆಲವರೇ ಮೇಲುಪಂಕ್ತಿಯನ್ನು ಹಾಕಿಕೊಟ್ಟರೂ ಕ್ರಮಕ್ರಮವಾಗಿ ದೇಶದ ಸಂಸ್ಕೃತಿಯಲ್ಲಿ ಅಭಿಮಾನವುಳ್ಳ ಮಿಕ್ಕವರೂ ಇದರ ಮಹತ್ತ್ವವನ್ನು ಮನದಂದುಕೊಳ್ಳುವರು. ಮೊದಮೊದಲು ಕಷ್ಟವಾಗಿ ಕಂಡರೂ ಮಾಡುತ್ತಬಂದಂತೆಲ್ಲ ಕಾರ್ಯವು ಮಹಾಜನರ ಆದರಕ್ಕೆ ಪಾತ್ರವಾಗಿ ಭಾಷೆಯು ಬೇಗನೆ ಮೈದುಂಬಿಕೊಂಡು ಹರಿದಾಡುವದಕ್ಕೆ ಮೊದಲಾಗುವದು.

ಸಂಸ್ಕೃತಭಾಷೆಯನ್ನು ಅತ್ಯಂತಸುಲಭವಾಗಿ ಕಲಿಯುವ ಮತ್ತು ಜನರಿಗೆ ಕಲಿಯಿಸುವ ಉಪಾಯವುಂಟೆ? ಆ ಭಾಷೆಯು ಈಗಿನ ವ್ಯವಹಾರಕ್ಕೆ ಹೊಂದಿಕೊಳ್ಳುವಂತೆ ಮಾಡುವದಕ್ಕೆ ಅವಕಾಶವಿದೆಯೆ? ಅದನ್ನು ಬಹುಜನರ ಹಿತಕ್ಕೆ ನೆರವಾಗುವಂತೆ ಮಾಡುವದು ಸಾಧ್ಯವೆ ಎಂಬ ವಿಷಯದಲ್ಲಿ ಕೆಲವು ಅನುಷ್ಠೇಯವಾದ ಸೂಚನೆಗಳನ್ನು ಕೊಡುವ ಪ್ರಯತ್ನವನ್ನು ಇನ್ನೊಂದು ಲೇಖನಕ್ಕೆ ಇಟ್ಟುಕೊಳ್ಳುವೆನು.

* * * * *

## 38. ಸಂಸ್ಕೃತಕ್ಕೆ ಸ್ಥಳವೆಲ್ಲಿ?

ವಿಶ್ವಭಾರತದ ಸಂಸ್ಕೃತಸಾಹಿತ್ಯಸಮ್ಮೇಳನದವರು ಪ್ರಕಟಿಸಿರುವ ಪುಸ್ತಕಗಳನ್ನು ಸಮರ್ಪಣೆಮಾಡುವದಕ್ಕೆ ಏರ್ಪಡಿಸಿದ್ದ ಉತ್ಸವಸಮಾರಂಭದ ಸಂದರ್ಭದಲ್ಲಿ (7-8-1965) ನಮ್ಮ ಪ್ರಧಾನಮಂತ್ರಿಗಳಾದ **ಶ್ರೀ ಲಾಲಬಹದ್ದೂರಶಾಸ್ತ್ರಿಗಳವರು** 'ಹಿಂದೂಬಾಲಕರಿಗೆ ಸಂಸ್ಕೃತವು ಬರುವದಿಲ್ಲವೆಂದರೆ ಹಿಂದೂಧರ್ಮಕ್ಕೇ ಕಲಂಕ' ಎಂದರಂತೆ; **ರಾಜಸ್ಥಾನದ ಗವರ್ನರರಾಗಿರುವ ಡಾ॥ ಸಂಪೂರ್ಣಾನಂದರವರು**

ಅದೇ ಸಮಯದಲ್ಲಿ "ಈಗ ಆಚರಣೆಗೆ ಬರುವ ತ್ರಿಭಾಷಾಸೂತ್ರದಫಲವಾಗಿ ಇನ್ನು ಹತ್ತುಹನ್ನೆರಡು ವರ್ಷಗಳೊಳಗಾಗಿ ಸಂಸ್ಕೃತವು ನಮ್ಮ ದೇಶದಿಂದಲೇ ಸಂಪೂರ್ಣವಾಗಿ ಬಹಿಷ್ಕೃತವಾಗುವದೆಂದು ನನಗೆ ತೋರುತ್ತದೆ!" ಎಂದರಂತೆ. ನಮ್ಮ ದೇಶದ ಐಕ್ಯಭಾವನೆಯನ್ನು ರಕ್ಷಿಸಿಕೊಂಡುಬಂದಿರುವ ಸಂಸ್ಕೃತವು ಮಾಯವಾಗಿ, ಇನ್ನುಮುಂದೆ ಜಾತಕರ್ಮದಿಂದ ಅಂತ್ಯಸಂಸ್ಕಾರದವರೆಗೂ ಮಾಡಬೇಕಾದ ಕರ್ಮಗಳನ್ನು ಹಿಂದಿಯಲ್ಲಿಯೂ ದೇಶಭಾಷೆಗಳಲ್ಲಿಯೂ ಮಾಡಬೇಕಾದೀತು- ಎಂದೂ ನಿಜವಾಗಿ ನೋಡಿದರೆ ಸಂಸ್ಕೃತದಲ್ಲಿರುವ ಯೋಗ್ಯತೆಯು ಹಿಂದಿಯಲ್ಲಿಲ್ಲ ವಾದ್ದರಿಂದ ಹಿಂದಿಯು ಸಂಸ್ಕೃತದ ಸ್ಥಾನವನ್ನು ಎಂದಿಗೂ ಆಕ್ರಮಿಸಲಾರದೆಂದೂ ಸಾವಿರಾರು ವರ್ಷಗಳಿಂದ ಇಲ್ಲಿ ಬೇರೂರಿಕೊಂಡಿರುವ ಪದ್ಧತಿಗಳನ್ನು ಬದಿಗೊತ್ತಿ ಹೊಸಪದ್ಧತಿಗಳನ್ನು ಆಚರಣೆಗೆ ತರುವದು ಯುಕ್ತವಾಗಲಾರದೆಂದೂ ಅವರು ಸ್ಪಷ್ಟೋಕ್ತಿಗಳನ್ನಾಡಿದರೆಂದು ತಿಳಿದುಬಂದಿದೆ. ಆಗ ನಮ್ಮ ಶ್ರೇಷ್ಠಪ್ರಧಾನಿಗಳವರು "ನನಗೂ ಈ ವಿಷಯದಲ್ಲಿ ಚಿಂತೆಯಾಗಿದೆ. ಆದರೆ ಭಾಷೆಯ ಕಾನೂನು ಜಾರಿಗೆ ಬಂದಮೇಲೂ ಅವಶ್ಯವಾದ ಮಾರ್ಪಾಡುಗಳನ್ನು ಮಾಡುವದಕ್ಕೆ ಅವಕಾಶವಿಲ್ಲ ವೆಂದೇನೂ ಹೇಳುವದಕ್ಕೆ ಆಗುವದಿಲ್ಲ. ಸಂಸ್ಕೃತದ ಬೆಳವಣಿಗೆಯನ್ನೂ ಪ್ರಚಾರವನ್ನೂ ಒಂದು ಸ್ವತಂತ್ರಮಾರ್ಗದಿಂದಲೇ ಮಾಡಿಕೊಳ್ಳಬೇಕಾದದ್ದು ಅವಶ್ಯ" ಎಂದರಂತೆ!

ಹಿಂದಿಯನ್ನು ರಾಷ್ಟ್ರಭಾಷೆಯಾಗಿ ಮಾಡುವ ಸಂಭ್ರಮದಲ್ಲಿ ಸಂಸ್ಕೃತಭಾಷೆಗೆ ಅಂತ್ಯಸಂಸ್ಕಾರವಾಗುವ ಅಪಾಯವಿದೆ ಎಂಬುದನ್ನು ನಮ್ಮ ಜನನಾಯಕರುಗಳು ಮರೆತುಬಿಟ್ಟರೆಂಬುದಕ್ಕೆ ಮೇಲಿನ ಘಟನೆಯೂ ಒಂದು ಸಾಕ್ಷಿ ಎನ್ನಬಹುದು. ಈಗಿನ ನಮ್ಮ ಭಾಷಾವಿಕಾಸನನೀತಿಯು ವಿಲಕ್ಷಣವಾಗಿಬಿಟ್ಟಿದೆ. ನಮಗೆ **ಇಂಗ್ಲಿಷಿನ ವ್ಯಾಮೋಹವು** ತಪ್ಪುವಂತಿಲ್ಲ; ಆದ್ದರಿಂದ ಇಂಗ್ಲಿಷುಮಾಧ್ಯಮದಿಂದಲೇ ವಿದ್ಯಾಭ್ಯಾಸವು ನಡೆಯಬೇಕೆಂಬ ಒಂದು ಪಾಶಕ್ಕೆ ಒಂದು ಕಡೆ ನಾವು ಕಟ್ಟುಬಿದ್ದಿದ್ದೇವೆ. ಭಾರತದೇಶವನ್ನು ತುಂಡಿಸಿದರೂ ಚಿಂತೆಯಿಲ್ಲ, ದೇಶಭಾಷೆಗಳನ್ನು ಹಿಗ್ಗಿಸಿ ಅವುಗಳ ಮೂಲಕವೇ ವಿಶ್ವವಿದ್ಯಾನಿಲಯಗಳಲ್ಲಿಯೂ ಬೋಧನೆಯಾಗುವದು ಯುಕ್ತ- ಎಂಬ **ದೇಶಭಾಷಾಭಕ್ತಿಯ** ಪಾಶವು ಇನ್ನೊಂದುಕಡೆಗೆ ನಮ್ಮನ್ನು ಸೆಳೆಯುತ್ತಿದೆ. ಇನ್ನು ಹಿಂದಿಯಂತೂ **ರಾಷ್ಟ್ರಭಾಷೆ**ಯಾಗಲೇಬೇಕೆಂಬ ಅಭಿನಿವೇಶವು ನಮಗೆ ಎಂದಿಗೂ ಬಿಡಿಸಿಕೊಳ್ಳುವದಕ್ಕಾಗದ ನಾಗಪಾಶವಾಗಿಬಿಟ್ಟಿದೆ. ಅದಕ್ಕೆ ಎಲ್ಲರೂ ತಲೆಬಾಗಲೇಬೇಕು. ಇನ್ನು ನಮ್ಮ ಪ್ರಾಚೀನ ಇತಿಹಾಸವೂ ಇಂದಿನವರೆಗೂ ನಮ್ಮಲ್ಲಿ ಅಂಟಿಕೊಂಡಿರುವ

ಭಾರತಸಂಸ್ಕೃತಿಯೂ ಇರುವ **ಸಂಸ್ಕೃತಕ್ಕೆ ಸ್ಥಾನ**ವೆಲ್ಲಿ? ಸಂಸ್ಕೃತಪಾಠಶಾಲೆಗಳಲ್ಲಿಯೂ ಪಂಡಿತರ ಮಧ್ಯದಲ್ಲಿಯೂ ಇರುವಾಗ ಅದನ್ನು ಬಾಯಿತುಂಬ ಹೊಗಳಿ, 'ನಿನ್ನಪಾಡು ನಿನಗೆ' ಎನ್ನುವದೊಂದೇ ಉಳಿದಿರುವ ಗತಿ!

ಅಣ್ಣಗಳಿರ, ನಿಮ್ಮ ನಿಮ್ಮ ಹೃದಯುವನ್ನು ನೀವೇ ನಿಷ್ಪಕ್ಷಪಾತದಿಂದ ಪರೀಕ್ಷಿಸಿ ಕೊಂಡು ನಿಜವನ್ನು ಕಂಡುಕೊಳ್ಳಿರಿ, ಮೊಗಲುಬಾದಷಹರ ಕಾಲಕ್ಕೆ **ಪರ್ಷಿಯನ್** ಭಾಷೆಯನ್ನು ಸರಕಾರಭಾಷೆಯಾಗಿ ಮಾಡುವ ಪ್ರಯತ್ನವು ನಡೆಯಿತು. ಪೂನಾದ ಶ್ರೀಮಂತರ ಉಚ್ಛ್ರಾಯಕಾಲಕ್ಕೆ **ಮಹಾರಾಷ್ಟ್ರ**ಭಾಷೆಯೂ ಜನರಮೇಲೆ ತನ್ನ ಪ್ರಭಾವವನ್ನು ತಕ್ಕಷ್ಟು ಬೀರಿತು. ಇತ್ತೀಚೆಗೆ ಆಂಗ್ಲದೇಶದ ರಾಜ್ಯಭಾರವು ತಳವೂರಿದಾಗ **ಇಂಗ್ಲೀಷೇ** ಸರಕಾರಿಯ ಭಾಷೆಯಾಯಿತು. ಆಯಾಕಾಲಕ್ಕೆ ಜನರೂ ಆಯಾ ಸರಕಾರದ ಭಾಷೆಯ ಹಾವನ್ನೇ ಕುಣಿಸುತ್ತಾ ಪುಂಗಿವೂದುವ ಸಂಭ್ರಮವನ್ನು ತೋರಿಸಿದರು. ಫಲಿತಾಂಶವೇನಾಯಿತು? ದೇಶಭಾಷೆಗಳಿಗೆ ಆ ಅನ್ಯಭಾಷೆಗಳ ಸಂಪರ್ಕವೂ ಒಂದಿಷ್ಟು ಆಯಿತು. ಅಲ್ಲಲ್ಲಿ ಭಗ್ನಾವಶೇಷವಾಗಿ ಕಾಣುತ್ತಿರುವ ಪಾಳೆಯಗಾರರ ಕೋಟೆಗಳ ಭಾಗಗಳಂತೆ ಈಗಲೂ ನಾವು ಆ ಭಾಷೆಗಳ ಕೆಲಕೆಲವು ಶಬ್ದಗಳಿಗೆ ನಮ್ಮ ಭಾಷೆಗಳಲ್ಲಿ ಅವಕಾಶವನ್ನು ಕಲ್ಪಿಸಿ ಆದರಿಸುತ್ತಿದೇವೆ, ಅಷ್ಟೆ. ಆ ಭಾಷೆಗಳ ವಾಙ್ಮಯದಲ್ಲಿ ಅಮೋಘವಿಚಾರಗಳು ಅಡಗಿವೆ ಎಂಬುದಕ್ಕೆ ಸಂದೇಹವಿಲ್ಲ. ಎಲ್ಲಕ್ಕೂ ಮೇಲಾಗಿ ಇಂಗ್ಲಿಷು ಪ್ರಪಂಚದ ಬಹುಭಾಗದಲ್ಲಿ ಹರಡಿರುವ ವ್ಯಾವಹಾರಿಕ ಭಾಷೆ ಎಂಬುದು ಸುನಿಶ್ಚಿತವಾಗಿದೆ. ಆದರೂ ನಮ್ಮ ಈ ಭಾರತದೇಶದಲ್ಲಿ ಆ ಭಾಷೆಯನ್ನು ಬಲ್ಲವರು ನೂರಕ್ಕೆ ಐವರಿಗಿಂತ ಹೆಚ್ಚಾಗಿಲ್ಲ. ಕೈಹುಣ್ಣಿಗೆ ಕನ್ನಡಿ ಬೇಕೆ?

**ಸಂಸ್ಕೃತವು** ಕನ್ಯಾಕುಮಾರಿಯಿಂದ ಹಿಮಾಚಲದವರೆಗಿನ ಎಲ್ಲಾ ದೇಶಭಾಷೆ ಗಳಿಗೂ ತನ್ನ ಶಬ್ದಕೋಶವನ್ನು ಸೂರೆಮಾಡಿದೆ, ಭಾರತದೇಶದ ಭಾಷೆಗಳ ನಾಡಿಗಳಲ್ಲೆಲ್ಲ ಸಂಸ್ಕೃತಭಾಷಾರಕ್ತವು ಹರಿಯುತ್ತಿದೆ; ಈಗಲೂ ಸಂಸ್ಕೃತದಿಂದ ಆ ಭಾಷೆಗಳೆಲ್ಲವೂ ಸಾಲತೆಗೆದುಕೊಳ್ಳುತ್ತಲೇಇವೆ. ಸಂಸ್ಕೃತಗ್ರಂಥಗಳು ನಾವು ಆ ಭಾಷೆಯನ್ನು ಅನಾದರದಿಂದ ಕಾಣುತ್ತಿರುವ ಈ ಕಾಲದಲ್ಲಿಯೂ ಪ್ರಕಾಶಕ್ಕೆ ಬರುತ್ತಲೇ ಇವೆ. ಆ ಭಾಷೆಯ ಅಭ್ಯಾಸದಿಂದ ನಮ್ಮ ದೇಶಭಾಷೆಗಳೂ ರಾಷ್ಟ್ರಭಾಷೆಗಳೂ ಪುಷ್ಟಿಯಾಗುವದೇ ಹೊರತು ಅವಕ್ಕೆ ಯಾವ ಹಾನಿಯೂ ಇಲ್ಲ. ವಿಶಾಲ ಪ್ರಪಂಚದ ವ್ಯವಹಾರದಲ್ಲಿ ಭಾಗಿಗಳಾಗಬೇಕೆನ್ನುವವರಿಗೂ ಅನೇಕ ಭಾಷೆಗಳಿಂದ ಪರಿವರ್ತಿತವಾಗಿರುವ ಗ್ರಂಥಗಳ ಸಾರವನ್ನು ಹೀರಿಕೊಳ್ಳಬೇಕೆಂಬ ರಸಿಕರಿಗೂ

ಇಂಗ್ಲೀಷುಭಾಷೆಯ ಅಭ್ಯಾಸಕ್ಕೆ ಅವಶ್ಯವಾಗಿ ಅವಕಾಶವಿರಲಿ. ಆದರೆ **ಭಾರತದ ಸಂಸ್ಕೃತಿಯ ಜೀವಾಳವಾದ ಸಂಸ್ಕೃತವನ್ನು ತಳ್ಳಿಹಾಕಬೇಡಿರಿ. ಹಿಂದಿಗೂ ಕಲಿಮಾಡಿ ಸಂಸ್ಕೃತವನ್ನು ಸೇರಿಸಿಕೊಂಡು ಭಾರತದೇಶದ ಸಂಸ್ಕೃತಿಯನ್ನು ಉಜ್ಜೀವನಗೊಳಿಸಿರಿ. ಈ ದೇಶಕ್ಕೂ ಪರದೇಶಗಳಿಗೂ ಅದರಿಂದ ಸಕಲಪುರುಷಾರ್ಥಗಳೂ ಲಭಿಸುವವು.**

* * * * *

# 39. ಸಂಸ್ಕೃತ ಭಾಷೆಯ ಪ್ರಚಾರ

1971ರ ಮೇ ತಿಂಗಳ 5ನೆಯ ದಿನಾಂಕದಂದು ಸರ್ವೋಚ್ಚನ್ಯಾಯಲಯದ ಅಧಿಕಾರಿಗಳು ''ಈ ದೇಶದಲ್ಲಿರುವ ಯಾವ ಸಕಲವಿದ್ಯಾನಿಲಯದಲ್ಲಿಯೂ ಯಾವದಾದರೊಂದು ಪ್ರಾದೇಶಿಕಭಾಷೆಯನ್ನು ಬೋಧನೆಗೂ ಪರೀಕ್ಷೆಗೂ ಏಕೈಕಮಾಧ್ಯಮವಾಗಿರಬೇಕೆಂದು ನಿಯಮಿಸುವದಕ್ಕೆ ಶಕ್ಯವಿಲ್ಲ; ಇದು ದೇಶದ ಸಂವಿಧಾನದ 25 ರಿಂದ 30ರವರೆಗಿನ ನಿಬಂಧನೆಗಳಲ್ಲಿ ಜನರಿಗೆ ನೀಡಿರುವ ಮೂಲಹಕ್ಕುಗಳಿಗೆ ಆತಂಕವನ್ನುಂಟುಮಾಡೀತು'' ಎಂದು ತೀರ್ಮಾನಿಸಿದರಂತೆ.

ಈ ವಿಷಯವು ಸರ್ವೋಚ್ಚ ನ್ಯಾಯಲಯದ ತೀರ್ಪಿನಿಂದ ಗೊತ್ತಾಗುವಂತೆ ಮಾಡಿಕೊಂಡ ದೌರ್ಭಾಗ್ಯವು ಭಾರತದೇಶದ ಪಾಲಿಗೆ ಬಂದದ್ದು ಸರ್ವಥಾ ಶೋಚನೀಯವಾಗಿರುತ್ತದೆ. ಬ್ರಿಟಿಷರ ಕಾಲಕ್ಕೆ ದೇಶದ ಆಡಳಿತದ ಸೌಕರ್ಯಕ್ಕಾಗಿ ವಿಭಾಗಮಾಡಿದ್ದ ಕೆಲವು ಪ್ರಾಂತಗಳಲ್ಲಿ ವಿವಿಧದೇಶಭಾಷೆಗಳನ್ನು ವ್ಯವಹಾರಕ್ಕೆ ಉಪಯೋಗಿಸುತ್ತಿದ್ದದ್ದರಿಂದ ಪ್ರಾಂತೀಯಭಾಷೆಗಳು ಮುಂದುವರಿಯುವದಕ್ಕೆ ಅಡ್ಡಿಯಾಗಿದ್ದಿತು. ಅಂಥ ಅಡ್ಡಿಯನ್ನು ನೀಗುವದಕ್ಕೆಂದು ನಮ್ಮ ದೇಶಕ್ಕೆ ಸ್ವಾತಂತ್ರ್ಯವು ಬಂದ ಮೇಲೆ ಬಲುಮಟ್ಟಿಗೆ ಭಾಷಾನುಗುಣ ಪ್ರಾಂತಗಳನ್ನು ವಿಂಗಡಿಸುವ ಸೌಕರ್ಯವನ್ನು ಸರಕಾರದವರು ಮಾಡಿಕೊಟ್ಟಿದ್ದರ ಲಾಭವನ್ನು ಪಡೆಯುವದಕ್ಕೆಂದು ಆಯಾ ಭಾಷೆಯ ಭಕ್ತರು ಪ್ರಯತ್ನಿಸಿದ್ದು ಸ್ವಾಭಾವಿಕವೇ ಸರಿ. ಆದರೆ ಅಷ್ಟು ಮಾತ್ರದಿಂದ ಭಾಷಾಪ್ರಾಂತಗಳು ಒಂದರಮೇಲೊಂದು ರಾಗದ್ವೇಷಗಳನ್ನು ವ್ಯಕ್ತಪಡಿಸುವದಕ್ಕಾಗಲಿ ತಮ್ಮ ತಮ್ಮ ಪ್ರಾಂತದ ಭಾಷೆಯೇ ಎಲ್ಲ ಭಾಷೆಗಳಿಗಿಂತಲೂ ಹೆಚ್ಚಿನದಾಗಿರಬೇಕೆಂದೂ ಒಂದೊಂದು ಭಾಷಾಪ್ರಾಂತವೂ ಒಂದೊಂದು ಪಾಳೆಯಪಟ್ಟಾಗಿ ಪರಿಣಮಿಸಬೇಕೆಂದೂ ಹಠವನ್ನು ತೊಡುವದಕ್ಕಾಗಲಿ ಯಾವ ಕಾರಣವೂ ಇರಲಿಲ್ಲ. ನಮ್ಮ ದುರ್ದೈವದಿಂದಲೊ ಏನೊ, ಭಾಷೆಗಳ ಭಕ್ತರು ತಮ್ಮ

ತಮ್ಮ ನಾಡಿನ ಭಾಷೆಯ ವ್ಯಾಪ್ತಿಯು ಸಕಲವಿದ್ಯಾನಿಲಯಗಳು, ನ್ಯಾಯಸ್ಥಾನಗಳು- ಮುಂತಾದ ಎಲ್ಲ ಕಡೆಯಲ್ಲಿಯೂ ಸಾರ್ವಭೌಮವಾಗಿ ಬಾಳಬೇಕೆಂಬ ದುರಭಿಮಾನ ವನ್ನು ತಳೆಯುವಂತೆಯೇ ಆಯಿತು. ಅಲ್ಪಸಂಖ್ಯಾತರು ತಮ್ಮತಮ್ಮ ಧರ್ಮಕ್ಕೆ ಅನುಗುಣವಾದ ಭಾಷೆಯನ್ನೂ ಲಿಪಿಯನ್ನೂ ಉಪಯೋಗಿಸಿಕೊಂಡು ಅದಕ್ಕನುಗುಣವಾದ ಬೋಧನಮಾಧ್ಯಮವನ್ನು ಉಪಯೋಗಿಸಿಕೊಂಡು ವಿದ್ಯಾಭ್ಯಾಸದ ಸಂಸ್ಥೆಗಳನ್ನು ಏರ್ಪಡಿಸಿಕೊಳ್ಳುವ ಹಕ್ಕುಳ್ಳವರಾಗಿರುತ್ತಾರೆ - ಎಂದು ಸಂವಿಧಾನದಲ್ಲಿರುವದರಿಂದ ಅದಕ್ಕೆ ವಿರುದ್ಧವಾಗಿ ಯಾವ ಸಕಲ ಕಲಾನಿಲಯವೂ ನಿಯಮನಿಬಂಧನೆಗಳನ್ನು ಏರ್ಪಡಿಸಲಾಗದೆಂಬುದು ಸರ್ವೋಚ್ಚನ್ಯಾಯಸ್ಥಾನದ ಕಟ್ಟಕಡೆಯ ತೀರ್ಮಾನವಾಗಿರುತ್ತದೆ.

ಈಗಿನ ವಿದ್ಯಾಭ್ಯಾಸವು ಜನಸಾಮಾನ್ಯವನ್ನು ಒಕ್ಕಡೆಗೆ ಸೇರಿಸಿ ಮಾಡತಕ್ಕ ಶಿಕ್ಷಣರೀತಿಯಾಗಿರುವದರಿಂದಲೂ ಭಾರತದೇಶದ ಒಂದೊಂದು ಪ್ರಾಂತದಲ್ಲಿಯೇ ಎರಡುಮೂರು ಪ್ರಾಂತೀಯಭಾಷೆಗಳು ಪ್ರಚಾರದಲ್ಲಿರುವದರಿಂದಲೂ ಶಿಕ್ಷಣ ಮಾಧ್ಯಮವು ಯಾವ ಭಾಷೆಯಾಗಿರಬೇಕೆಂಬ ಪ್ರಶ್ನೆಯು ಎದ್ದುಕೊಳ್ಳುವದು ಸ್ವಾಭಾವಿಕವಾಗಿರುತ್ತದೆ. ಬಗೆಬಗೆಯ ಧರ್ಮಗಳ ಜನರೂ, ಬಗೆಬಗೆಯ ಆಚಾರಗಳ ಜನರೂ ಕೂಡಿಕೊಂಡು ಒಂದೇ ಸಂಸ್ಥೆಯಲ್ಲಿ ವಿದ್ಯಾಭ್ಯಾಸವನ್ನು ಮಾಡಬೇಕಾಗಿರು ವದರಿಂದಲೂ ಈ ಪ್ರಶ್ನೆಯು ಈಗ ಅನಿವಾರ್ಯವಾಗಿರುತ್ತದೆ. ಆದರೆ ವಿದ್ಯಾಭ್ಯಾಸ ವೆಂದರೇನು?- ಎಂಬ ಪ್ರಶ್ನೆಗೆ ಉತ್ತರವನ್ನು ಮೊದಲು ನಾವು ಕಂಡುಕೊಳ್ಳುವದು ಇಲ್ಲಿ ಅವಶ್ಯವಾಗಿರುತ್ತದೆ. ಈಗಿನ ಜನಜೀವನವು ರಾಷ್ಟ್ರನೀತಿಯ ಆಧಾರದಮೇಲೆ ಇದ್ದುಕೊಂಡು 'ದೇಶದ ನಾಗರಿಕನು ನಾನು; ನನ್ನ ಹಕ್ಕುಗಳು ಇವು, ನನ್ನ ಹೊಣೆಗಾರಿಕೆ ಯಿದು; ನಾನು ಹೊಟ್ಟೆಬಟ್ಟೆಗೆ ನೇರಾಗಿರುವದಕ್ಕೆ ಯಾವ ಉದ್ಯೋಗವನ್ನು ಕೈಕೊಳ್ಳಬೇಕೋ ಅದಕ್ಕೆ ತಕ್ಕ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳುವದು ಅವಶ್ಯ' ಎಂಬ ಬುದ್ಧಿಯು ಎಲ್ಲಾ ಜನರಲ್ಲಿಯೂ ಇದ್ದುಕೊಂಡುಬಿಟ್ಟಿರುತ್ತದೆ.

ಇದರಿಂದ ಭಾರತದೇಶದಲ್ಲಿರುವ ಬಹುಸಂಖ್ಯಾತರಾದ 'ಹಿಂದು'ಗಳು (ಸನಾತನಧರ್ಮೀಯರು) ತಮ್ಮ ದೇಶದ ಸಂಸ್ಕೃತಿಯ ಬೆಳವಣಿಗೆಗೆ ಭಾಷೆ, ಆಚಾರ, ಧರ್ಮಾನುಷ್ಠಾನ, ತತ್ತ್ವವಿಚಾರವೇ- ಮುಂತಾದವುಗಳಿಂದ (ಮನಸ್ಸಿನ ಮೇಲೆ ಆಗುವ ಸಂಸ್ಕಾರಕ್ಕೆ ಬೇಕಾದ) ಬುದ್ಧಿವಿಕಾಸದ ಸಾಧನವೆಂಬರ್ಥದಲ್ಲಿ ವಿದ್ಯಾಭ್ಯಾಸವು ನಮ್ಮ ದೇಶದಲ್ಲಿ ಇಲ್ಲವೇ ಇಲ್ಲ ಎನ್ನುವಷ್ಟು ಹಿಂದಕ್ಕೆ ಬಿದ್ದು ದಿನದಿನಕ್ಕೂ ಅನ್ವರ್ಥವಾಗಿ 'ಹಿಂದುಗಳೇ' ಆಗುತ್ತಾ ಬರುತ್ತಿದಾರೆ.

ಹಿಂದುಗಳು ಭಾರತದ ಯಾವ ಪ್ರಾಂತದಲ್ಲಿಯೇ ಇರಲಿ, ಯಾವ ಪ್ರಾಂತೀಯ ಭಾಷೆಯನ್ನೇ ಆಡುತ್ತಿರಲಿ, ಯಾವ ದೇಶಾಚಾರವಿಶೇಷವನ್ನೇ ಅವಲಂಬಿಸಿರಲಿ, ಅವರನ್ನೆಲ್ಲ ಒಂದುಗೂಡಿಸುವ ಸರ್ವಸಮಾನವಾದ ಆಚಾರವಿಚಾರಪದ್ಧತಿ, ಧರ್ಮಾವಲಂಬನೆ-ಇವುಗಳಿಗೆ ಅಡಿಗಲ್ಲಾಗಿರುವ ಇವರನ್ನು ಒಂದೇ ಮತ (ಒಂದೇ ಅಭಿಪ್ರಾಯ)ದವರು ಎನ್ನಿಸುವ ವಿದ್ಯಾಭ್ಯಾಸಕ್ಕೆ ಆಧಾರವಾಗಿರುವ ಭಾಷೆಯೊಂದಿದೆ. ಅದಕ್ಕೆ **ಸಂಸ್ಕೃತವೆಂದು ಹೆಸರು**. ಆ ಭಾಷೆಯನ್ನೂ ಅದರ ಸಂಪರ್ಕವನ್ನೂ ಹಿಂದುಗಳು ದಿನದಿನವೂ ಬಿಟ್ಟು ದೂರವಾಗಿ ಸರಿಯಲೇಬೇಕಾಗಿರುವ ಕಷ್ಟವು ಈಗಿನ ವಿದ್ಯಾಭ್ಯಾಸಪದ್ಧತಿಯಿಂದ ಬಂದುಬಿಟ್ಟಿದೆ. ಎಲ್ಲ ಸ್ಕೂಲ್‌ಗಳಲ್ಲಿಯೂ ಎಲ್ಲಾ ಜಾತಿಯ, ಎಲ್ಲಾ ಆಚಾರದ, ಎಲ್ಲಾ ಬಗೆಯ ನಂಬಿಕೆಯ, ಎಲ್ಲಾ ಪ್ರತ್ಯಾಶೆಗಳ, ಎಲ್ಲಾ ಬಗೆಯ ಜನರನ್ನೂ ಒಟ್ಟಿಗೆ ಸೇರಿಸಿ ವಿದ್ಯಾಭ್ಯಾಸವನ್ನು ಮಾಡಿಸುವ ಪದ್ಧತಿಯು ಬರುವದಕ್ಕೆ ಕಾರಣವೇನೆಂದರೆ; ಈ ದೇಶಕ್ಕೆ ವಿದೇಶದ ವಿಧರ್ಮಿಯರಾದ ಜನರು ದಂಡೆತ್ತಿ ಬಂದು ಕೆಲವು ಶತಮಾನಗಳಿಂದ ಈ ಬಹುಸಂಖ್ಯಾತರನ್ನು ಆಳುತ್ತಲೂ ತಮ್ಮ ಆಚಾರ ವಿಚಾರಗಳನ್ನು ಇವರ ಮೇಲೆ ಹೇರುತ್ತಲೂ ಬಂದದ್ದರಿಂದಲೂ ವಿದೇಶದವರ- ಅದರಲ್ಲಿಯೂ ಮುಖ್ಯವಾಗಿ ಬ್ರಿಟಿಷರ- ಆಚಾರವಿಚಾರಗಳ ಸಂಸ್ಕಾರವೇ ವಿದ್ಯಾಭ್ಯಾಸವೆಂಬ ನಂಬಿಕೆಯು ಇವರಲ್ಲಿ ಬೇರೂರುತ್ತಾ ಬಂದದ್ದರಿಂದಲೂ ಈ ಪರಿಸ್ಥಿತಿಯು ಉಂಟಾಗಿರುತ್ತದೆ. ಆತ್ಮವಿಕಾಸಕ್ಕೆ ಅತ್ಯವಶ್ಯಕವಾಗಿರುವ ಶಾಸ್ತ್ರಶ್ರದ್ಧೆ, ಕರ್ಮಫಲಗಳ ಸಂಬಂಧದಲ್ಲಿ ಶ್ರದ್ಧೆ, ಜನ್ಮಾಂತರಲೋಕಾಂತರಗಳಲ್ಲಿ ಆಗಬಹುದಾದ ಕರ್ಮಫಲದಲ್ಲಿ ಆಸ್ತಿಕ್ಯ, ದೈವೀಸಂಪತ್ತಿನ ಗುಣಗಳನ್ನು ಸಂಪಾದಿಸಬೇಕಾದ ಅವಶ್ಯಕತೆಯಲ್ಲಿ ವಿಶ್ವಾಸ, ಈಶ್ವರನ ಅಸ್ತಿತ್ವದಲ್ಲಿ ಶ್ರದ್ಧೆ, ಶೌಚಾಚಾರಗಳಲ್ಲಿ ಆಸಕ್ತಿ-ಇಂಥವುಗಳ ತಿಳಿವಳಿಕೆಯನ್ನು ಕೊಡುವ ವಿದ್ಯಾಭ್ಯಾಸವು ಇವರಿಗೆ ಸರ್ವಸುಲಭ ವಾಗಿ ಸಿಕ್ಕುವಂತಿದ್ದರೂ ಸಮೃದ್ಧಿಯಾಗಿರುವ ಧನಧಾನ್ಯಗಳ ದೇಶದಲ್ಲಿ ದಿನದಿನವೂ ಹಸಿವುಬಾಯಾರಿಕೆಗಳಿಂದ ನರಳುವ ಮೂರ್ಖರಂತೆ ಪರಮಾರ್ಥವಾದ ವಿದ್ಯಾಭ್ಯಾಸ ದಿಂದ ವಂಚಿತರಾಗುವ ದುಃಸ್ಥಿತಿಯು ಇವರಿಗೆ ಬಂದಿದೆ.

ಪರಸ್ಪರ ಸಹಾಯದಿಂದ ಇಹಪರಸೌಖ್ಯವನ್ನು ಸಂಪಾದಿಸಿಕೊಂಡು ಪರಮ ಪುರಷಾರ್ಥಕ್ಕೆ ಅರ್ಹರಾಗಬಹುದಾದ ಸೌಕರ್ಯಗಳು ತಮ್ಮ ಬಳಿಯಲ್ಲಿಯೇ ಇದ್ದರೂ ವರ್ಣಾಶ್ರಮಧರ್ಮ, ಧರ್ಮಶಾಸ್ತ್ರಗಳ ಅಭ್ಯಾಸ, ಅಧ್ಯಾತ್ಮವಿದ್ಯೆಯ ಮರ್ಮದ ಜ್ಞಾನ- ಇವುಗಳಿಂದಾಗುವ ಲಾಭವನ್ನು ಕಳೆದುಕೊಂಡು ಹಿಂದಿನ ಆಚಾರವಿಚಾರ ಧರ್ಮಾನುಷ್ಠಾನಗಳಿಂದ ಎಷ್ಟೇ ಲಾಭವಾಗಲಿ, ಅವುಗಳನ್ನೆಲ್ಲ ಮೂಢವಿಶ್ವಾಸಗಳೆಂದು

ಹಳಿಯುತ್ತ ಪರದೇಶದ ಆಡಳಿತವು ಈಗ ಇಲ್ಲವಾದರೂ ಪರದೇಶದವರ ಭಾಷೆ, ವೇಷ ಆಚಾರ-ಇವುಗಳನ್ನು ಇನ್ನೂ ಅನುಕರಿಸುತ್ತಾ ಹಿಂದೆ **ನರ**ರಾಗಿದ್ದವರು ಈಗ **ವಾನ**ರರಾಗುತ್ತಿದಾರೆ. ಹಿಂದೆ ನಿಜವಾದ ಮಾನವರಾಗಿದ್ದವರು ಈಗ **ದಾನ**ವರಾಗುವ ಸಂಸ್ಕೃತಿಯನ್ನು ಅವಲಂಬಿಸುತ್ತಾ ಬರುತ್ತಿದ್ದಾರೆ.

ಭಗವಂತನು ಸಕಲಜೀವರುಗಳಿಗೂ ಸಮಾನನಾದ ಆತ್ಮನು, ದೈವ ಸಂಪತ್ತಿನಿಂದ ಆತನ ಭಕ್ತಿಯನ್ನು ಸಂಪಾದಿಸಿಕೊಂಡವರು ಭೂಲೋಕದಲ್ಲಿ ಸರ್ವಸಮತೆಯಿಂದ ಜೀವಿಸಿ, ಪರಲೋಕದಲ್ಲಿ ಅಮಿತಸುಖವನ್ನು ಪಡೆಯಬಹುದು- ಎಂದು ಬೋಧಿಸುವ ಶ್ರುತಿ, ಸ್ಮೃತಿ, ಪುರಾಣ, ಇತಿಹಾಸಗಳನ್ನು ಅನುಗ್ರಹಿಸಿ ಮನಸ್ಸಿಗೆ ಅಜರಾಮರ ಸಂಸ್ಕೃತಿಯನ್ನು ನೀಡಬಲ್ಲ ಉದಾರವಾದ ಅಮರಭಾಷೆಯು ತಮ್ಮ ದೇಶದ್ದಾಗಿದ್ದು ಈಗಲೂ ಇದ್ದರೂ ಕುಸಂಸ್ಕೃತಿಯ ಫಲವಾಗಿ ಅದನ್ನು ಕಡೆಗಣಿಸಿ ಭೂಲೋಕವನ್ನು ನರಕವಾಗಿ ಮಾರ್ಪಡಿಸುವ ಕೃತ್ಯಕ್ಕೆ ಕೈಹಾಕುವದು ಸನಾತನ ಧರ್ಮಿಗಳ ದೌರ್ಭಾಗ್ಯವೇ ಸರಿ. ಈಗ ಆ ಸಂಸ್ಕೃತಭಾಷೆಯ ಅಭ್ಯಾಸವನ್ನು ಉಜ್ಜೀವನಗೊಳಿಸಿ ಸರ್ವತ್ರ ಪ್ರಚಾರ ಮಾಡುವದರಿಂದ ಭೂಲೋಕವೇ ಸ್ವರ್ಗವಾದೀತು! ಶ್ರೀಮನ್ನಾರಾಯಣನು ಅನುಗ್ರಹಿಸಲಿ !

* * * * *

## ವಿಜ್ಞಾಪನೆ

ಸಂಸ್ಕೃತಭಾಷೆಯ ಪರಿಚಯವು ಕನ್ನಡನಾಡಿನಲ್ಲೆಲ್ಲ ಹಬ್ಬಬೇಕೆಂಬ ಹಿರಿಯಾಸೆಯಿಂದ ನಾವು ಕನ್ನಡಭಾಷೆಯಮೂಲಕ **'ಸಂಸ್ಕೃತಭಾಷಾಭ್ಯಾಸ'** ಎಂಬ ಹೆಸರಿನ **ಮೂರು ಪುಸ್ತಕ**ಗಳನ್ನು ಪ್ರಕಟಿಸಿರುತ್ತೇವೆ. ಚಿಕ್ಕವಯಸ್ಸಿನವರಿಗೆ ಉಪಾಧ್ಯಾಯರ ಸಹಾಯವೂ ಅವುಗಳನ್ನು ಅಭ್ಯಾಸಮಾಡುವದಕ್ಕೆ ಬೇಕಾಗಬಹುದಾದರೂ ಕನ್ನಡ ಭಾಷೆಯನ್ನು ತಕ್ಕಮಟ್ಟಿಗೆ ತಿಳಿದುಕೊಂಡಿರುವ ವಯಸ್ಕರಾದವರಿಗೆ ಬಲುಬೇಗನೆ ಸಂಸ್ಕೃತದ ಪರಿಚಯವನ್ನು ಮಾಡಿಕೊಡುವದಕ್ಕೆ ಅವು ಸಹಾಯಕವಾಗಿರುತ್ತವೆ.

ಕೆಲವೇ ಶಬ್ದಗಳನ್ನು ಮೂಲಧನವಾಗಿಟ್ಟುಕೊಂಡು ಸಂಸ್ಕೃತಶಬ್ದರೂಪಗಳ ಪರಿಚಯವನ್ನು ಬಗೆಬಗೆಯ ವಾಕ್ಯಗಳಿಂದ ಮಾಡಿಕೊಟ್ಟಿದೆ. ಸಂಸ್ಕೃತವಾಕ್ಯಗಳನ್ನು ಓದುವದು, ಕನ್ನಡವಾಕ್ಯಗಳನ್ನು ಸಂಸ್ಕೃತಕ್ಕೆ ತಿರುಗಿಸುವದು- ಈ ಪದ್ಧತಿಯಿಂದ ಒಂದನೆಯ ಪುಸ್ತಕವನ್ನು ಮುಗಿಸುವಹೊತ್ತಿಗೆ ಸಂಸ್ಕೃತದ ಸಂಭಾಷಣೆಗೆ ಓದುಗರನ್ನು ಸಜ್ಜುಮಾಡುವದಕ್ಕೆ ಪ್ರಯತ್ನಿಸಿದೆ. ಈಗಾಗಲೇ ಹಲವರು ಈ ಪುಸ್ತಕಗಳಿಂದ ಪ್ರಯೋಜನವನ್ನು ಪಡೆದಿರುತ್ತಾರೆ, ನೀವೂ ಪ್ರಯತ್ನಿಸಿನೋಡಿರಿ.

# ಸಂಸ್ಕೃತವೂ ಸಂಸ್ಕೃತಿಯೂ

## ಭಾಗ - 2

### ಆಸ್ಥಾನ ವಿದ್ವಾನ್, ವೇದಾಂತ ಶಿರೋಮಣಿ
### ಶ್ರೀಯುತ ಎಸ್. ವಿಠ್ಠಲಶಾಸ್ತ್ರಿಗಳವರ ಲೇಖನಗಳು
### (ಶ್ರೀ ಶ್ರೀಜ್ಞಾನಾನಂದೇಂದ್ರಸರಸ್ವತೀ ಸ್ವಾಮಿಗಳು)

## 40. ಸಂಸ್ಕೃತ ಭಾಷೆ

ಪ್ರಪಂಚದಲ್ಲಿ ಪ್ರಚಾರದಲ್ಲಿರುವ ಭಾಷೆಗಳಲ್ಲಿ ಸಂಸ್ಕೃತಭಾಷೆಗೆ ಬಹುಪೂಜ್ಯ ಸ್ಥಾನವಿರುವದು. ವೇದವು ಅನಾದಿಯೆಂದೂ ಅಪೌರುಷೇಯವೆಂದೂ ಹಿಂದೂಗಳೆಲ್ಲರೂ ಅದನ್ನು ಗೌರವಿಸುವರಷ್ಟೆ; ಆ ವೇದವು ಸಂಸ್ಕೃತವಾಣಿಯಲ್ಲಿದೆ. ಈ ದೃಷ್ಟಿಯಿಂದ ಸಂಸ್ಕೃತವೂ ಅನಾದಿಯಾದ ಭಾಷೆಯೇ ಆಗುವದು. ಭಾಷಾಶಾಸ್ತ್ರಜ್ಞರಾದ ಈಗಿನ ವಿದ್ವಾಂಸರು ಪ್ರಪಂಚದ ಭಾಷೆಗಳನ್ನು ಹಲವು ಕುಟುಂಬಗಳಾಗಿ ವಿಂಗಡಿಸಿರುತ್ತಾರೆ. ಅವರ ಮತದಲ್ಲಿ ಸಂಸ್ಕೃತವು ಭಾಷಾಕುಟುಂಬಗಳಲ್ಲೆಲ್ಲ ಪ್ರಧಾನವೆನಿಸಿರುವ ಆರ್ಯಕುಟಂಬಕ್ಕೆ ಸೇರಿದ್ದು, ಆರ್ಯ ಕುಟುಂಬದ ಭಾಷೆಗಳಲ್ಲೆಲ್ಲ ಅತ್ಯಂತ ಪುರಾತನವಾದದ್ದು. ಆರ್ಯರು ತಮ್ಮ ಮೂಲನಿವಾಸಸ್ಥಾನವನ್ನು ಬಿಟ್ಟು ಹೊರಡುವುದಕ್ಕೆ ಮುಂಚೆ ಅವರ ಭಾಷೆಯೊಂದು ಇದ್ದಿತೆಂದೂ ಅದೇ ಈಗಿನ ಆರ್ಯಕುಟುಂಬದ ಭಾಷೆಗಳಿಗೆಲ್ಲ ಮೂಲವೆಂದೂ ಕೆಲವು ಮಂದಿ ಪಂಡಿತರು ಅಭಿಪ್ರಾಯಪಡುತ್ತಿರುವರು. ಆದರೆ ಅಂಥ ಭಾಷೆಯ ಸ್ವರೂಪವು ಹೇಗಿತ್ತೆಂಬುದನ್ನು ಗೊತ್ತುಪಡಿಸುವುದಕ್ಕೆ ಯಾವ ಗ್ರಂಥವಾಗಲಿ ಶಾಸನವಾಗಲಿ ಗುರುತಾಗಲಿ ಸಿಕ್ಕಿರುವುದಿಲ್ಲ. ಸಂಸ್ಕೃತ, ಪಾರ್ಸಿ,ಲ್ಯಾಟಿನ್, ಗ್ರೀಕ್-ಮುಂತಾದ ಹಲವು ಭಾಷೆಗಳನ್ನು ಒಂದಕ್ಕೊಂದನ್ನು ಹೋಲಿಸಿ ನೋಡಿ ಇವುಗಳೆಲ್ಲೆಲ್ಲ ಸಮಾನವಾಗಿ ಕಂಡುಬರುವ ಮೂಲಧಾತುಗಳನ್ನೂ ಪ್ರತ್ಯಯಗಳನ್ನೂ ವಿಂಗಡಿಸಿ 'ಆರ್ಯರ ಮೂಲಭಾಷೆಯು ಹಾಗಿದ್ದಿರಬೇಕು, ಹೀಗಿದ್ದಿರಬೇಕು' ಎಂದು ಊಹಿಸುತ್ತಿರುವರೇ ಹೊರತು ಎಲ್ಲರಿಗೂ ಒಪ್ಪಾದ ಸಿದ್ಧಾಂತವೊಂದು ಏರ್ಪಾಡಾಗಿದೆಯೆಂದು ಇನ್ನೂ ಹೇಳುವದಕ್ಕಿಲ್ಲ. ಅದು ಹೇಗಾದರೂ ಇರಲಿ. ಭಾಷಾಶಾಸ್ತ್ರಜ್ಞರ ದೃಷ್ಟಿಯಿಂದಲೂ ಸಂಸ್ಕೃತವು ಆರ್ಯಭಾಷಾ ಕುಟುಂಬದಲ್ಲಿ ಅತ್ಯಂತ ಪುರಾತನ ಭಾಷೆಯಾಗಿರುವದೆಂಬುದು ನಿಸ್ಸಂಶಯವು.

ಈಗಿನ ನಮ್ಮ ಹಿಂದೂಸ್ಥಾನದಲ್ಲಿ ಹಿಂದಿ, ಮಹಾರಾಷ್ಟ್ರ, ಗುಜರಾತಿ,

ಬಂಗಾಲಿ- ಮುಂತಾದ ಭಾಷೆಗಳೆಲ್ಲ ಈ ಸಂಸ್ಕೃತವಾಣಿಯ ಮಕ್ಕಳೆ. ಇವು ಸಂಸ್ಕೃತದಿಂದ ಹುಟ್ಟಿ, ಸಂಸ್ಕೃತದಿಂದ ಬೆಳೆದು, ಈಗಲೂ ಸಂಸ್ಕೃತವನ್ನೇ ನಂಬಿರುವ ಭಾಷೆಗಳು. ಇವುಗಳು ಸಂಸ್ಕೃತವೆಂಬ ಊರುಗೋಲನ್ನು ಸಂಪೂರ್ಣವಾಗಿ ಕೈಬಿಡುವದೆಂದರೆ ಎಂದಿಗೂ ಸಾಗದ ಮಾತು. ದಕ್ಷಿಣದೇಶದಲ್ಲಿರುವ ಕನ್ನಡ, ತಮಿಳು, ತೆಲಗು- ಮುಂತಾದ ಭಾಷೆಗಳೇನೋ ಸಂಸ್ಕೃತದಿಂದ ಹುಟ್ಟಿದವುಗಳಲ್ಲ; ಅವು ಆರ್ಯಕುಟುಂಬಕ್ಕೇ ಸೇರಿಲ್ಲವೆಂದೂ ಭಾಷಾಶಾಸ್ತ್ರಜ್ಞರು ನಿರ್ಣಯಿಸಿರುತ್ತಾರೆ. ಹೀಗಿದ್ದರೂ ಈ ಭಾಷೆಗಳು ಸಂಸ್ಕೃತದ ಸಾಕು ಮಕ್ಕಳಾಗಿರುವವೆನ್ನಬಹುದು. ಈ ಭಾಷೆಗಳಲ್ಲಿ ದೇಶ್ಯಪದಗಳನ್ನೇ ಕಡ್ಡಾಯವಾಗಿ ಉಪಯೋಗಿಸಬೇಕೆಂದು ಹಠವನ್ನು ತೊಟ್ಟ ಗ್ರಂಥಕರ್ತರೂ[1] ಕೂಡ ಸಂಸ್ಕೃತದ ತದ್ಭವಗಳನ್ನು ಉಪಯೋಗಿಸಲೇಬೇಕಾಗಿ ಬಂದಿದೆ. ಆಯಾ ಭಾಷೆಯ ಶಬ್ದಗಳ ಬೊಕ್ಕಸವು ಬೆಳೆಯುವದಕ್ಕೂ, ಗಾಂಭೀರ್ಯವು ಹೆಚ್ಚುವದಕ್ಕೂ ಸಂಸ್ಕೃತದ ಸಹಾಯವನ್ನು ಕೋರದೆ ಇದ್ದರೆ ಕೆಲಸವು ಸಾಗುವ ಹಾಗೆಯೇ ಇಲ್ಲ.

ಸಂಸ್ಕೃತಭಾಷೆಯು ಬಹಳ ಹಳೆಯದೆಂಬುದು, ಎಷ್ಟೋ ಭಾಷೆಗಳನ್ನು ಹೊತ್ತು ಹೆತ್ತು ಸಾಕಿ ಸಲಹಿರುವದೆಂಬುದು- ಇವೆರಡು ಗುಣಗಳೇ ಅದರ ಪೂಜ್ಯತೆಗೆ ಕಾರಣವಾಗಿಲ್ಲ; **ಸಂಸ್ಕೃತ** (ಪರಿಶುದ್ಧವಾದದ್ದು, ಪರಿಪೂರ್ಣವಾದದ್ದು) ಎಂಬ ಹೆಸರಿಗೆ ತಕ್ಕಂತೆ ನಿಜವಾಗಿಯೂ ಒಪ್ಪುವ ಅದರ ಸ್ವರೂಪವೇ ಅದನ್ನು ಗೌರವಿಸುವದಕ್ಕೆ ಯಾರನ್ನಾದರೂ ಬಿಟ್ಟಿಹಿಡಿಯುವಂತಿದೆ. ಈ ಭಾಷೆಯಲ್ಲಿರುವ ಶಬ್ದಸಂಪತ್ತು, ವ್ಯಾಕರಣದ ಬಿಗಿ, ವಾಙ್ಮಯದ ವಿಸ್ತಾರ, ಒಳಗಡಗಿಸಿಕೊಂಡಿರುವ ಮಹಾವಿಚಾರಗಳು- ಇವನ್ನು ನೋಡಿದರೆ ಯಾರ ಮನಸ್ಸಾದರೂ ಅದಕ್ಕೆ ಸೋತುಹೋಗುವದು. ಆದ್ದರಿಂದಲೇ ಭರತಖಂಡದ ಸಕಲವಿದ್ಯಾನಿಲಯಗಳಲ್ಲಿಯೇ ಅಲ್ಲದೆ, ಯೂರೋಪು, ಅಮೆರಿಕ-ಖಂಡಗಳ ವಿಶ್ವವಿದ್ಯಾನಿಲಯಗಳಲ್ಲಿಯೂ ಈ ಭಾಷೆಗೆ ಒಂದು ಹೆಚ್ಚಿನ ಸ್ಥಾನವನ್ನು ಕೊಟ್ಟಿರುತ್ತಾರೆ. ಆದ್ದರಿಂದಲೇ ನಮ್ಮ ದೇಶದ ವಿದ್ವಾಂಸರಲ್ಲದೆ ಜರ್ಮನಿ, ಇಂಗ್ಲೆಂಡು, ಅಮೆರಿಕದ ಸಂಯುಕ್ತಸಂಸ್ಥಾನ-ಮುಂತಾದ ದೇಶಗಳಲ್ಲಿಯೂ ಎಷ್ಟೋ ವಿದ್ವಾಂಸರು ಈ ಭಾಷೆಯ ಸವಿಯನ್ನು ನೋಡುತ್ತಾ ತಮ್ಮ ಜನ್ಮವನ್ನೆಲ್ಲ ಕಳೆಯುತ್ತಾರೆ. ಆದ್ದರಿಂದಲೇ ವಿದೇಶೀಯರು ಕೂಡ ಇದರ ಪರಿಶೋಧನೆಗೆ ಲಕ್ಷಗಟ್ಟಲೆಯ ಹಣವನ್ನು ವೆಚ್ಚಮಾಡುತ್ತಿದ್ದಾರೆ.

---

**1.** ಕನ್ನಡಿಗರು 'ಕಬ್ಬಿಗರಕಾವ' ಮುಂತಾದ ಗ್ರಂಥಗಳನ್ನು ನೆನಸಿಕೊಳ್ಳಬಹುದು.

ಸಂಸ್ಕೃತವು 'ಮೃತಭಾಷೆ' ಎಂದರೆ ಜನರು ವಾಡಿಕೆಯಾಗಿ ಬಳಸದ ಭಾಷೆ, ಅದರ ಉಪಯೋಗವು ಎಲ್ಲಿಯೋ ಸ್ವಲ್ಪ ಜನಗಳಿಗೆ ಮಟ್ಟಿಗೆ ಆಗತಕ್ಕದ್ದು- ಎಂದು ಕೆಲವರು ಅಂದುಕೊಳ್ಳುವದುಂಟು. ಅಂಥವರು ಸ್ವಲ್ಪ ಕಣ್ತೆರದು ನೋಡಿದರೆ ಈ ಅಮರವಾಣಿಯ ನಿಜಸ್ಥಿತಿಯು ಮನವರಿಕೆಯಾಗುವದು. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಹಿಂದುಗಳು ಇಂದಿನವರೆಗೆ ಮಾಡುತ್ತಿರುವ ಶುಭಾಶುಭ ಕರ್ಮಗಳು ಯಾವ ಭಾಷೆಯ ಸಹಾಯದಿಂದ ಜರುಗುತ್ತಿರುವವು? ಸಂಸ್ಕೃತ ವೊಂದರಿಂದಲೇ. ಒಬ್ಬರ ಭಾಷೆಯನ್ನೊಬ್ಬರು ಅರಿಯದ ಭರತಖಂಡದ ಬೇರೆ ಬೇರೆ ಪ್ರಾಂತದ ಇಬ್ಬರು ಸೇರಿದರೆ ಆಗ ಅವರು ಒಬ್ಬರೊಡನೊಬ್ಬರು ಹೇಗೆ ಮಾತಾಡುವರು? ತಮ್ಮಿಬ್ಬರ ನಾಡಿನ ನುಡಿಗಳಿಗೂ ಸಮಾನವಾಗಿರುವ ಸಂಸ್ಕೃತದ ಮಾತುಗಳನ್ನೇ ಹೆಚ್ಚಾಗಿ ಉಪಯೋಗಿಸಿ ತಮ್ಮ ಅಭಿಪ್ರಾಯವನ್ನು ಒಬ್ಬರೊಬ್ಬರಿಗೆ ತಿಳಿಸುವರು. ಭರತಖಂಡದ ಪಂಡಿತರಂತೂ ಈ ಭಾಷೆಯಿಂದ ಒಬ್ಬರೊಬ್ಬರ ಪರಿಚಯವನ್ನು ಮಾಡಿಕೊಂಡು ಈ ಭಾಷೆಯಿಂದಲೇ ತಮ್ಮ ವ್ಯವಹಾರವನ್ನೂ ಸಾಗಿಸಿಕೊಳ್ಳುತ್ತಿರುವರು. ಭರತಖಂಡದ ಯಾವ ಪ್ರಾಂತದವರೇ ಆಗಲಿ ಜ್ಯೋತಿಷ ವೈದ್ಯ, ಸಂಗೀತ- ಮುಂತಾದ ಶಾಸ್ತ್ರಗಳಲ್ಲಿ ಸಂಸ್ಕೃತಭಾಷೆಯನ್ನೇ ಹೇರಳವಾಗಿ ಬಳಸುತ್ತಾರೆ. ಇದೆಲ್ಲವನ್ನೂ ನೋಡಿದರೆ ಸಂಸ್ಕೃತವನ್ನು ಮೃತಭಾಷೆಯೆನ್ನುವದಕ್ಕೆ ಯಾರಿಗಾದರೂ ನಾಲಗೆ ಬಂದೀತೇನು?

ಇನ್ನೊಂದು ವಿಷಯ. ಸಂಸ್ಕೃತವು ಹಿಂದಿ, ಮಹಾರಾಷ್ಟ್ರ, ಬಂಗಾಳಿ- ಮುಂತಾದವುಗಳಂತೆ ಯಾವದೊಂದು ಗೊತ್ತಾದ ಪ್ರಾಂತದ ಭಾಷೆಯಲ್ಲ. ಅದು ಭರತಖಂಡದ ಒಟ್ಟುಭಾಷೆ, ಹಿಂದುಗಳೆಲ್ಲರ ಸಂಸ್ಕೃತಿಯನ್ನೊಳಗೊಂಡಿರುವ ಭಾಷೆ. ಪ್ರಾಂತಿಕಭಾಷೆಗಳಲ್ಲಿ ಎಷ್ಟೋ ಬೆಡಗುಗಳಿರುವವು (dialects). ಎಷ್ಟೋ ಸಂದರ್ಭ ದಲ್ಲಿ ಒಂದು ಬೆಡಗಿನವರ ಮಾತು ಮತ್ತೊಂದು ಬೆಡಗಿನವರಿಗೆ ತಿಳಿಯುವದೇ ಕಷ್ಟವಾಗುವದು. ಕನ್ನಡದಲ್ಲಿ ಮೈಸೂರು, ಮಂಗಳೂರು, ಧಾರವಾಡ- ಎಂದು ಮೂರು ಬೆಡಗುಗಳಿರುವಂತೆಯೇ ಹಿಂದಿ, ಮಹಾರಾಷ್ಟ್ರ, ಬಂಗಾಲಿ-ಮುಂತಾದ ಭಾಷೆಗಳಲ್ಲಿಯೂ ಬೆಡಗುಗಳಿಲ್ಲದೆ ಇಲ್ಲ. ಈ ಭಾಷೆಗಳಲ್ಲಿ ಯಾವದೊಂದನ್ನು ಭರತಖಂಡದ ಭಾಷೆಯೆಂದು ಮಾಡಿಕೊಳ್ಳೋಣವೆಂದರೂ ತೊಡಕುಗಳು ಇದ್ದೇ ಇರುವವು. ಹಿಂದಿಯೇ ಎಲ್ಲಕ್ಕಿಂತಲೂ ಹೆಚ್ಚಿನ ಸಂಖ್ಯೆಯ ಜನರು ಆಡುವ ಭಾಷೆಯೆಂಬ ಕಾರಣದಿಂದ ದೇಶಾಭಿಮಾನಿಗಳು ಅದನ್ನೇ ರಾಷ್ಟ್ರಭಾಷೆಯಾಗಿ ಮಾಡಿಕೊಳ್ಳಬೇಕೆಂದು ಎಲ್ಲೆಲ್ಲಿಯೂ ಪ್ರಯತ್ನಮಾಡುತ್ತಿರುವರಷ್ಟೆ. ಈ ಸಂದರ್ಭದಲ್ಲಿ

ಬೇರೆ ಬೇರೆ ಪ್ರಾಂತಗಳ ಜನರಿಗೆ ತಮ್ಮ ತಮ್ಮ ದೇಶಭಾಷೆಯ ವಾಙ್ಮಯಕ್ಕೇನು ಧಕ್ಕೆ ತಗಲುವದೋ ಎಂಬ ಯೋಚನೆ ಹತ್ತಿಕೊಂಡಿರುವದು. ಹಿಂದೀ ಭಾಷೆಯ ಪ್ರಚಾರವು ಪೂರ್ಣಭರದಿಂದ ಇನ್ನೂ ನಡೆಯದಿರುವದಕ್ಕೆ ಇದೂ ಒಂದು ಕಾರಣವು. ಇದಿರಲಿ. ಸಂಸ್ಕೃತಭಾಷೆಯನ್ನೇ ರಾಷ್ಟ್ರಭಾಷೆಯನ್ನಾಗಿ ಮಾಡಬೇಕೆಂಬ ಕಲ್ಪನೆಯು ನಮ್ಮ ದೇಶದವರಿಗೆ ಒಂದಿತ್ತೆಂದು ಇಟ್ಟುಕೊಳ್ಳಿರಿ. ಆಗ ಆ ವಿಷಯಕ್ಕೆ ಜನರ ಭಾವನೆಯು ಹೇಗಿರುತ್ತಿದ್ದಿತು? ಈಗಿನ ಸ್ಥಿತಿಯಲ್ಲಿ ಕೂಡ ಸಂಸ್ಕೃತವನ್ನು ಆಡಬಲ್ಲವರು ಹಿಂದಿಯನ್ನು ಬಲ್ಲವರಿಗಿಂತ ಸಂಖ್ಯೆಯಲ್ಲಿ ಹೆಚ್ಚಾಗಿರುವರು; ಅದರಲ್ಲಿ ಯಾವ ಬೆಡಗುಗಳೂ ಇಲ್ಲ (dialects); ಅದು ಯಾವದೊಂದು ಗೊತ್ತಾದ ಪ್ರಾಂತದವರ ಭಾಷೆಯೆಂಬುದರ ಮೇಲೆ ಮತ್ತೊಂದು ಪ್ರಾಂತದವರು ಕಡೆಗಣಿಸುವದಕ್ಕೆ ಕಾರಣವಿರುವದಿಲ್ಲ. ಅದು ಬೆಳೆದರೆ ತಮ್ಮ ಭಾಷೆಯು ಕುಗ್ಗೀತೆಂಬ ಹೆದರಿಕೆಯು ಯಾರಿಗೂ ಬರುವ ಹಾಗಿಲ್ಲವೆಂಬುದು ಒತ್ತಟ್ಟಿಗಿರಲಿ; ಆ ಭಾಷೆಯು ಹಬ್ಬಿದಂತೆ ತಮ್ಮ ಭಾಷೆಯು ಮತ್ತೂ ಚಿಗುರುವದೆಂದೇ ಎಲ್ಲಾ ಪ್ರಾಂತದವರೂ ನಂಬಿರುವವರು[1] ಇಂಥ ವ್ಯಾಪಕಭಾಷೆ, ಸಂಸ್ಕೃತ!

ಸಂಸ್ಕೃತದಲ್ಲಿ ಸಾಹಿತ್ಯ, ವ್ಯಾಕರಣ, ಜ್ಯೋತಿಷ, ಅರ್ಥಶಾಸ್ತ್ರ, ಶಿಲ್ಪ, ಚಿತ್ರ, ಸಂಗೀತ, ವೈದ್ಯ- ಮುಂತಾದ ಲೌಕಿಕವಾಙ್ಮಯಗಳ ಭಾಗಗಳೆಲ್ಲ ತುಂಬಿ ತುಳುಕುತ್ತಿವೆ; ಈಗಿನ ಭೌತಿಕವಿಜ್ಞಾನವನ್ನು ವಿವರಿಸುವದಕ್ಕೆ ತಕ್ಕ ಭಾಷಾಸೌಕರ್ಯಗಳೆಲ್ಲವೂ ಇವೆ. ಇಷ್ಟೇ ಅಲ್ಲ. ಐಹಿಕಸಂಪತ್ತೂ ಅದನ್ನು ತಿಳಿಸುವ ವಿಜ್ಞಾನವೂ ನಮಗೆ ಬೇಕಾಗಿರುವ ಸುಖಕ್ಕೆ ಮಾತ್ರವೇ ಅಲ್ಲವೆ? ಈ ಸುಖದ ಮೂಲವು ಯಾವದೆಂಬುದನ್ನು ತಿಳಿಸಿಕೊಡುವ ಅಧ್ಯಾತ್ಮವಿದ್ಯೆಯ ಅಪಾರವಾದ **ಭಂಡಾರವೂ** ಅದರಲ್ಲಿ ಹುದುಗಿ ಕೊಂಡಿದೆ. ಪ್ರಪಂಚದ ಧರ್ಮಪಂಥಗಳಿಗೆಲ್ಲ ಮೂಲವಾಗಿರುವ ವೇದವೂ ಆ

---

**1.** ಇದಕ್ಕೊಂದು ದೃಷ್ಟಾಂತವನ್ನು ಕೊಡಬಹುದು. ಈಗ ಕೆಲವು ದಿನಗಳ ಹಿಂದೆ ಮೈಸೂರು ಸಕಲವಿದ್ಯಾನಿಲಯದಲ್ಲಿ ಕನ್ನಡವನ್ನೇ ದ್ವಿತೀಯಭಾಷೆಯಾಗಿ ಮಾಡಬೇಕೆಂಬ ಕುತೂಹಲದಿಂದ ದೇಶಭಾಷಾಭಿಮಾನಿಗಳು ಕೆಲವರು ಪ್ರಯತ್ನಪಟ್ಟರು. ಸಂಸ್ಕೃತವು ಭರತಖಂಡದ ಸಂಸ್ಕೃತಿಯನ್ನು ಅಚ್ಚಳಿಯದಂತೆ ಇಟ್ಟುಕೊಂಡಿರುವ ಭಾಷೆಯೆಂಬುದರ ಮೇಲೆ ಅದನ್ನು ಬಿಟ್ಟುಬಿಡಬಾರದೆಂದು ಮತ್ತೆ ಕೆಲವರು ಉಪಸೂಚನೆಯನ್ನು ತಂದರು. ಕನ್ನಡವೊಂದನ್ನೇ ದ್ವಿತೀಯಭಾಷೆಯಾಗಿ ಮಾಡಬೇಕೆಂಬ ವಿಷಯದಲ್ಲಿ ಅಲ್ಲಿ ಭಿನ್ನಾಭಿಪ್ರಾಯಗಳು ಉಂಟಾದಾಗಲೂ ಸಂಸ್ಕೃತದ ಯೋಗ್ಯತೆಯ ಮತ್ತು ಪೂಜ್ಯಸ್ಥಾನದ ವಿಚಾರದಲ್ಲಿ ಮಾತ್ರ ಯಾರೊಬ್ಬರಿಗೂ ಎರಡನೆಯ ಮತವೇ ಇರಲಿಲ್ಲಫ.

ವೇದವನ್ನು ಹಿಂಬಾಲಿಸಿ ಹುಟ್ಟಿರುವ ದರ್ಶನಗಳೂ ಅದರಲ್ಲಿ ಅಡಗಿವೆ; ಪ್ರಪಂಚವನ್ನೆಲ್ಲ ಬೆರಗುಮಾಡಿರುವ ಇತಿಹಾಸಗಳೂ ಪುರಾಣಗಳೂ ಅದರಲ್ಲಿವೆ; ಪ್ರಪಂಚದ ಜನಸಂಖ್ಯೆಯಲ್ಲಿ ತುಸು ಹೆಚ್ಚುಕಡಿಮೆಯಾಗಿ ಮೂರನೆಯ ಒಂದು ಪಾಲಿನಷ್ಟು ಜನರು ಅವಲಂಬಿಸಿರುವ ಬೌದ್ಧಮತದ ಎಷ್ಟೋ ಧರ್ಮಗ್ರಂಥಗಳು ಅದರಲ್ಲಿವೆ; ಈಗ ಪಾಲಿ ತಿಬೆಟ್ ಚೀನಾಭಾಷೆಗಳಲ್ಲಿರುವ ಅವರ ತ್ರಿಪಿಟಕಗಳ ಮತ್ತು ಅವುಗಳ ವ್ಯಾಖ್ಯಾನಗಳ ಅಭಿಪ್ರಾಯವನ್ನು ಸರಿಯಾಗಿ ತಿಳಿದುಕೊಳ್ಳುವುದಕ್ಕೆ ಬೇಕಾದ ಮರ್ಮದ ಗ್ರಂಥಗಳೆಲ್ಲ ಅದರಲ್ಲಿವೆ; ಜೈನರು, ವೀರಶೈವರು-ಮುಂತಾದವರೆಲ್ಲ ತಮ್ಮ ತಮ್ಮ ಮತರಹಸ್ಯಗಳನ್ನು ಬರೆದಿಟ್ಟಿರುವ ಅಮೋಘವಾದ ಎಷ್ಟೋ ಗ್ರಂಥರತ್ನಗಳೂ ಈ ಭಾಷೆಯಲ್ಲಿವೆ. ಈ ಎಲ್ಲಾ ಕಾರಣಗಳಿಂದ ಸಂಸ್ಕೃತವೆಂಬುದು ಭರತಖಂಡದ ಬಹುಜನರನ್ನು ಒಗ್ಗಟ್ಟಾಗಿ ಸೇರಿಸುವ ಅತ್ಯಮೂಲ್ಯವಾದ ಪ್ರೇಮಬಂಧನವೆನ್ನ ಬಹುದಲ್ಲವೆ?

ಇಷ್ಟು ಸಲಕರಣೆಗಳಿಂದ ಕೂಡಿರುವ ಈ ಪೂಜ್ಯಭಾಷೆಯು, ಅದೇಕೋ, ನಮ್ಮ ದೌರ್ಭಾಗ್ಯದ ದೆಸೆಯಿಂದ ಈಗ ಕೆಳಕ್ಕಿಳಿಸಲ್ಪಡುತ್ತಿರುವದು. ಜನರು ಅದಕ್ಕೆ ತಕ್ಕಷ್ಟು ಆದರವನ್ನು ಕೊಡುತ್ತಲಿಲ್ಲ. ಜನರ ಮನಃಕ್ಷೇತ್ರದಲ್ಲಿ ಈ ಅಸಡ್ಡೆಯೆಂಬ ಕಳೆಯು ಬೆಳೆಯುತ್ತಿರುವದಕ್ಕೆ ಕಾರಣವೇನೆಂಬುದನ್ನೂ ಆ ಕಳೆಯನ್ನು ಕಿತ್ತುಹಾಕಿ ಮತ್ತೆ ಈ ಭಾಷೆಯ ಬಳ್ಳಿಗಳು ಸೊಂಪಾಗಿ ಬೆಳೆದು ಹಬ್ಬುವಂತೆ ಮಾಡುವದಕ್ಕೆ ಯಾವ ಯಾವ ಪ್ರಯತ್ನಗಳನ್ನು ಮಾಡಬಹುದೆಂಬುದನ್ನೂ ಮುಂದಿನ ಲೇಖನದಲ್ಲಿ ಅರಿಕೆ ಮಾಡಿಕೊಳ್ಳುವೆನು.

* * * * *

## 41. ಸಂಸ್ಕೃತವೇಕೆ ಖಿಲವಾಗುತ್ತಿದೆ?

ಪ್ರಪಂಚದ ಭಾಷೆಗಳಲ್ಲಿ ಸಂಸ್ಕೃತಕ್ಕಿರುವ ಪೂಜ್ಯಸ್ಥಾನವನ್ನು ಹಿಂದಿನ ಲೇಖನದಲ್ಲಿ ಸ್ವಲ್ಪ ಮಟ್ಟಿಗೆ ವಿವರಿಸಿದೆನು. ಭರತಖಂಡದವರೆಲ್ಲರೂ ಅದನ್ನು ಗೌರವದಿಂದ ಕಾಣಬೇಕೆನ್ನುವದಕ್ಕೆ ಕೆಲವು ಕಾರಣಗಳನ್ನೂ ಅದರಲ್ಲಿ ಕೊಟ್ಟಿರುತ್ತೇನೆ. ಇಂಥ ಉತ್ತಮವಾದ ಭಾಷೆಯು ಈಗ ಏತಕ್ಕೆ ಕೆಳಗಿನ ಸ್ಥಾನವನ್ನು ಪಡೆಯಿತು? ಅದು ಇನ್ನೂ ಹಿಂದುಹಿಂದಕ್ಕೆ ಸರಿಯುತ್ತಲೇ ಇರುವದಕ್ಕೆ ಕಾರಣವೇನು? ಎಂಬುದನ್ನಿಲ್ಲಿ ವಿಚಾರಕ್ಕೆ ತೆಗೆದುಕೊಳ್ಳುವೆನು.

ಸಂಸ್ಕೃತವನ್ನು ಕಲಿತವರಿಗೆ ಜೀವನಕ್ಕೆ ಮಾರ್ಗವಿಲ್ಲದೆ ಹೋದದ್ದರಿಂದ ಈ ಭಾಷೆಯು ಕೆಳಕ್ಕೆ ಬೀಳುವದಕ್ಕೆ ಮೊದಲಾಯಿತೆಂದು ಕೆಲವರ ಅಭಿಪ್ರಾಯವಿರುವದು. ಇದರಲ್ಲಿ ನಿಜದ ಅಂಶವೂ ಇಲ್ಲದೆ ಇಲ್ಲ. ಮಹಮ್ಮದೀಯರು ಈ ದೇಶಕ್ಕೆ ಬರುವ ಮುಂಚೆ ಸಂಸ್ಕೃತವು ತಾನೇತಾನಾಗಿ ಮೆರೆಯುತ್ತಿತ್ತು. ಈ ಭಾಷೆಯಿಂದ ಹುಟ್ಟಿದ ಪಾಳಿಪ್ರಾಕೃತಭಾಷೆಗಳು ನಾಡ ನುಡಿಗಳಾಗಿದ್ದು ರಾಜರಾಶ್ರಯವನ್ನು ಪಡೆದರೂ ಕಾಲಚಕ್ರಕ್ಕೆ ಸಿಕ್ಕಿ ಬೇಗನೆ ಮೃತಭಾಷೆಗಳಾಗಿ ಬಿಟ್ಟವು. ಆ ಭಾಷೆಗಳಲ್ಲಿದ್ದ ಗ್ರಂಥಗಳರ್ಥ ವನ್ನು ತಿಳಿಯುವದಕ್ಕೆ ಸಹ ಸಂಸ್ಕೃತವು ಬೇಕಾಗಿದ್ದದ್ದರಿಂದ ಸಂಸ್ಕೃತಭಾಷೆಯು ಬೆಳೆಯುತ್ತಲೇ ಹೋಯಿತು. ಆ ಕಾಲದಲ್ಲಿ ನಮ್ಮ ದೇಶದಲ್ಲಿ ಸಂಸ್ಕೃತದಲ್ಲಿ ಬರೆದ ಗ್ರಂಥಗಳಿಗೇ ಹೊರತು ಬೇರೆಯವುಗಳಿಗೆ ಗೌರವವು ದೊರೆಕುವದು ಕಡಿಮೆ ಯಾಗಿದ್ದದ್ದರಿಂದ ಎಲ್ಲರೂ ಸಂಸ್ಕೃತದಲ್ಲಿಯೇ ಬರೆಯಲಾರಂಭಿಸಿದ್ದರು. ಬೌದ್ಧರು, ಜೈನರು-ಮೊದಲಾದವರೂ ತಮ್ಮ ತಮ್ಮ ಮತಗ್ರಂಥಗಳ ಭಾಷೆಗಳಾದ ಮಾಗಧ, ಅರ್ಧಮಾಗಧ- ಮುಂತಾದವುಗಳಿಗೆ ಸಂಸ್ಕೃತದಷ್ಟು ವ್ಯಾಪಕತೆಯಿಲ್ಲವೆಂಬುದನ್ನು ಮನಗಂಡಿದ್ದರು. ಆಗ ಜನರಿಗೆ ಮೆಚ್ಚಾಗಬೇಕಾದರೆ ಲೌಕಿಕಗ್ರಂಥಗಳನ್ನೂ ಧರ್ಮಕ್ಕೆ ಸಂಬಂಧಿಸಿಯೇ ಬರೆಯಬೇಕಾಗಿದ್ದದ್ದರಿಂದ ಸಂಸ್ಕೃತಕ್ಕೆ ಇನ್ನೂ ಹೆಚ್ಚಾದ ಒತ್ತಾಸೆಯಿತ್ತು. ಆದರೆ ಮಹಮ್ಮದೀಯರು ಇಲ್ಲಿಗೆ ಕಾಲಿಟ್ಟ ಮೇಲೇ ಪರ್ಷಿಯನ್ ಭಾಷೆಯೊಂದು ಸಂಸ್ಕೃತದ ಮಗ್ಗಲಿಗೆ ಬಂದುಕೂತಿತು. ಇಂಗ್ಲಿಷರು ಈ ದೇಶಕ್ಕೆ ಬಂದ ಮೇಲೆ **ಲಾರ್ಡ್ ಮೆಕಾಲೆ** ಮೊದಲಾದವರ ಪ್ರೋತ್ಸಾಹದಿಂದ ಇಂಗ್ಲಿಷು ಭಾಷೆಯ ಮೂಲಕವೇ ಈ ದೇಶದವರಿಗೆ ವಿದ್ಯಾಭ್ಯಾಸವಾಗಬೇಕೆಂದು ತೀರ್ಮಾನವಾದಂದಿನಿಂದ ಸಂಸ್ಕೃತಕ್ಕೆ ಶನಿಮಹಾರಾಯನ ದೃಷ್ಟಿಯು ತಾಕಿತೆನ್ನಬಹುದು. ಅರಮನೆಯಲ್ಲಿ, ಗುರುಮನೆಯಲ್ಲಿ, ಕೋರ್ಟಿನಲ್ಲಿ, ಕಛೇರಿಯಲ್ಲಿ, ಅಲೆದಾಡುತ್ತಿರುವದು ನಮ್ಮ ಕಣ್ಣೆದುರಿಗೇ ಕಾಣ ಬರುತ್ತಿದೆ. ಯಾವ ಭಾಷೆ ಅಂಚೆಯ ಮನೆಯಲ್ಲಿ, ರೈಲಿನಲ್ಲಿ, ಅಂಗಡಿಯಲ್ಲಿ, ಮುಂಗಟ್ಟಿನಲ್ಲಿ-ಎಲ್ಲೆಲ್ಲಿಯೂ ಇಂಗ್ಲಿಷು ಹಬ್ಬಿತು; ಸಂಸ್ಕೃತವು ಸುರುಟಿಕೊಂಡಿತು. ಎಲ್ಲೆಲ್ಲಿಯೂ ಇಂಗ್ಲಿಷಿಗೆ ಅಗ್ರತಾಂಬೂಲವಾಯಿತು. ಸಂಸ್ಕೃತ ವನ್ನು ಕೇಳುವರಿಲ್ಲವಾದರು. ಇಂಗ್ಲಿಷು ಓದಿದರೆ ಸುಖಸಾಮ್ರಾಜ್ಯ, ಸಂಸ್ಕೃತ ವನ್ನೋದಿದರೆ ರಾಗಿಯ ಕಾಳಿಲ್ಲ- ಎನ್ನುವ ಅಭಿಪ್ರಾಯವು ಎಲ್ಲೆಲ್ಲಿಯೂ ಬೆಳೆದುಕೊಂಡಿತು.

ಇಂಗ್ಲಿಷುಭಾಷೆಯಿಂದ ನಮ್ಮ ದೇಶಕ್ಕೆ ಹಾನಿ ತಟ್ಟಿರುವದೆಂದು ತಿಳಿಸುವದೇನೂ ನನ್ನ ಉದ್ದೇಶವಲ್ಲ. ಆ ಭಾಷೆಯಿಂದ ನಮಗೆ ಎಷ್ಟೋ ಆನುಕೂಲ್ಯಗಳಾಗಿವೆ.

ಇಂಗ್ಲಿಷು, ಸಾರ್ವತ್ರಿಕಭಾಷೆಯಾದ್ದರಿಂದ ಪ್ರಪಂಚದ ಇತರ ಭಾಗಗಳಿಗೂ ಭರತಖಂಡಕ್ಕೂ ಸರಿಯಾದ ಸಂಬಂಧವುಂಟಾಗುವದಕ್ಕೆ ಅದೇ ಕಾರಣವಾಗಿದೆ. ಪ್ರಪಂಚದ ವ್ಯವಹಾರದ ತಿಳಿವಳಿಕೆಯೆಲ್ಲ ಆ ಭಾಷೆಯಲ್ಲಿ ಅಡಗಿರುವದು. ಈಗಿನ ವ್ಯವಹಾರಸ್ಥಿತಿಯನ್ನು ಬೇಗನೆ ತಿಳಿದುಕೊಳ್ಳುವದಕ್ಕೆ ಇಂಗ್ಲಿಷಲ್ಲದೆ ಮತ್ತೆ ಯಾವದೊಂದು ಭಾಷೆಯೂ ನಮಗೆ ಅಷ್ಟು ಸಹಕಾರಿಯಾಗಲಾರದು. ಆರ್ಥಿಕ, ಸಾಮಾಜಿಕ, ರಾಜಕೀಯ, ಸಂಘಟನೆಗಳ ಕ್ರಾಂತಿಗಳಿಗೆ ಒಳಪಟ್ಟಿರುವ ನಮ್ಮ ಭರತಖಂಡಕ್ಕೆ ಒಗ್ಗಟ್ಟನ್ನುಂಟುಮಾಡಿ ಸಹಾಯ ಮಾಡಿರುವದು ಇಂಗ್ಲಿಷೇ ಹೊರತು ಮತ್ತೆ ಯಾವ ಭಾಷೆಯೂ ಅಲ್ಲ. ಆದ್ದರಿಂದ ಸದ್ಯಸ್ಥಿತಿಯಲ್ಲಿ ನಮ್ಮ ದೇಶಕ್ಕೆ ಇಂಗ್ಲಿಷನ್ನು ಬಿಟ್ಟರೆ ಗತಿಯೇ ಇಲ್ಲ. ಆದರೆ ಇಂಗ್ಲಿಷ್ ಬೆಳೆದ ಹಾಗೆಲ್ಲ ಸಂಸ್ಕೃತವು ಸೊರಗುತ್ತಾ ಬಂದಿರುವದೆಂಬುದು ನಿಜವು; ಇಂಗ್ಲಿಷಿಗಿರುವಷ್ಟು ರಾಜಾಶ್ರಯವು ಸಂಸ್ಕೃತಕ್ಕಿಲ್ಲವೆಂಬುದು ನಿಜವು. ಇದನ್ನು ಮುಚ್ಚುಮರೆಮಾಡುವದರಿಂದ ಏನು ಪ್ರಯೋಜನವೂ ಇಲ್ಲ.

ಆದರೆ ಈ ಅನನುಕೂಲವು ಕೆಲವು ದಿನಗಳದ್ದೇ ಹೊರತು ಕೊನೆಯವರೆಗೂ ಇರುವದಲ್ಲ. ಇಂಗ್ಲಿಷನ್ನು ಓದಿದವರು ಯಾರೊಬ್ಬರೂ ದೊರಕದ ಕಾಲಕ್ಕೆ ಆ ಭಾಷೆಯನ್ನು ಕಲಿಯುವವರಿಗೆ ಪ್ರೋತ್ಸಾಹಕವಾಗಿ ವಿದ್ಯಾಕಾಲಕ್ಷೇಪದ್ರವ್ಯ, ಹೆಚ್ಚಿನ ಸಂಬಳದ ಸರ್ಕಾರಿಯ ನೌಕರಿ, ಅರಮನೆಯಲ್ಲಿ ಗೌರವ- ಮುಂತಾದವುಗಳನ್ನು ಸರ್ಕಾರದವರು ಏರ್ಪಡಿಸಿದರಾದರೂ ಈಗ ಇಂಗ್ಲಿಷು ಓದಿದವರಿಗೆಲ್ಲ ಆ ಸೌಕರ್ಯಗಳು ದೊರೆಯುವ ಹಾಗಿಲ್ಲ. ಇಂಗ್ಲಿಷನ್ನು ಬಲ್ಲವರು ಈಗ ಬೇಕಾದಷ್ಟು ಮಂದಿಯಿರುವರು. ಮನೆಮಾರುಗಳನ್ನು ಮಾರಿಕೊಂಡು ದೇಶವಿದೇಶಗಳಿಗೆ ಹೋಗಿ ದೊಡ್ಡ ದೊಡ್ಡ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರುವವರು ಅನೇಕರಿರುತ್ತಾರೆ. ಆದರೆ ಅವರೆಲ್ಲರಿಗೂ ಭಾರಿಯ ಸಂಬಳ ಎಲ್ಲಿ ದೊರೆತೀತು? ಎಲ್ಲರಿಗೂ ಸರಕಾರವು ಎಷ್ಟು ಸಹಾಯುಮಾಡೀತು? ನಮ್ಮ ಯೂನಿವರ್ಸಿಟಿಗಳ ಗ್ರ್ಯಾಜ್ಯುಯೇಟ್‌ಗಳು ಉದ್ಯೋಗಗಳು ದೊರೆಯದೆ ಹಿಂಡುಗಟ್ಟಲೆಯಾಗಿರುವಾಗ ಸಂಸ್ಕೃತವನ್ನು ಕಲಿಯುವದು ಮನಸ್ಸಿಗೆ ಸಂಸ್ಕೃತಿಯನ್ನುಂಟುಮಾಡಿಕೊಂಡು ಲೋಕವ್ಯವಹಾರದ ತಿಳಿವನ್ನೂ ನಿರ್ವಿಷಯಾನಂದ (Pure pleasure)ವನ್ನೂ ಪಡೆಯುವದಕ್ಕೇ ಹೊರತು ಹೊಟ್ಟೆಗೆ ಅನ್ನವನ್ನು ಸಂಪಾದಿಸಿಕೊಳ್ಳುವದಕ್ಕಲ್ಲವೆಂಬುದೂ ಪ್ರಪಂಚದಲ್ಲಿ ಸುಖಕ್ಕೆ ಬೇಕಾದ ಸಾಮಾಗ್ರಿಗಳು ಒದಗುವದು ಅವರವರ ಜಾಣತನವನ್ನೂ ವ್ಯವಹಾರ ದಕ್ಷತೆಯನ್ನೂ ದೈವಾನುಗ್ರಹವನ್ನೂ ಅನುಸರಿಸಿರುವದೆಂಬದೂ ಈಗ ಬಹುಜನರಿಗೆ

ಮನದಟ್ಟಾಗಿರುತ್ತದೆ. ಆದ್ದರಿಂದ 'ಸಂಸ್ಕೃತವನ್ನು ಓದಿದರೆ ಹೊಟ್ಟೆಬಟ್ಟೆಗೇನು?' ಎಂದು ಕೇಳುವದರಲ್ಲೇನೂ ಅಷ್ಟು ಹುರುಳಿಲ್ಲ.

ಸಂಸ್ಕೃತಭಾಷೆಯನ್ನು ಕಲಿಯುವದು ಬಹು ಕಷ್ಟವು; ಇದರಿಂದಾಗುವ ಪ್ರಯೋಜನವೂ ಬಲು ಕಡಿಮೆ- ಆದ್ದರಿಂದ ಸಂಸ್ಕೃತವನ್ನು ಜನರು ಅಸಡ್ಡೆಯಿಂದ ಕಾಣುತ್ತಿದ್ದಾರೆಂದು ಕೆಲವರ ಅಭಿಪ್ರಾಯವಿರುವದು ಇದೂ ಸ್ವಲ್ಪ ಮಟ್ಟಿಗೆ ನಿಜವೆ. ಸಂಸ್ಕೃತವು ವ್ಯಾಕರಣಬದ್ಧವಾಗಿರುವಂತೆ ಪ್ರಪಂಚದ ಮತ್ತೆ ಯಾವ ಭಾಷೆಯೂ ಆಗಿರುವದಿಲ್ಲ. ಪಾಣಿನಿಯ ವ್ಯಾಕರಣವನ್ನು ನೋಡಿದರೆ ನಿಯಮಗಳೂ ಪ್ರತಿಷೇಧಗಳೂ ಒಂದರ ಹಿಂದೊಂದು ಕಡಲಿನ ಹೆದ್ದೆರೆಗಳಂತೆ ಮೇಲೆ ಬೀಳುತ್ತಿರುವವೆಂದು ತೋರುವದು. ಆದರೆ ಸಂಸ್ಕೃತಶಬ್ದಗಳು ಆಗಲೆ ಬೆರಕೆ ಯಾಗಿಲ್ಲವೆ? ಇಂಗ್ಲಿಷು, ಫ್ರೆಂಚು, ಜರ್ಮನ್- ಮುಂತಾದ ತಾವು ಎಂದಿಗೂ ಕೇಳದೆ ಇದ್ದ ವಿದೇಶಿಯ ಭಾಷೆಗಳನ್ನು ಯಾವ ಆಯಾಸವೂ ಇಲ್ಲದೆ ಸ್ವಾಧೀನಪಡಿಸಿಕೊಳ್ಳುತ್ತಿರುವಾಗ ನಮ್ಮ ದೇಶದ ಯುವಕರಿಗೆ ಸಂಸ್ಕೃತವು ಅವಕ್ಕಿಂತಲೂ ಹೆಚ್ಚು ಕಷ್ಟವನ್ನು ಕೊಟ್ಟೀತೆ? ಎಂದಿಗೂ ಕೊಡಲಾರದು. ಸರಿಯಾದ ರೀತಿಯಿಂದ ಕಲಿತರೆ ದೊಡ್ಡವರು ಎರಡು ಮೂರು ವರ್ಷಗಳಲ್ಲಿ ಹುಡುಗರು ಐದಾರು ವರ್ಷಗಳಲ್ಲಿ ಈ ಭಾಷೆಯನ್ನು ಧಾರಾಳವಾಗಿ ಓದಿ, ಅರ್ಥಮಾಡಿಕೊಂಡು, ತಮ್ಮ ಅಭಿಪ್ರಾಯವನ್ನು ಇತರರಿಗೆ ತಿಳಿಸುವದಕ್ಕೆ ಆಗುವದೆಂದು ನನ್ನ ಪೂರ್ಣವಾದ ನಂಬಿಕೆಯಿರುವದು. ಸರಿಯಾದ ವಿದ್ವತ್ತನ್ನು ಸಂಪಾದಿಸುವದಕ್ಕೆ ಯಾವ ಭಾಷೆಗಾದರೂ ಕಾಲವು ಬೇಕೇ ಬೇಕು; ಈ ನಿಯಮವು ಸಂಸ್ಕೃತಕ್ಕೂ ಸೇರಿರುವದೇನೂ ಆಶ್ಚರ್ಯವಲ್ಲ. ಈ ಭಾಷೆಯಿಂದ ನಾವು ಪಡೆಯಬಹುದಾದ ಪ್ರಯೋಜನವು ಅವರವರ ಯೋಗ್ಯತೆಯ ಮೇಲೆ ಹೋಗುವದಾದ್ದರಿಂದ ಆ ವಿಷಯದಲ್ಲಿ ನಾನೇನೂ ಇಲ್ಲಿ ಮತ್ತೆ ಹೇಳುವದಿಲ್ಲ. ಲೌಕಿಕವಾದ ಅನುಕೂಲ್ಯಗಳ ವಿಷಯದಲ್ಲಿ ಹೇಳಬೇಕಾದದ್ದನ್ನು ಹಿಂದೆಯೇ ಹೇಳಿರುತ್ತೇನಾದ್ದರಿಂದ ಆ ವಿಷಯದಲ್ಲಿ ಇಲ್ಲಿ ಹೇಳತಕ್ಕದ್ದೇನೂ ಉಳಿದಿರುವದಿಲ್ಲ.

ಸಂಸ್ಕೃತವನ್ನು ಕಲಿಯಬೇಕೆಂಬವರಿಗೆ ಹೆಚ್ಚಿನ ಸೌಕರ್ಯಗಳಿಲ್ಲದ್ದು ಆ ಭಾಷೆಯು ಹಿಂದುಳಿಯುವದಕ್ಕೆ ಒಂದು ಕಾರಣವೆಂದು ಕೆಲವರ ಅಭಿಪ್ರಾಯವಿರುವದು. ಅದೂ ನಿಜವೆ. ಉದಾಹರಣೆಗೆ ನಮ್ಮ ಮೈಸೂರು ಸೀಮೆಯಲ್ಲಿ ಬೆಂಗಳೂರು, ಮೈಸೂರುನಗರಗಳಲ್ಲಿ ಎರಡು ಪ್ರೌಢವಿದ್ಯಾ

ಪಾಠಶಾಲೆಗಳಿವೆಯಾದರೂ ಎಲ್ಲರೂ ಆ ಎರಡೂರುಗಳಿಗೇ ಬಂದು ಓದುವದಕ್ಕೆ ಆಗುವದಿಲ್ಲ. ಮಿಕ್ಕ ಊರುಗಳಲ್ಲಿ ಹಿಂದೆ ಇದ್ದ ವಿದ್ವಾಂಸರು ಕೆಲವರು ಪರಲೋಕಕ್ಕೆ ತೆರಳಿದರು; ಇನ್ನು ಕೆಲವರು ತಮ್ಮ ವಿದ್ವತ್ತಿಗೆ ಗೌರವವು ದೊರೆಯುವ ಪಟ್ಟಣಗಳಿಗೆ ಹೋಗಿರುತ್ತಾರೆ ಹೀಗಿರುವದರಿಂದ ಸಾಮಾನ್ಯವಾಗಿ ಎಲ್ಲರೂ ಸಂಸ್ಕೃತವನ್ನು ಓದುವದಕ್ಕೆ ಅನುಕೂಲಗಳೆ ಇಲ್ಲವೆನ್ನಬಹುದು. ಆದರೆ ಇದು ಯಾರ ತಪ್ಪು ? ಸಂಸ್ಕೃತವು ಕಲಿಯತಕ್ಕ ಭಾಷೆಯೆಂದೂ ಅದು ನಮಗೆ ಬೇಕೆಂದೂ ಜನರಿಗೆ ತೋರಹತ್ತಿದ್ದರೆ, ಕಲಿಸುವವರು ತಾವೇ ಬರುವರು. ತಕ್ಕ ಸಾಮಾಗ್ರಿಗಳೂ ಒಂದೊಂದಾಗಿ ಒದಗುವವು. ಭಾಷೆಯಲ್ಲಿ ಇಚ್ಛೆಯನ್ನು ಮೊದಲು ಸಂಪಾದಿಸಿ ಕೊಳ್ಳುವದು ಅತ್ಯಗತ್ಯ.

ನನಗೆ ತೋರುವದೇನೆಂದರೆ, ಸಂಸ್ಕೃತಭಾಷೆಯ ವಿಷಯದಲ್ಲಿ ಜನರಿಗೆ ಯಾವ ಅಭಿಪ್ರಾಯವೂ ಇರುವದಿಲ್ಲ. ಇದೊಂದು ಉತ್ತಮವಾದ ಭಾಷೆಯೆಂದಾಗಲಿ, ಅದನ್ನು ಕಲಿಯುವದು ಅವಶ್ಯವೆಂದಾಗಲಿ ಅವರು ಎಂದಿಗೂ ಯೋಚಿಸಿಕೊಂಡೂ ಇರುವದಿಲ್ಲ. ಆ ವಿಷಯದಲ್ಲಿ ತಿಳಿದವರು ಅವರಿಗೆ ತಿಳಿವಳಿಕೆಯನ್ನು ಕೊಟ್ಟೂ ಇರುವದಿಲ್ಲ. ಎಲ್ಲರೂ ಗೆದ್ದೆತ್ತಿನ ಬಾಲವನ್ನು ಹಿಡಿಯೋಣವೆಂದು ಇಂಗ್ಲಿಷು ಇಂಗ್ಲಿಷೆಂಬ ಜಪದಲ್ಲಿ ಕೂತಿರುವರು. ಸಂಸ್ಕೃತವೆಂಬುದು ಯಾವದೋ ಒಂದು ಜಾತಿಯವರ ಭಾಷೆಯೆಂದೂ, ಯಾವದೋ ಒಂದು ಹಿಂದಿನ ಕಾಲದ ಭಾಷೆಯೆಂದೂ, ವ್ಯವಹಾರಕ್ಕೆ ಅದರಿಂದ ಏನೇನೂ ಪ್ರಯೋಜನವಾಗುವ ಹಾಗಿಲ್ಲವೆಂದೂ ಬಹು ಜನರ ಅಭಿಪ್ರಾಯವಿರುವಂತೆ ತೋರುವದು. ಸಭೆಗಳಲ್ಲಿ ಮಾತನಾಡುವ ಕಾಲಕ್ಕೆ 'ಸಂಸ್ಕೃತವೆಂಬುದು ಪವಿತ್ರಭಾಷೆ, ದೇವತೆಗಳ ಭಾಷೆ' ಎಂದು ಮುಂತಾಗಿ ಕೊಂಡಾಡುವವರು ಕೂಡ ತಾವು ಆ ಭಾಷೆಯಲ್ಲಿ ವಿಶೇಷ ಪರಿಚಯ ವನ್ನು ಹೊಂದುವದಕ್ಕಾಗಲಿ, ಜನರಲ್ಲಿ ಅದರ ಜ್ಞಾನವನ್ನು ಹಬ್ಬಿಸುವದಕ್ಕಾಗಲಿ ಎಳ್ಳಷ್ಟು ಪ್ರಯತ್ನವನ್ನೂ ಮಾಡುವ ಹಾಗೂ ತೋರುವದಿಲ್ಲ. ಆದ್ದರಿಂದ ಸಂಸ್ಕೃತಭಾಷೆಯು ಖಿಲವಾಗುತ್ತಿರುವದಕ್ಕೆ ಜನರಿಗೆ ಅದರ ಬೆಲೆಯ ವಿಷಯಕ್ಕಿರುವ ಮೌಢ್ಯವೂ ಅಸಡ್ಡೆಯೂ ಮುಖ್ಯವಾದ ಕಾರಣವೆಂದು ತೋರುತ್ತಿರುವದು.

ಈ ಭಾಷೆಯ ಜ್ಞಾನವನ್ನು ಜನರಲ್ಲಿ ಹರಡುವದಕ್ಕೆ ಈಗ ಏನೇನು ಮಾಡಬಹುದೆಂಬುದನ್ನು ಮುಂದಿನ ಲೇಖನದಲ್ಲಿ ವಿಜ್ಞಾಪಿಸುವೆನು.

* * * * *

# 42. ನಲಂದದ ವಿಶ್ವವಿದ್ಯಾನಿಲಯ

ಸಂಸ್ಕೃತದ ಹೆಗ್ಗಳಿಕೆಯನ್ನು ಕುರಿತು ಹಿಂದಿನ ಲೇಖನದಲ್ಲಿ ಬರೆದಿದ್ದೆನು. ಅದನ್ನು ಹೇಗೆ ಜನರಿಗೆ ಮನೋರಂಜಕವಾಗುವಂತೆ ಮಾಡಬೇಕೆಂಬುದನ್ನು ಮುಂದೆ ತಿಳಿಸುವೆನೆಂದು ಅಲ್ಲದೆ ಅರಿಕೆಮಾಡಿಕೊಂಡಿದ್ದೆನು. ಆ ವಿಷಯವನ್ನು ಪ್ರಸ್ತಾಪಿಸುವ ಮೊದಲು ಐತಿಹಾಸಿಕ ಕಾಲದಲ್ಲಿ ಇದೇ ಭರತಖಂಡದಲ್ಲಿ ಪ್ರೌಢವಿದ್ಯಾಭ್ಯಾಸಕ್ಕೆ ಮಾಡಿದ್ದ ಏರ್ಪಾಡೊಂದನ್ನು ಕುರಿತು ಬರೆಯಬೇಕೆಂದು ಮನಸ್ಸಾಗಿದೆ. ಏಕೆಂದರೆ ಅದರ ಪರಿಶೀಲನೆಯಿಂದ ಸಂಸ್ಕೃತಪ್ರಚಾರಕ್ಕೆ ನಾವು ಕೈಕೊಳ್ಳಬಹುದಾದ ಸಾಧನೆಗಳಿಗೆ ಕೆಲವು ಸೂಚನೆಗಳು ನಮಗೆ ದೊರಕಬಹುದಾಗಿದೆ. "**ಆರ್ಯನ್ ಪಾತ್**" ಎಂಬ ಇಂಗ್ಲಿಷ್ ಪತ್ರಿಕೆಯ ಹಳೆಯ ಸಂಚಿಕೆಯೊಂದರಲ್ಲಿ ಡಾ|| ರಾಧಾಕುಮುದ ಮುಖರ್ಜಿಯವರು ಬರೆದಿದ್ದ ಲೇಖನದಿಂದ ಇಲ್ಲಿ ವಿಷಯಗಳನ್ನು ಸಂಗ್ರಹಿಸಲಾಗಿದೆ.

ನಲಂದ ವಿಶ್ವವಿದ್ಯಾನಿಲಯವು ಆಗಿನ ಕಾಲದಲ್ಲಿ ಪ್ರಾಚ್ಯದೇಶದಲ್ಲೆಲ್ಲ ದೊಡ್ಡದಾಗಿದ್ದ ವಿಶ್ವವಿದ್ಯಾನಿಲಯವೆನ್ನಬಹುದು. ಅದರ ವರ್ಣನೆಯನ್ನು **ಹ್ಯೂಎನ್‌ತ್ಸಾಂಗ್** ಮತ್ತು **ಇತ್ಸಿಂಗ್** ಎಂಬ ಇಬ್ಬರು ಚೀನಾದೇಶದ ಯಾತ್ರಿಕರು ಬರೆದಿಟ್ಟಿರುತ್ತಾರೆ. ಅವರಿಬ್ಬರೂ ಈ ವಿದ್ಯಾನಿಲಯದಲ್ಲಿ ಹಲವು ವರ್ಷಗಳಿದ್ದು ತಮ್ಮ ಸ್ವಂತ ಅನುಭವದಿಂದಲೇ ಈ ವರ್ಣನೆಯನ್ನು ಕೊಟ್ಟಿರುತ್ತಾರೆ. ವಿದ್ಯಾನಿಲಯದಲ್ಲಿ ಆಗ 8500 ವಿದ್ಯಾರ್ಥಿಗಳೂ, 1510 ಜನ ಉಪಾಧ್ಯಾಯರೂ ಇದ್ದರೆಂದು ಹ್ಯೂಎನ್‌ತ್ಸಾಂಗನು ಹೇಳಿರುವದನ್ನು ಕೇಳಿದರೆ ಯಾರು ತಾನೆ ಆಶ್ಚರ್ಯದಿಂದ ಚಮಕಿತರಾಗದೆ ಇದ್ದಾರು!

ಹತ್ತು ಸಾವಿರ ಜನಸಂಖ್ಯೆಯ ನಗರಿಯಾಗಿದ್ದ ಈ ವಿಶ್ವವಿದ್ಯಾಲಯಕ್ಕೆ ಭರತಖಂಡದ ಎಲ್ಲಾ ಭಾಗಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು. ಕಾಶಿಗೆ ಈಗಲೂ ಯಾತ್ರಿಕರು ತಂಡತಂಡವಾಗಿ ನುಗ್ಗಿ ಬರುತ್ತಿರುವಂತೆ ಈ ಸುಪ್ರಸಿದ್ಧ ವಿದ್ಯಾಪೀಠಕ್ಕೆ ಎಲ್ಲಾ ಕಡೆಯಿಂದಲೂ ವಿದ್ಯಾರ್ಜನೆಗಾಗಿ ಜನರು ಬರುತ್ತಿದ್ದದ್ದೇನೂ ಅಚ್ಚರಿಯಲ್ಲಷ್ಟೆ. ಆದರೆ ಚೀಣ, ಜಪಾನ್, ಕೊರಿಯ, ಮಂಗೋಲಿಯ, ತೊಖಾರ- ಈ ಪ್ರಾಂತಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರಂತೆ; ಅವರ ಹೆಸರು **ನಂಜಿಯೋನ ಅನುಕ್ರಮಣಿಕೆ** ಎಂಬ ಚೀಣಾಗ್ರಂಥದಲ್ಲಿ ಕಾಣಬರುತ್ತದೆ.

ವಿದ್ಯಾಲಯದಲ್ಲಿ ಈಗಿನ ಕಾಲೇಜುಗಳಲ್ಲಿರುವಂತೆ 'ತರಗತಿ'ಗಳಿರಲಿಲ್ಲ. ವಿದ್ಯಾರ್ಥಿಗಳಲ್ಲಿ ಒಬ್ಬರೊಬ್ಬರಿಗಿರುವ ವೈಯಕ್ತಿಕಭೇದಗಳನ್ನು ಗಣಿಸದೆ ಗುಂಪು

ಗುಂಪಾಗಿ ಕೂಡಿಸಿ ತಲೆಗೆಲ್ಲ ಒಂದೇ ಮಂತ್ರವೆಂದ ಅರೆಬರೆಶಾಸ್ತ್ರಿಯಂತೆ ಎಲ್ಲರಿಗೂ ಒಂದೇ ಬಗೆಯ ವಿದ್ಯೆಯನ್ನು ಹೇಳುವ ಪದ್ಧತಿ ಅಲ್ಲಿರಲಿಲ್ಲಷ್ಟೆ. ಒಬ್ಬ ಉಪಾಧ್ಯಾಯನಿಗೆ ಎಷ್ಟು ಜನ ವಿದ್ಯಾರ್ಥಿಗಳು ಇದ್ದರೆಂಬುದನ್ನು ಮೇಲೆ ಕೊಟ್ಟಿರುವ ವಿದ್ಯಾರ್ಥಿ ಸಂಖ್ಯೆಯಿಂದಲೇ ಕಲ್ಪಿಸಬಹುದು. ಒಂದು ದಿನಕ್ಕೆ ನೂರು ಬೇರೆಬೇರೆ ವಿಷಯಗಳನ್ನು ಕುರಿತು ನೂರುನೂರು ಪಾಠಗಳು ಆಗುತ್ತಿದ್ದವೆಂದು ಹ್ಯೂಎನ್‌ತ್ಸಾಂಗನು ಬರೆದಿರುವುದನ್ನು ಮನದಂದರೆ ಗುರು-ಶಿಷ್ಯರಿಗೆ ಇದ್ದ ನಿಕಟ ಸಂಬಂಧವೂ ವಿದ್ಯಾಲಯದಲ್ಲಿ ಆಗುತ್ತಿದ್ದ ಕೆಲಸದ ಪರಿಮಾಣವೂ ವ್ಯಕ್ತವಾಗುತ್ತದೆ.

ನಲಂದ ವಿದ್ಯಾಲಯದಲ್ಲಿ ಮುಖ್ಯವಾಗಿ ವಿದ್ವಾಂಸರು ಪ್ರೌಢಪಾಠಕ್ಕೆ ಸೇರುತ್ತಿದ್ದರು. ವಿದೇಶದ ವಿದ್ಯಾರ್ಥಿಗಳು ಇಲ್ಲಿಗೆ ಬಂದು ತಯಾರಾದ ಬಳಿಕ ಮಹಾವಿದ್ವಾಂಸರೆನಿಸಿಕೊಂಡು ತಮ್ಮ ದೇಶಕ್ಕೆ ತೆರಳುತ್ತಿದ್ದರು. ಈ ಕಾರಣದಿಂದ ಬಂದಬಂದವರಿಗೆಲ್ಲ ಇಲ್ಲಿ ಸ್ಥಳವು ದೊರಕುತ್ತಿರಲಿಲ್ಲ. ಬಂದ ವಿದ್ಯಾರ್ಥಿಯನ್ನು ವಿದ್ಯಾಲಯದ ದ್ವಾರಪಾಲಕರಂತಿದ್ದ ಘನವಿದ್ವಾಂಸರುಗಳು ಪರೀಕ್ಷೆ ಮಾಡಿಯೇ ಪ್ರವೇಶವನ್ನು ಕೊಡುತ್ತಿದ್ದರು. ವಿದ್ಯಾಭ್ಯಾಸಕ್ಕೆಂದು ಬಂದವರಲ್ಲಿ ನೂರಕ್ಕೆ ಇಪ್ಪತ್ತು ಜನರಿಗೆ ಮಾತ್ರ ಪ್ರವೇಶವು ಸಿಕ್ಕುತ್ತಿತ್ತುಷ್ಟೆ. ಆದ್ದರಿಂದ ಇಲ್ಲಿ ಅಭ್ಯಾಸಮಾಡಿದವರು ಆಯಾ ವಿದ್ಯೆಗಳಲ್ಲಿ ದಿಗ್ದಂತಿಗಳೆನಿಸಿಕೊಂಡೇ ಹೊರಡುತ್ತಿದ್ದರು. ನಲಂದ ವಿದ್ವಾಂಸರೆಂದರೆ ಎಲ್ಲೆಲ್ಲಿಯೂ ಗೌರವವಿರುತ್ತಿತ್ತುಷ್ಟೆ.

ಇಲ್ಲಿ ಮಾಡುತ್ತಿದ್ದ ಉಪದೇಶಕ್ರಮವೂ ಅಸಾಧಾರಣವಾಗಿರುತ್ತಿತ್ತು. ಬೇರೆಬೇರೆಯ ಸಿದ್ಧಾಂತಗಳ ಪ್ರತಿನಿಧಿಗಳಾದ ವಿದ್ವಾಂಸರುಗಳು ಮಾಡುವ ಚರ್ಚೆಯೇ ಇಲ್ಲಿ ನಡೆಯುತ್ತಿದ್ದ ಅಭ್ಯಾಸವು. ಅಧ್ಯಯನ, ಸಂವಾದ- ಇವುಗಳಿಂದ ಹಗಲೂ ಇರುಳೂ ಕಾಲಕ್ಷೇಪಮಾಡುತ್ತಿದ್ದ ವಿದ್ವಾಂಸರ ಪರಿಷತ್ತೇ ಈ ವಿದ್ಯಾಲಯವು. ''ತದ್ವಿದ್ಯೈಃ ಸಹ ಸಂವಾದಃ'' ಎಂಬಂತೆ ತತ್ತ್ವನಿರ್ಧಾರಣೆಗಾಗಿ ವಿದ್ವಾಂಸರುಗಳೊಡನೆ ಚರ್ಚೆಮಾಡಿ ಇತ್ಯರ್ಥಮಾಡುವ ಪದ್ಧತಿಯೇ ಅತ್ಯುತ್ತಮವೆಂಬುದನ್ನು ಅವರು ಮನಗಂಡಿದ್ದರು. ಜನಕನ ಸಭೆಯಲ್ಲಿ ಗೋಸಹಸ್ರಕ್ಕಾಗಿ ಚರ್ಚೆಮಾಡಿದ ಕುರುಪಾಂಚಾಲರ ಪರಿಷತ್ತಿನಂತೆ ಆ ವಿದ್ಯಾಪೀಠವು ವಿವಿಧಸಿದ್ಧಾಂತಗಳ ಅನುಯಾಯಿಗಳ ಚರ್ಚಾಗೋಷ್ಠಿಯಾಗಿರುತ್ತಿತ್ತುಷ್ಟೆ. ನಲಂದವು ಮುಖ್ಯವಾಗಿ ಬೌದ್ಧರ ವಿದ್ಯಾಪೀಠವಾಗಿತ್ತಾದರೂ ಅಲ್ಲಿ ವೇದಗಳು, ದರ್ಶನಗಳು, ಆಯುರ್ವೇದ- ಇವೆಲ್ಲವುಗಳ ಅಭ್ಯಾಸವೂ ಸಾಗುತ್ತಿತ್ತುಷ್ಟೆ. ಬೌದ್ಧರ ಹದಿನೆಂಟು ಪ್ರಭೇದಗಳೂ ಅಲ್ಲಿ

ಸೇರುತ್ತಿದ್ದವು. ಹೇತುವಿದ್ಯೆಯೂ, ಸಾಂಖ್ಯವೂ, ಶಬ್ದವಿದ್ಯೆಯೂ, ಚಿಕಿತ್ಸಾವಿದ್ಯೆಯೂ, ಅಥರ್ವವೇದವೇ ಮುಂತಾದ ವೇದಗಳು, ಯೋಗ, ವ್ಯಾಕರಣ- ಇವೆಲ್ಲವೂ ಅಲ್ಲಿ ಪ್ರಚಲಿತವಾಗಿದ್ದವು. ಆ ವಿದ್ಯಾಲಯದ ಕುಲಪತಿಯಾಗಿದ್ದ **ಶೀಲಭದ್ರ**ನು ಯೋಗದಲ್ಲಿ ನಿಷ್ಣಾತನಾಗಿದ್ದನು; ಆತನ ಶಿಷ್ಯನಾಗಿ ಯೋಗಶಾಸ್ತ್ರಾಭ್ಯಾಸವನ್ನು ಮಾಡುವದಕ್ಕಾಗಿಯೇ ಹ್ಯೂಎನ್ ತ್ಸಾಂಗನು ಬಂದಿದ್ದವನು. **ಆಗಿನ ಚಕ್ರವರ್ತಿಯಾಗಿದ್ದ ಶ್ರೀಹರ್ಷನು** ತ್ಸಾಂಗನು ಮಹಾಯಾನದಲ್ಲಿ ಅಪ್ರತಿಮವಿದ್ವಾಂಸನೆಂದು ಪರಿಗಣಿಸಿದ್ದನು. ಈ ರೀತಿಯಲ್ಲಿ ಪರಸ್ಪರವಾದ ಪ್ರತಿವಾದಿಗಳಿಂದ ಒಬ್ಬರನೊಬ್ಬರು ಖಂಡಿಸುತ್ತಿದ್ದ ಆಗಿನ ಸೈದ್ಧಾಂತಿಕರಿಗೆಲ್ಲ ನಲಂದವು ಒಂದು ಸಾಧಾರಣವಾದ ಸಮಾಗಮಸ್ಥಾನವಾಗಿತ್ತು. ಆದರೂ ಆ ಪ್ರಖ್ಯಾತಸ್ಥಾನದ ಗೌರವಕ್ಕಾಗಲಿ ಶಾಂತಿಗಾಗಲಿ ಈ ಚರ್ಚೆಗಳಿಂದ ಎಳ್ಳಷ್ಟೂ ಕುಂದಕವುಂಟಾಗಿರಲಿಲ್ಲವು.

ನಲಂದದಲ್ಲಿದ್ದ ಕಟ್ಟಡಗಳು ಶತಮಾನಗಟ್ಟಲೆಯಾಗಿ ಬೆಳೆದುಕೊಂಡು ಬಂದಿದ್ದವು. ಕೆಲವರು ವರ್ತಕರು **ಕ್ರಿ.ಪೂ. ಐದನೆಯ ಶತಮಾನದಲ್ಲಿ ಬುದ್ಧನಿಗೆಂದು ಕೊಟ್ಟಿದ್ದ ದಾನವು ಆ ನಿವೇಶನವು. ಕ್ರಿ.ಶ. ಏಳನೆಯ ಶತಮಾನದಲ್ಲಿ ಹ್ಯೂ ಎನ್‌ತ್ಸಾಂಗನು ಕಂಡಾಗ** ಅಲ್ಲಿ ಮುಗಿಲನ್ನು ಮುಟ್ಟುತ್ತಿದ್ದ ಹಲವು ಅಂತಸ್ತುಗಳ ಆರು ವಿಶಾಲವಾದ ಭವನಗಳು ನಿರ್ಮಿತವಾಗಿದ್ದವು. ಅವುಗಳಲ್ಲಿ ಒಂದೊಂದನ್ನು ಒಬ್ಬೊಬ್ಬ ರಾಜನು ದಾನಮಾಡಿದ್ದನು. ಸುಮಾತ್ರದ್ವೀಪದ ರಾಜನು ಒಂದು ದೊಡ್ಡ ವಿದ್ಯಾಲಯದ ಕಟ್ಟಡವನ್ನು ಕಟ್ಟಿಸಿಕೊಟ್ಟಿದ್ದನು. ದೈನಂದಿನದ ಖರ್ಚಿಗೆ ನೂರು ಗ್ರಾಮಗಳು ಆ ವಿಶ್ವವಿದ್ಯಾಲಯಕ್ಕೆ ಸೇರಿದ್ದವೆಂದು ಹ್ಯೂಎನ್‌ತ್ಸಾಂಗನು ಬರೆದಿರುತ್ತಾನೆ. ಆದರೂ ವಿದ್ಯಾಲಯದಲ್ಲಿದ್ದವರಿಗೆಲ್ಲ ಅಶನವಸನವಾಸಸ್ಥಾನಗಳನ್ನು ಧರ್ಮಾರ್ಥವಾಗಿ ಏರ್ಪಡಿಸುವದಕ್ಕೆ ಆಗುವ ಖರ್ಚುವೆಚ್ಚಗಳಿಗೆ ಇಷ್ಟು ಸಾಕಾಗುತ್ತಿರಲಿಲ್ಲವು. ನೆರೆಹೊರೆಯ ಇನ್ನೂರು ಗೃಹಸ್ಥರು ಬೇಕಾದ ಸೌಕರ್ಯಗಳನ್ನು ಒದಗಿಸುತ್ತಿದ್ದರು. ಎಷ್ಟೇ ಕಡಿಮೆ ಎಂದರೂ ದಿನಕ್ಕೆ ಇನ್ನೂರು ಮಣ ಅಕ್ಕಿಯು, ಅಷ್ಟೇ ಹಾಲು, ಅಷ್ಟೇ ತುಪ್ಪ ಆದಕ್ಕೆ ತಕ್ಕ ಉಳಿದ ಲವಾಜಮೆಯೂ ಬೇಕಾಗುತ್ತಿತ್ತು !

ಈ ವಿದ್ಯಾಪೀಠದಲ್ಲಿ ಸಾವಿರದ ಐನೂರು ಉಪಾಧ್ಯಾಯರು ಇದ್ದರೆಂದು ಆಗಲೆ ಹೇಳಿದ್ದಾಗಿದೆ. ಅಲ್ಲಿದ್ದ ಪುಸ್ತಕಭಂಡಾರಕ್ಕೆ ಮೂರು ದೊಡ್ಡ ಕಟ್ಟಡಗಳಿದ್ದವು; ಅವುಗಳಲ್ಲಿ ಒಂದು ಒಂಬತ್ತು ಮಹಡಿಗಳ ಭವನವು. ಇತ್ಸಿಂಗನೊಬ್ಬನೇ ನಾಲ್ಕುನೂರು ಹಸ್ತಲಿಖಿತ ಗ್ರಂಥಗಳನ್ನು ನಕಲುಮಾಡಿಕೊಂಡನಂತೆ! ಅವುಗಳಲ್ಲಿ ಹಲವು ನೇಪಾಲದಲ್ಲಿಯೂ ತಿಬ್ಬೆತ್ತಿನಲ್ಲಿಯೂ ಈಗಲೂ ಇರುತ್ತವೆ.

ತತ್ತ್ವದಲ್ಲಿ ಬದ್ಧಾದರರಾದ ಹಲವು ವಿದ್ವಾಂಸರು ತಿಬ್ಬೆತ್ತುಫಿ, ಚೀಣ ಮುಂತಾದ ದೇಶಗಳಿಗೆ ಹೋಗಿ ಅಲ್ಲಿಯ ಭಾಷೆಗಳಿಗೆ ಸಂಸ್ಕೃತವಮೂಲಗ್ರಂಥಗಳನ್ನು ಅನುವಾದವಮಾಡಿದರು. ಪ್ರಯಾಣಸೌಕರ್ಯವಿಲ್ಲದಿದ್ದ ಆ ಕಾಲದಲ್ಲಿ ಆ ಮಾಹಾಶಯರು ಪಟ್ಟ ಕಷ್ಟಗಳಿಂದಲೇ ಅವರಿಗೆ ವಿದ್ಯಾಪ್ರಚಾರದಲ್ಲಿ ಎಂಥ ಆದರವಿತ್ತೆಂಬುದನ್ನು ಸೂಚಿಸುತ್ತದೆ. ಚೀಣದೇಶಕ್ಕೆ ಹೋಗಬೇಕಾದರೆ ಮರುಭೂಮಿಗಳನ್ನು ದಾಟಬೇಕಾಗುತ್ತಿತ್ತುಫಿ. ಗುಡ್ಡಬೆಟ್ಟಗಳನ್ನು ಹತ್ತಿ ಇಳಿಯಬೇಕಾಗುತ್ತಿತ್ತುಫಿ. ಜನವಸತಿಯಿಲ್ಲದ, ಪ್ರಾಣಕ್ಕೂ ಅಪಾಯವಿದ್ದ ಕಾಂತಾರಗಳನ್ನು ಹಾಯ್ದುಹೋಗಬೇಕಾಗಿತ್ತುಫಿ. ಆಗಿನ ರಾಜಕೀಯಸ್ಥಿತಿಯನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ ಮನೆಮಠಗಳನ್ನೂ ಹೆಂಡಿರುಮಕ್ಕಳನ್ನೂ ಬಿಟ್ಟುಫಿ, ಕಾಣದೆಕೇಳದೆ ಇದ್ದ ನಡೆನುಡಿಗಳಲ್ಲಿ ತಮ್ಮ ದೇಶಕ್ಕಿಂತ ಅತ್ಯಂತ ಭಿನ್ನವಾಗಿದ್ದ ಈ ದೇಶಗಳಿಗೆ ಕೇವಲ ಜ್ಞಾನಪ್ರಸಾರಕ್ಕೆಂದೇ ಹೋದ ಆ ಮಹಾತ್ಮರ ಎದೆಯನ್ನೂ ಉತ್ಸಾಹವನ್ನೂ ತತ್ತ್ವಾದರವನ್ನೂ ಎಷ್ಟೆಂದು ಕೊಂಡಾಡೋಣ!

ಇಂಥ ಕಷ್ಟನಿಷ್ಠುರಗಳನ್ನೂ ಸಹಿಸಿಕೊಂಡು ತಲೆತಲಾಂತರದವರೆಗೂ ಒಂದೇ ಸ್ಥೈರ್ಯದಿಂದ ಮಾಡಿದ ಫಲವಾಗಿ ಭರತಖಂಡದ ಕೀರ್ತಿಯು ವಿದೇಶಗಳಲ್ಲೆಲ್ಲ ಹರಡಿತು. ರಾಜ್ಯದಾಹದಿಂದ ಸೇನೆಗಳನ್ನೂ ಘಾತುಕಾಸ್ತ್ರಗಳನ್ನೂ ತೆಗೆದುಕೊಂಡು ರಕ್ತಪಾತಪೂರ್ವಕವಾಗಿ ಚಕ್ರಾಧಿಪತ್ಯವನ್ನುಕಟ್ಟಿದ ಶೂರರನ್ನು ಹಡೆದ ಕೀರ್ತಿಯು ಮಿಕ್ಕ ದೇಶಗಳಿಗೆ ಬರಬಹುದು. ಆದರೆ ಎಲ್ಲಾ ಬಗೆಯ ಸಂಕಟಗಳನ್ನೂ ತಾವೇ ಸಹಿಸಿಕೊಂಡು **ತಮ್ಮ ಶಾಂತಿಸಂದೇಶದಿಂದ ಪರದೇಶಗಳ ವಿದ್ವಾಂಸರ ಬುದ್ಧಿಯನ್ನೆಲ್ಲ ಸೂರೆಗೈದ ಮಹನೀಯರನ್ನು ಹೊರಕ್ಕೆ ತಂದ ಧವಲಯಶಸ್ಸು ಭರತಖಂಡಕ್ಕೆ, ಅದರಲ್ಲಿಯೂ ನಲಂದ ವಿದ್ಯಾಪೀಠಕ್ಕೆ,ಇಂದಿಗೂ ಮೀಸಲಾಗಿದೆ.**

* * * * *

## 43. ಸಂಸ್ಕೃತವು ಸರ್ವರ ಭಾಷೆಯಾದೀತೆ?

ಸಂಸ್ಕೃತವೆಂದರೆ ಭರತಖಂಡದ ನಿವಾಸಿಗಳಿಗೆ ಕಿವಿ ನೆಟ್ಟಗಾಗುವದು. ರುಚಿಯಾದ ಭಕ್ಷ್ಯಭೋಜ್ಯಗಳ ಹೆಸರನ್ನು ಕೇಳಿದರೆ ಭೋಜನಪ್ರಿಯರ ನಾಲಗೆಯಲ್ಲಿ ನೀರೂರುವಂತೆ ಆ ಭಾಷೆಯ ಹೆಸರನ್ನು ಕೇಳಿದರೇ ಅನೇಕರ ಮನಸ್ಸು ಸೆರೆಸಿಕ್ಕುತ್ತದೆ. ಭರತಖಂಡಕ್ಕೆ ಸ್ವಾತಂತ್ರ್ಯವು ದೊರೆತಮೇಲೆ ಈ ದೇಶದ ಹಿಂದಿನ ನಾಗರಿಕತೆಯ

ಗುರುತುಗಳನ್ನು ಸರಿಪಡಿಸಿ ಬೆಳೆಯಿಸಿಕೊಳ್ಳುವ ಕಡೆಗೆ ಜನನಾಯಕರ ದೃಷ್ಟಿಯು ಸಹಜವಾಗಿ ಹೊರಳಿರುತ್ತದೆಯಷ್ಟೆ. ಈ ಕಾರಣದಿಂದ ಭರತಖಂಡದ ಸಂಸ್ಕೃತಿಯ ಚಿಹ್ನೆಗಳಲ್ಲಿ ಬಹುಮುಖ್ಯವಾದ ಸಂಸ್ಕೃತಭಾಷೆಯ ವಿಚಾರವೂ ಈಗ ಪ್ರಾಮುಖ್ಯವನ್ನು ಪಡೆದಿರುವದು ಆಶ್ಚರ್ಯವಲ್ಲ.

ಈ ಕಾರಣದಿಂದ ಅನೇಕರು "ಸಂಸ್ಕೃತವನ್ನೇ ಸರಕಾರದ ಭಾಷೆಯನ್ನಾಗಿ ಏತಕ್ಕೆ ಮಾಡಬಾರದು?" ಎಂಬ ಪ್ರಶ್ನೆಯನ್ನು ಜನತೆಯ ಮುಂದಿಡುತ್ತಿದಾರೆ. **ಪಶ್ಚಿಮ ಬಂಗಾಳದ ಗವರ್ನರರೂ ಈ ಪ್ರಶ್ನೆಗೆ ಒತ್ತಾಸೆಕೊಟ್ಟದ್ದು ಬಹುಜನರ ಕಣ್ಣನ್ನು ತೆರೆದಿದೆ.** ಆದರೆ "ಸಂಸ್ಕೃತವನ್ನು ಕೂಡಲೆ ಮುಂದಕ್ಕೆ ತರಬೇಕು!" ಎಂಬ ಉತ್ಸಾಹದ ಕೂಗಿಗೆ "ತಡೆಯಿರಿ, ಅಪಾಯಗಳೇನಾದರೂ ಇವೆಯೆ, ನೋಡೋಣ" ಎಂಬ ಪ್ರತಿಧ್ವನಿಯ ಎಚ್ಚರಿಕೆಯ ಮಾತುಗಳೂ ಹಲವು ಕೇಳಿಬರುತ್ತಿವೆ. ಆದ್ದರಿಂದ ಸಂಸ್ಕೃತ ವನ್ನು ದೇಶದಲ್ಲೆಲ್ಲ ಹರಡುವದಕ್ಕೆ ಅನುಕೂಲವಾಗಿರುವ ವಾದಗಳನ್ನೂ ಅವುಗಳಿಗೆ ಅಡ್ಡಿಯಾಗಿರುವ ಆಕ್ಷೇಪಗಳನ್ನೂ ಪರೀಕ್ಷಿಸುವ ಕಾಲವು ಬಂದಿದೆ ಎನ್ನಬಹುದು.

ಇಂಗ್ಲಿಷು ಭಾಷೆಯು ನಮ್ಮ ದೇಶದ ಬುದ್ಧಿವಂತರನ್ನು ಒಂದುಗೂಡಿಸಿರುವ ಭಾಷೆ. ಈಗಿನ ಕಾಲಕ್ಕೆ ಬೇಕಾಗಿರುವ ಪ್ರಧಾನವಿಷಯಗಳು ಹಲವು ಅದರಲ್ಲಿವೆ. ಸಂಸ್ಕೃತದಲ್ಲಿ ಅವುಗಳ ಸೊಲ್ಲೇ ಇಲ್ಲ. ಇಂಗ್ಲಿಷು ನಮ್ಮ ದೇಶಕ್ಕೂ ಪರರಾಷ್ಟ್ರಗಳಿಗೂ ಸಂಬಂಧಪಟ್ಟ ಭಾಷೆ. ಅದನ್ನು ಕೈಬಿಟ್ಟು ಅದರ ಸ್ಥಾನದಲ್ಲಿ ಸಂಸ್ಕೃತವನ್ನು ತಂದರೆ ಆಗುವ ನಷ್ಟಕ್ಕೆ ಯಾರು ಹೊಣೆ?- ಎಂದು ಕೆಲವರು ಕೇಳುತ್ತಿರುವರು. ಆದರೆ ಇದಕ್ಕೆ ಮಾರುತ್ತರವನ್ನು ಕೊಡಬಲ್ಲವರು ಇಲ್ಲದೆ ಇಲ್ಲ. ಇಂಗ್ಲಿಷು ಭಾಷೆಯನ್ನು ಅರಿಯದ ಪಾಶ್ಚಾತ್ಯದೇಶಗಳೂ ಇವೆಯಷ್ಟೆ; ಅವುಗಳೆಲ್ಲ ನಾಗರಿಕತೆಯಲ್ಲಿ ಹಿಂದುಳಿದಿವೆಯೆ? ಆ ದೇಶದವರಿಗೆ ಆಧುನಿಕವಿಚಾರಗಳು ತಿಳಿಯುವ ಹಾಗೇ ಇಲ್ಲವೆ? ಇಂಗ್ಲಿಷು ಇಲ್ಲದೆ ಅವರಿಗೆ ಅವರ ದೇಶಭಾಷೆಗಳ ಮೂಲಕವಾಗಿ ಆ ವಿಚಾರಗಳನ್ನು ಒದಗಿಸಿ ಕೊಳ್ಳುವದಕ್ಕೆ ಅನುಕೂಲ್ಯವಿದ್ದರೆ ನಮ್ಮ ದೇಶದ ಭಾಷೆಗಳಿಗೂ ಆ ವಿಷಯಗಳನ್ನು ಇಳಿಸಿಕೊಳ್ಳುವದಕ್ಕೆ ಅಡ್ಡಿ ಏನಿದೆ? ಇದಲ್ಲದೆ ಇಂಗ್ಲಿಷು ಈಗಲೂ ನಮ್ಮ ದೇಶದ ಬಹು ಜನರಿಗೆ ಬರುವದಿಲ್ಲ; ಬರುವಷ್ಟು ಜನರಿಗೂ ಇಂಗ್ಲಿಷಿನಲ್ಲಿರುವ ವಿವಿಧವಿಷಯಗಳನ್ನು ಅರಗಿಸಿಕೊಳ್ಳುವ ಶಕ್ತಿಯು ಎಲ್ಲರಿಗೂ ಇಲ್ಲವೂ ಇಲ್ಲ. ಹೀಗಿರುವಲ್ಲಿ -ಸಂಸ್ಕೃತವನ್ನು ಇಂಗ್ಲಿಷಿನ ಸ್ಥಾನಕ್ಕೆ ತಂದ ಮಾತ್ರದಿಂದ ಆಧುನಿಕ ಪ್ರಪಂಚದ ಸಂಬಂಧವು ನಮಗೆ ತಪ್ಪಿಹೋಗುವದೆಂಬ ಅಂಜಿಕೆಗೆ ಬುಡವೆಲ್ಲಿದೆ?- ಎಂದು ಸಂಸ್ಕೃತವಾದಿಗಳು ಕೇಳುತ್ತಿರುವರು. ಈ ವಿಷಯದಲ್ಲಿ ನನಗೆ ತೋರುವದೇನೆಂದರೆ ಸಂಸ್ಕೃತವು ದೇಶದ

ಮುಖ್ಯಭಾಷೆಯಾದರೂ ಇಂಗ್ಲಿಷನ್ನು ಸಂಪೂರ್ಣವಾಗಿ ಕೈಬಿಡುವದಕ್ಕೆ ಯಾವ ಕಾರಣವೂ ಇರುವದಿಲ್ಲಫ. ಇಂಗ್ಲಿಷಿನಿಂದಾಗುವ ಪ್ರಯೋಜನವನ್ನು ಬಲ್ಲ ಸರಕಾರದವರು ಅದಕ್ಕೂ ತಕ್ಕಷ್ಟು ಪ್ರೋತ್ಸಾಹವನ್ನು ಆಗಲೂ ಕೊಡಬಹುದು. ಆಗ ಇಂಗ್ಲಿಷು ರಾಜಭಾಷೆಯಾಗಿ ಉಳಿಯುವದಿಲ್ಲ: ಆಧುನಿಕವಿಚಾರಗಳಿಗೆ ಸಾಧನವಾದ ಭಾಷೆಯಾಗಿರುತ್ತದೆ, ಅಷ್ಟೆ. ಆದ್ದರಿಂದ ಇಂಗ್ಲಿಷಿನ ಮೇಲಿನ ಕನಿಕರದಿಂದ ಸಂಸ್ಕೃತ ವನ್ನು ಬಳಸುವದಕ್ಕೆ ತಡಮಾಡುವದರಲ್ಲಿ ಯಾವ ಅರ್ಥವೂ ಇರುವದಿಲ್ಲ.

ಸಂಸ್ಕೃತವು ಬ್ರಾಹ್ಮಣರ ಭಾಷೆ; ಆದ್ದರಿಂದ ಅದನ್ನು ಪ್ರೋತ್ಸಾಹಿಸಿದರೆ ದ್ರಾವಿಡಭಾಷೆಗಳಿಗೆ ಸಂಚಕಾರವು ಬರುವದು- ಎಂದು ಕೆಲವರೆನ್ನುವರು. ಸಂಸ್ಕೃತವು ಸನಾತನಾರ್ಯರ ಭಾಷೆಯು; ಆದ್ದರಿಂದ ಹಲವು ಧರ್ಮಗಳಿರುವ ಭರತಖಂಡಕ್ಕೆ ಈಗ ತಕ್ಕದ್ದಲ್ಲ- ಎಂದು ಕೆಲವರೆನ್ನುವರು. ಆದರೆ ಇವೆರಡೂ ಸಂಕುಚಿತದೃಷ್ಟಿಯಿಂದ ಹೊರಟಿರುವ ಆಕ್ಷೇಪಗಳೆನ್ನುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ. ಭಾಷಾ ದೃಷ್ಟಿಯಿಂದ ದ್ರಾವಿಡಭಾಷೆಗಳು ಮೂಲದಲ್ಲಿ ಬೇರೆಯಾಗಿರುತ್ತಿದ್ದರೂ ಈಗ ಅವುಗಳಲ್ಲಿ ಸಂಸ್ಕೃತವು ಹಾಸುಹೊಕ್ಕಾಗಿ ಹೆಣೆದುಕೊಂಡು ಬಿಟ್ಟಿದೆ. ಮನೆಗೆ ಬಂದು ಸಂಸಾರವನ್ನು ಮಾಡಿಕೊಂಡದ್ದು ಹಲವು ಮಕ್ಕಳನ್ನು ಹಡೆದ ಬಳಿಕ "ಈ ಸೊಸೆ ಕಂಡವರ ಮನೆಯಿಂದ ಬಂದ ಹೆಣ್ಣುಮಗಳು, ನಮ್ಮ ಮನೆಯುವಳಲ್ಲ!" ಎಂಬ ಅತ್ತೆಯ ದೃಷ್ಟಿಕೋಣವು ಈ ಆಕ್ಷೇಪಗಳಲ್ಲಿ ಅಡಕವಾಗಿರುತ್ತದೆ. ಈಗ ಸಂಸ್ಕೃತದ ಪ್ರಭಾವಕ್ಕೆ ಅಷ್ಟಿಷ್ಟಾದರೂ ಒಳಗಾಗದ ಭರತಖಂಡದ ಭಾಷೆಯು ಯಾವದೊಂದೂ ಇಲ್ಲವೆಂದು ಎದೆತಟ್ಟಿಕೊಂಡು ಹೇಳಬಹುದಾಗಿದೆ. ಇನ್ನು ಮತದೃಷ್ಟಿಯಿಂದ ನೋಡಿದರೆ ಸಂಸ್ಕೃತದಲ್ಲಿ ಸನಾತನಾರ್ಯರ ವೇದ, ಸ್ಮೃತಿಗಳು, ಪುರಾಣಗಳು, ಶಾಸ್ತ್ರಗಳು, ಧರ್ಮಶಾಸ್ತ್ರಗಳು, ಕಾವ್ಯಚಂಪೂ ನಾಟಕಗಳು, ಲೌಕಿಕವಿಚಾರಗಳು- ಇವುಗಳಂತೆಯೇ ಜೈನರ, ಬೌದ್ಧರ ಮತ್ತು ಮುಸಲ್ಮಾನರ ಗ್ರಂಥಗಳೂ ಇವೆ. ಸಂಸ್ಕೃತಭಾಷೆಯಲ್ಲಿರುವ ಅಮೂಲ್ಯ ವಿಚಾರಗಳನ್ನು ಮೊಗಲರ ಕಾಲದಲ್ಲಿಯೂ ಬ್ರಿಟಿಷರ ಕಾಲದಲ್ಲಿಯೂ ಬೇರೆಯ ಭಾಷೆಗಳಿಗೂ ಪರಿವರ್ತನೆಮಾಡಿಕೊಂಡು ಮತಾಂತರದವರೂ ಉಪಯೋಗಿಸಿದ್ದನ್ನು ಕಂಡುಕಂಡೂ ನಾವು ಸಂಸ್ಕೃತವು ಯಾವುದೋ ಒಂದು ಧರ್ಮದವರಿಗೆ ಮೀಸಲಾಗಿರುವ ಭಾಷೆಯೆಂದು ಎಣಿಸುವದಕ್ಕೆ ಯಾವ ಆಧಾರವೂ ಇರುವದಿಲ್ಲ.

ಸಂಸ್ಕೃತವು ಕಲಿಯುವದಕ್ಕೆ ಕಷ್ಟವಾದ ಭಾಷೆ: ಅದರಲ್ಲಿರುವ ವ್ಯಾಕರಣದ ನಿಯಮಗಳು ಸಾಮಾನ್ಯವಾಗಿ ಎಲ್ಲರಿಗೂ ದಕ್ಕುವಹಾಗಿಲ್ಲ ಎಂಬುದು ಇನ್ನೊಂದು

ಆಕ್ಷೇಪವು. ಆದರೆ ಪರಕೀಯಭಾಷೆಯಾದ ಇಂಗ್ಲಿಷಿಗಿಂತ ಸಂಸ್ಕೃತವು ಕಷ್ಟವೆ? ಎಂಬುದನ್ನು ನಿಷ್ಪಕ್ಷಪಾತವಾದ ಕಣ್ಣಿನಿಂದ ನೋಡಬೇಕು. ಭರತಖಂಡದ ಉತ್ತರ ದಲ್ಲಿರುವ ದೇಶಭಾಷೆಗಳೆಲ್ಲ ಬಹುಮಟ್ಟಿಗೆ ಸಂಸ್ಕೃತದಿಂದಲೇ ನೇರಾಗಿ ಹುಟ್ಟಿರುತ್ತವೆ. ಅವುಗಳ ಲಿಪಿಯ ಅಕ್ಷರಗಳು, ಮಾತುಗಳು, ವಾಕ್ಯಗಳ ಅನ್ವಯಕ್ರಮ-ಇವುಗಳೆಲ್ಲವೂ ಸಂಸ್ಕೃತಕ್ಕೆ ಎಷ್ಟು ಹತ್ತಿರವಿರುವವೆಂದರೆ ಆ ಭಾಷೆಗಳ ವಾಕ್ಯಗಳನ್ನು ಒಂದು ಸಾಲಿನಲ್ಲಿ ಬರೆದು ಅದರ ಕೆಳಗೇ ಮಾತಿಗೆ ಮಾತಿನಂತೆ ಸಂಸ್ಕೃತಶಬ್ದವನ್ನು ಜೋಡಿಸಿದರೂ ಸಂಸ್ಕೃತಭಾಷೆಯ ಶೈಲಿಯು ಸ್ವಲ್ಪವೂ ಕೆಡದೆ ಇರುತ್ತದೆ. ದಕ್ಷಿಣದೇಶದ ಭಾಷೆಗಳು ಸ್ವಲ್ಪ ಭಿನ್ನಕ್ರಮದವಾಗಿದ್ದರೂ ಸಂಸ್ಕೃತಶಬ್ದಗಳನ್ನೂ ವಾಕ್ಯಗಳನ್ನೂ ಪುರಾಣ ಶ್ರವಣದಂತೆ ಕೇಳಿದರೂ ಸಾಕು, ಸಾಮಾನ್ಯವಾಗಿ ಅರ್ಥವನ್ನು ಮಾಡಿಕೊಳ್ಳಬಲ್ಲವರು ಬಲುಮಂದಿ ಇರುತ್ತಾರೆ, ಇಂಗ್ಲಿಷಿನ ಹುಚ್ಚು ಹತ್ತಿದವರು ಈಚೆಗೆ ಸಂಸ್ಕೃತವು ಕಷ್ಟವಾದ ಭಾಷೆ ಎಂಬ ವಾರ್ತೆಯನ್ನು ಹರಡಿರುವದು ನಿಜ: ಆದರೆ ಆ ಭಾಷೆಯನ್ನು ಸ್ವಲ್ಪ ಪ್ರಯತ್ನಪೂರ್ವಕವಾಗಿ ಪ್ರಚಾರಕ್ಕೆ ತಂದರೆ ಸಾಕು, ಕೂಡಲೆ ಬಹಳಮಂದಿ ಅದನ್ನು ಮಾತನಾಡುವದಕ್ಕೂ ಓದುವದಕ್ಕೂ ಬರೆಯುವದಕ್ಕೂ ಬೇಕಾದಷ್ಟು ತಿಳಿವಳಿಕೆಯನ್ನು ಇಂಗ್ಲಿಷು ಕಲಿಯುವದಕ್ಕೆ ಬೇಕಾಗುವದರ ಅರ್ಧಕಾಲದಲ್ಲಿಯೆ ಸಂಪಾದಿಸಿಕೊಂಡು ಬಿಡಬಹುದು.

ಎಷ್ಟಾದರೂ ಸಂಸ್ಕೃತವು ಪಂಡಿತರ ಭಾಷೆ, ಆದ್ದರಿಂದಲೇ ಮುಸಲ್ಮಾನರು ಬಂದ ಬಳಿಕ ಅದು ರಾಜಭಾಷೆಯಾಗಿ ಉಳಿಯಲಿಲ್ಲ; ಉರ್ದು, ಹಿಂದಿ, ಮರಾಠಿ, ಬಂಗಾಳಿ ಮುಂತಾದ ಪ್ರಾಂತಭಾಷೆಗಳು ತಲೆಯೆತ್ತಿಕೊಂಡವು. ಆಮೇಲೆ ಸಂಸ್ಕೃತವು ಪಂಡಿತರ ಭಾಷೆಯಾಗಿ ಉಳಿದುಕೊಂಡಿತು. ಗ್ರಂಥಗಳೂ ಆ ಭಾಷೆಯಲ್ಲಿ ರಚಿತವಾಗುತ್ತಿದ್ದವು ನಿಜ; ಆದರೆ ಆಬಳಿಕ ಅದು ಜನಜೀವನಕ್ಕೆ ಸಂಬಂಧಪಡದೆ ಪಾರಿಭಾಷಿಕಭಾಷೆಯಾಗಿ, ಕರ್ಮದ ಭಾಷೆಯಾಗಿ, ತತ್ತ್ವವಿಚಾರದ ಭಾಷೆಯಾಗಿ ಉಳಿದುಕೊಂಡಿತು. ಮಿಕ್ಕವರಿಗೆ ಅದು ಸ್ವಲ್ಪ ಹೆಚ್ಚುಕಡಿಮೆ ಮೃತಭಾಷೆಯಾಯಿತು- ಎಂಬುದೊಂದು ಪ್ರತಿಪಕ್ಷದವರ ವಾದವು. ಆದರೆ ಈ ವಾದದಲ್ಲಿ ಪೂರ್ಣವಾಗಿ ತಥ್ಯಾಂಶವಿರುವದಿಲ್ಲ. ಮುಸಲ್ಮಾನರು ಬರುವದಕ್ಕಿಂತ ಮುಂಚೆಯೇ ಸಂಸ್ಕೃತವು ಬೇರೆಬೇರೆಯ ದೇಶಗಳಲ್ಲಿ ರಾಜಕೀಯ ಕಾರಣಗಳಿಂದ ಶಬ್ದರೂಪಗಳಲ್ಲಿ ಮಾರ್ಪಾಡುಹೊಂದಿ ಪ್ರಾಕೃತಭಾಷೆಗಳಾಗಿ ಒಡೆದುಕೊಂಡಿತ್ತು. ಈಗ ಇಂಗ್ಲಿಷುಭಾಷೆಯು ಇಷ್ಟು ಉನ್ನತಿಯ ಸ್ಥಾನದಲ್ಲಿದ್ದರೂ ಬ್ರಿಟಿಷ್ ದ್ವೀಪಗಳ ಬೇರೆಬೇರೆಯ ಭಾಗಗಳಲ್ಲಿ ಬೇರೆಬೇರೆಯ ರೂಪಗಳನ್ನು ತಳೆದಿರುತ್ತದೆ. ಇಂಡಿಯ, ಅಮೆರಿಕ, ಆಫ್ರಿಕ- ಮುಂತಾದ ದೇಶಗಳವರು ಆ

ಭಾಷೆಯನ್ನು ರೂಪಾಂತರಗೊಳಿಸುತ್ತಲೇ ಇರುತ್ತಾರೆ. ಇದರಂತೆ ಸಂಸ್ಕೃತವು ರೂಪಾಂತರಗಳನ್ನು ಹೊಂದಿ ಪ್ರಾಕೃತಭಾಷೆಗಳಾಗಿ ಮಾರ್ಪಟ್ಟಿತು; ಮುಂದಕ್ಕೆ ಮರಾಠಿ, ಹಿಂದಿ-ಮುಂತಾದ ಉಪಭಾಷೆಗಳು ಆ ಮೂಲದಿಂದಲೇ ಒಡೆದು ಕೊಂಡವು. ಆಡುವ ಇಂಗ್ಲಿಷುಭಾಷೆಯು ಎಷ್ಟೇ ರೂಪಭೇಧಗಳನ್ನು ಹೊಂದಿದರೂ ಬರೆಯುವ ಭಾಷೆಯು ಬಲುಮಟ್ಟಿಗೆ ತನ್ನತನವನ್ನು ಉಳಿಸಿಕೊಳ್ಳುವದಕ್ಕೆ ಪ್ರಯತ್ನಪಡುತ್ತಿರುವಂತೆಯೇ ಸಂಸ್ಕೃತವೂ ಪ್ರಯತ್ನಪಟ್ಟಿತು. ಈ ಭಾಷೆಯು ವೇದವೇ ಮುಂತಾದ ಧರ್ಮಗ್ರಂಥಗಳ ಭಾಷೆಯೇ ಆಗಿರುವದರಿಂದ ಗ್ರಾಂಥಿಕ ಭಾಷೆಯಲ್ಲಿ ಶೀಘ್ರವಾಗಿ ಬದಲಾವಣೆಯಾಗದಂತೆ ಪಾಣಿನಿಯೆ ಮುಂತಾದ ವೈಯಾಕರಣರು ಪ್ರಬಲಪ್ರಯತ್ನವನ್ನು ಮಾಡಿ ಜಯಶೀಲರೂ ಆದರು. ಇಷ್ಟುಮಾತ್ರದಿಂದ ಸಂಸ್ಕೃತವು ಬಹುಜನರ ಭಾಷೆಯಾಗಲಾರದೆಂದು ವಾದಿಸುವದಕ್ಕೆ ಯಾವ ಕಾರಣವೂ ಇಲ್ಲ. ಈಗ ಹಿಂದಿನ ರಾಜಕೀಯ ಪರಿಸ್ಥಿತಿಗಳು ಸಂಪೂರ್ಣವಾಗಿ ಹೋಗಿಬಿಟ್ಟಿರುತ್ತವೆ. ಭರತಖಂಡವು ಸ್ವಲ್ಪ ಹೆಚ್ಚುಕಡಿಮೆ ಎಲ್ಲವೂ ಒಂದುಗೂಡಿ ಒಂದು ಮಹಾರಾಷ್ಟ್ರವಾಗಿದೆ. ಆದ್ದರಿಂದ ಈಗ ನಾವು ಪ್ರಯತ್ನಪಟ್ಟರೆ ಸಂಸ್ಕೃತವು ದೇಶದಲ್ಲಿ ಬಹುಭಾಗದವರ ವ್ಯಾವಹಾರಿಕಭಾಷೆಯಾಗುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ.

ಈ ದೇಶಕ್ಕೆ ಇಂಗ್ಲಿಷಿನವರು ಬಂದಾಗ ಅವರು ತಮ್ಮ ಭಾಷೆಯನ್ನೇ ಜನರಿಗೆ ತಕ್ಕಮಟ್ಟಿಗೆ ಕಲಿಸಿ ತಮ್ಮ ಆಕಪತ್ಯಕ್ಕೆ ಅನುಕೂಲ್ಯಗಳನ್ನು ಕಲ್ಪಿಸಿಕೊಳ್ಳುವದಕ್ಕೆ ಪ್ರಯತ್ನಪಟ್ಟಿದ್ದು ಸ್ವಾಭಾವಿಕವಾಗಿದೆ. ಈ ದೇಶದ ಜನರೂ ತಮ್ಮ ಜೀವನೋಪಾಯಕ್ಕಾಗಿಯೇ ರಾಜಕೀಯವಿಚಾರವೇ ಮುಂತಾದ ಕಾರಣಗಳಿಂದಲೂ ತಂಡತಂಡವಾಗಿ ಇಂಗ್ಲಿಷು ಕಲಿಯುವದಕ್ಕೆ ಹವಣಿಸಿದ್ದೂ ಸ್ವಾಭಾವಿಕವೇ ಆಗಿದೆ. ಇತಿಹಾಸದ ದೃಷ್ಟಿಯಿಂದ ನೋಡಿದರೆ ನಮ್ಮ ದೇಶದಲ್ಲಿ ಇಂಗ್ಲಿಷುಭಾಷೆಯ ಆಗಮನದಿಂದ ನಮಗೆ ಅಮೂಲ್ಯವಾದ ಪ್ರಯೋಜನವೂ ದೊರೆತಿವೆಯೆಂಬುದನ್ನು ಯಾರೂ ಇಲ್ಲವೆನ್ನುವಂತಿಲ್ಲ. ಆದರೆ ಸಂಸ್ಕೃತದ ನೈಜವಾದ ಹೆಚ್ಚುಗಾರಿಕೆಯನ್ನು ಮನಗಂಡು ಪಾಶ್ಚಾತ್ಯದೇಶದವರು ಕೂಡ ತಮ್ಮ ಸಕಲವಿದ್ಯಾನಿಲಯಗಳಲ್ಲಿ ಆ ಭಾಷೆಯನ್ನು ಅಭ್ಯಾಸಮಾಡುತ್ತಿರುವ ಈ ಕಾಲದಲ್ಲಿ ಆ ಭಾಷೆಯ ತವರುಮನೆ ಯಾದ ಭರತಖಂಡದವರು ಯಾವದಾದರೂ ನೆಪವನ್ನು ಹೇಳಿ ಆ ಭಾಷೆಯನ್ನು ಮೂಲೆಗೊತ್ತುವದು ಎಂದಿಗೂ ಸರಿಯಾಗಲಾರದು. ಆದ್ದರಿಂದ ಈ ದಿವ್ಯವಾಣಿ ಯನ್ನು ಜನಾನುರಾಗಕ್ಕೆ ಪಾತ್ರವಾಗಿ ಮಾಡುವ ಉಪಾಯಗಳನ್ನು ಇನ್ನೊಂದು ಲೇಖನದಲ್ಲಿ ಪ್ರಸ್ತಾಪಿಸುವೆನು.

ಸದ್ಯಕ್ಕೆ ಇಷ್ಟನ್ನು ನಾವೆಲ್ಲರೂ ನೆನೆಪಿಡೋಣ. ಸಂಸ್ಕೃತವು ನಮ್ಮ ದೇಶದ ಭಾಷೆ. ಅದು ಪುರಾತನ ಋಷಿಗಳು ಆಡುತ್ತಿದ್ದ, ವೇದಮಂತ್ರಗಳನ್ನು ಹುದುಗಿಸಿರುವ, ಧಾರ್ಮಿಕಭಾಷೆ. ಧರ್ಮಸೂತ್ರಕಾರರೂ, ಸ್ಮೃತಿಕಾರರೂ, ತತ್ತ್ವದರ್ಶನ ಗ್ರಂಥಕರ್ತರೂ- ಬಳಸಿರುವ ಕರ್ಮಜ್ಞಾನಗಳ ಭಂಡಾರದ ಭಾಷೆ. ಕವಿಗಳ ಕಾವ್ಯಗಳೂ ಲೌಕಿಕವಿಜ್ಞಾನ ಶಾಸ್ತ್ರಜ್ಞರ ವಿವಿಧಕೃತಿಗಳೂ ಅಡಗಿರುವ ಭಾಷೆ. ಇತಿಹಾಸದ ಕಾಲದಲ್ಲಿ ನಮ್ಮ ದೇಶದವರೆಲ್ಲರೂ ಈಗಲೂ ಪರದೇಶದವರೂ ವಿಧವಿಧವಾದ ಪ್ರಯೋಜನಗಳನ್ನು ತೋಡಿಕೊಳ್ಳುತ್ತಿರುವ ಅಮೃತದ ಕಡಲದು. ಅದರ ಬಳಕೆಗಾಗಿ ಅದನ್ನು ಹೊಗಳಿ ಯಾರೂ ವಾದಿಸಬೇಕಾಗಿರುವದಿಲ್ಲ. ಎಲ್ಲರೂ ತಮ್ಮ ತಮ್ಮ ಹೆಗ್ಗಳಿಕೆಗಾಗಿ ಹೆಮ್ಮೆಯಿಂದ ಸ್ವಾಗತಿಸಬೇಕಾದ ಸುಸಂಸ್ಕೃತ ಭಾಷೆಯದು.

* * * * *

## 44. ಸಂಸ್ಕೃತಭಾಷೆಯ ಸೇವೆ

ಈ ಕಾಲದಲ್ಲಿ ದೇಶಭಕ್ತಿ ಎಂಬ ಮಾತು ಎಲ್ಲರ ಬಾಯಿಯಲ್ಲಿಯೂ ಇದೆ; ಆದರೆ ಭಾಷಾಭಕ್ತಿಯೆಂಬ ಮಾತು ಕಿವಿಗೆ ಬೀಳುವದು ಬಹಳ ಅಪೂರ್ವ. ದೇಶಭಾಷೆಗಳಿಗೆ ಸಾಹಿತ್ಯಪರಿಷತ್ತುಗಳನ್ನು ಏರ್ಪಡಿಸಿಕೊಂಡು ದುಡಿಯುತ್ತಿರುವವರು ನನ್ನ ಕಣ್ಣಿಗೆ ಗೋಚರವಿಲ್ಲವೆಂದೇನೂ ನನ್ನ ಅಭಿಪ್ರಾಯುವಲ್ಲ. ಆದರೆ ಕಾಲಕ್ಕನುಗುಣವಾಗಿ ದೇಶಭಾಷಾಭಕ್ತಿಯನ್ನು ಕೂಡ ಜನರು ರಾಜಕಾರಣರಂಗಕ್ಕೆ ಇಳಿಸಿಬಿಟ್ಟಿರುತ್ತಾರೆ. ಭಾಷಾವಾರು ಪ್ರಾಂತಗಳನ್ನು ಏರ್ಪಡಿಸುವ ವಿಚಾರದಲ್ಲಿ ನಮ್ಮ ನಮ್ಮ ಅಭಿಪ್ರಾಯವನ್ನು ಕೊಟ್ಟರೆ, ನಮ್ಮ ನಮ್ಮ ದೇಶಭಾಷೆಗೆ ನಮ್ಮ ಸೇವೆಯನ್ನು ಸಲ್ಲಿಸಿದಂತೆ ಆಯಿತೆಂದು ನಾವು ಭಾವಿಸಿರುವಂತಿದೆ. ಆ ದೃಷ್ಟಿಯಿಂದ ನೋಡಿದರೂ ಸಂಸ್ಕೃತಕ್ಕೆ ಆ ಸೇವೆಯ ಕಿರಿಯ ಕಾಣಿಕೆಯನ್ನು ಒಪ್ಪಿಸುವವರೂ ವಿರಳರಾಗಿರುತ್ತಾರೆನ್ನ ಬಹುದು. ಏಕೆಂದರೆ ಸಂಸ್ಕೃತವು ಎಲ್ಲಾ ಭಾಷೆಗಳಿಗೂ ತನ್ನ ನೆರವನ್ನು ಕೊಡುತ್ತಿದ್ದರೂ ಅದರ ಉಪಕಾರವನ್ನು ಸ್ಮರಿಸುವದಕ್ಕೆ ಯಾರಿಗೂ ಬಿಡುವು ಇರುವುದಿಲ್ಲ.

ನಿಜವಾಗಿ ನೋಡಿದರೆ ಸಂಸ್ಕೃತವೆನ್ನುವದು ಇಂಥ ಅನಾದರಕ್ಕೆ ಹೇಗೂ ತಕ್ಕದ್ದಲ್ಲ. ರಾಜಕೀಯದೃಷ್ಟಿಯಿಂದಲೇ ಎಲ್ಲರನ್ನೂ ಕಾಣುತ್ತಿರುವವವರ ಸಲುವಾಗಿ ಇಂಡಿಯದ ಸಚಿವಶಿರೋಮಣಿಗಳಾದ ಮಾನ್ಯ ಪಂಡಿತ ಜವಹರಲಾಲ

ನೆಹರೂರವರು ಒಂದು ವೃತ್ತಾಂತ ಪತ್ರಿಕೆಯಲ್ಲಿ ಬರೆದ ಲೇಖನದಿಂದ ಕೆಲವು ವಾಕ್ಯಗಳನ್ನು ಇಲ್ಲಿ ಉದಾಹರಿಸುವುದು ಯೋಗ್ಯವಾಗಿರುತ್ತದೆ. ಆ ಮಹೋದಯರು ಅಪ್ಪಣೆಕೊಡಿಸಿರುವದೇನೆಂದರೆ, ''ಭರತಖಂಡದಲ್ಲಿರುವ ಮಹಾಭಾಗ್ಯನಿಕ ಯಾವುದು, ಈ ದೇಶದವರ ಅತ್ಯಂತ ಉತ್ತಮವಾದ ಆಸ್ತಿ ಯಾವದು?- ಎಂದು ಯಾರಾದರೂ ಕೇಳಿದರೆ, ನಾನು ಸ್ವಲ್ಪವೂ ಹಿಂದುಮುಂದು ನೋಡದೆ ಕೊಡುವ ಉತ್ತರವೇನೆಂದರೆ ಸಂಸ್ಕೃತಭಾಷೆಯೇ, ಸಂಸ್ಕೃತವಾಙ್ಮಯವೇ, ಅದರಲ್ಲಿರುವ ವಿಷಯಗಳೇ ಆ ನಿಕಯು, ಆ ಆಸ್ತಿಯು. ಇದೊಂದು ಮಹಾ ಅನರ್ಘವಾದ ಆಸ್ತಿಯು. ಇದು ಇದ್ದುಕೊಂಡು ನಮ್ಮ ಜನರ ಜೀವನದ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿರುವವರೆಗೆ ಇಂಡಿಯದ ಸರ್ವಾಧಾರವಾದ ಅಸಾಧಾರಣಲಕ್ಷಣವು ಇದ್ದುಕೊಂಡಿರುವದು. ಇದೊಂದು ಪುರಾತನನಿಕ ಮಾತ್ರವಲ್ಲ, ಇದು ಇಂಥ ಪ್ರಾಚೀನಭಾಷೆಯಾದರೂ ಎಲ್ಲರೂ ಅಚ್ಚರಿಪಡುವಷ್ಟು ಮಟ್ಟಿಗೆ ಜೀವಂತವಾದ ಸಂಪ್ರದಾಯವಾಗಿದೆ. ಸಂಸ್ಕೃತಭಾಷೆಯನ್ನು ಪರಿಶೀಲನೆಮಾಡುವದಕ್ಕೆ ಪ್ರೋತ್ಸಾಹ ಕೊಡಬೇಕೆನ್ನುವದು ನನ್ನ ಇಷ್ಟ; ಈ ಭಾಷೆಯಲ್ಲಿ ಹೂತುಕೊಂಡಿರುವ ಗತವಾಙ್ಮಯ ವನ್ನು ಶೋಧಿಸಿ ಬೆಳಕಿಗೆ ಹಿಡಿಯುವ ಕೆಲಸವನ್ನು ಕೈಕೊಳ್ಳುವಂತೆ ನಮ್ಮ ವಿದ್ವಾಂಸರನ್ನು ಪ್ರೇರಿಸುವದೂ ನನ್ನ ಇಷ್ಟ. ಈ ಭಾಷೆಯನ್ನು ಸ್ವಲ್ಪ ಹೆಚ್ಚುಕಡಿಮೆಯಾಗಿ ಎಲ್ಲರೂ ಮರೆತು ಬಿಟ್ಟಿರುತ್ತಾರೆ.''

ಸರಕಾರದವರ ಮನಸ್ಸಿಗೆ ಬಂದರೆ ಸಂಸ್ಕೃತವು ಈ ಕೂಡಲೆ ಬಹುಕಾಲದ ನಿದ್ರೆಯಿಂದ ಎಚ್ಚತ್ತ ಅಪ್ಸರಸ್ತ್ರೀಯಂತೆ ತಟ್ಟನೆ ಎಚ್ಚತ್ತು ನಮ್ಮ ಜೀವನದ ವ್ಯವಹಾರದಲ್ಲೆಲ್ಲ ತನ್ನ ಲಾವಣ್ಯಯುತವಾದ ಮುಖವನ್ನು ತೋರಿಸಿಕೊಂಡು ನಮ್ಮೆಲ್ಲರನ್ನೂ ಸಂತಸಗೊಳಿಸಬಹುದು. ನಮ್ಮ ಬಾಲಕರ ವಿದ್ಯಾಭ್ಯಾಸಕ್ರಮದಲ್ಲಿ ಉತ್ತಮವಾದ ಮಾರ್ಪಾಡುಗಳನ್ನು ಮಾಡಿಬಿಡಬಹುದು. ನಮ್ಮ ಕಾರ್ಯಕ್ರಮಕ್ಕೆ ಮಾರ್ಗದರ್ಶನವಾಗಬಹುದು. ಆದರೆ ಸರಕಾರದವರು ಈ ಕೆಲಸಕ್ಕೆ ಪೋಷಕರಾಗಿ ನಿಲ್ಲುವವರೆಗೂ ನಾವುಗಳು ಕೈಕಟ್ಟಿಕೊಂಡು ನಿಲ್ಲುವುದು ಎಂದಿಗೂ ಸರಿಯಾಗ ಲಾರದು. ಗೀರ್ವಾಣಭಾಷಾದೇವಿಯ ಭಕ್ತರು ತಮ್ಮ ಸೇವೆಯನ್ನು ಸಲ್ಲಿಸುವದಕ್ಕೆ ಅಲ್ಲಿಯವರೆಗೂ ತಡಮಾಡಬೇಕಾದ ಕಾರಣವೇನೂ ಇರುವದಿಲ್ಲ.

ಸಂಸ್ಕೃತವನ್ನು ಜನಾನುರಾಗಕ್ಕೆ ಪಾತ್ರವಾಗಿ ಮಾಡುವದು ಹೇಗೆ? ಮೊಟ್ಟಮೊದಲು ಸಂಸ್ಕೃತಭಾಷೆಯನ್ನು ಕಲಿತಿರುವ ಪಂಡಿತಮಹಾಶಯರುಗಳು

ಒಗ್ಗಟ್ಟಿನಿಂದ ಒಂದು ಕಡೆ ಸೇರುವ ಏರ್ಪಾಡನ್ನು ಮಾಡಿಕೊಳ್ಳಬೇಕು. ಇದನ್ನು ಹೇಗೆ ಮಾಡಬೇಕೆಂಬುದಕ್ಕೆ 39ನೆಯ ಲೇಖನದಲ್ಲಿ ನಾನು ಪ್ರಕಟಿಸಿರುವ "ನಲಂದದ ವಿಶ್ವವಿದ್ಯಾಲಯ" ಎಂಬ ಲೇಖನದಿಂದ ಕೆಲವು ಸೂಚನೆಗಳು ದೊರೆಯಬಹುದು. ಸಂಸ್ಕೃತಭಾಷೆಯು **ಸದ್ಯಕ್ಕೆ ಅಧ್ಯಾತ್ಮವಿದ್ಯೆಯ ಆಗರ**ವೆಂದು ಎಲ್ಲರೂ ಒಪ್ಪಿರುತ್ತಾರೆ. ಆದ್ದರಿಂದ ಧಾರ್ಮಿಕ ವಾಙ್ಮಯವನ್ನು ಪ್ರಚಾರಮಾಡುವ ಉದ್ದೇಶದಿಂದ ಅಥವಾ ಅಧ್ಯಾತ್ಮವಿಚಾರಗಳನ್ನು ದೇಶದಲ್ಲಿ ಹರಡುವ ಉದ್ದೇಶದಿಂದ ಸ್ಥಾಪಿತವಾಗಿರುವ ಸಾರ್ವಜನಿಕ ಸಂಸ್ಥೆಗಳನ್ನು ಈ ಕೆಲಸಕ್ಕೆ ಉಪಯೋಗಿಸಿಕೊಳ್ಳಬೇಕು. ನಲಂದದಲ್ಲಿದ್ದಂತೆ ಎಲ್ಲಾ ಧರ್ಮಗಳ ವಿಚಾರಗಳನ್ನೂ ಚರ್ಚಿಸುವ, ಎಲ್ಲಾ ಧಾರ್ಮಿಕಗ್ರಂಥಗಳನ್ನೂ ಪರಿಶೀಲಿಸುವ, ಎಲ್ಲಾ ಮತಗಳ ಬೋಧಕರನ್ನೂ ಸಜ್ಜುಗೊಳಿಸುವ, ಮಹಾಸಂಸ್ಥೆಯೊಂದನ್ನು ಒಂದು ಕಡೆಯಲ್ಲಿ ನಿರ್ಮಿಸುವ ಯತ್ನವನ್ನು ಮಾಡಬೇಕು. ಧಾರ್ಮಿಕ ವಿಚಾರಗಳು ಯಾವಾಗಲೂ ಪರಸ್ಪರದ್ವೇಷಕ್ಕೆ ಎಡೆಗೊಡುತ್ತವೆ ಎಂಬ ತಪ್ಪು ಅಭಿಪ್ರಾಯವನ್ನು ಮೊದಲು ನಮ್ಮ ಹೃದಯದಿಂದ ಕಿತ್ತೊಗೆಯಬೇಕು. ಉದಾರಭಾವದಿಂದ ಅಭಿಪ್ರಾಯಗಳನ್ನು ವಿನಿಮಯ ಮಾಡಿಕೊಳ್ಳುವುದಕ್ಕೆ ಸಿದ್ಧರಾಗಿರುವ ಪಂಡಿತಮಹಾಶಯರುಗಳಿಗೆ ಆಸರೆಯನ್ನು ಕೊಡುವದಕ್ಕೆ ತಕ್ಕ ನಲಂದದ ಆದರ್ಶವನ್ನು ಲಕ್ಷ್ಯದಲ್ಲಿಟ್ಟುಕೊಂಡಿರುವ ಸಂಸ್ಥೆಯೊಂದನ್ನು ಮೊಟ್ಟಮೊದಲು ಏರ್ಪಡಿಸಿಕೊಳ್ಳಬೇಕು. ಆ ಸಂಸ್ಥೆಯು ಪ್ರಾಚೀನ ಧಾರ್ಮಿಕಗ್ರಂಥಗಳನ್ನು ಬಯಲಿಗೆ ತರುವದು, ಈಚಿನ ಗ್ರಂಥಗಳನ್ನು ಪರಿವರ್ತನೆಮಾಡುವದು, ಸಾಮಾನ್ಯಜನರಿಗೆ ತಿಳಿಯುವ ಭಾಷೆಯಲ್ಲಿ ಸಂಸ್ಕೃತಗ್ರಂಥಗಳನ್ನೂ ದೇಶಭಾಷೆಯ ಪರಿವರ್ತನೆಗಳನ್ನೂ ಪ್ರಕಟಿಸುವದು, ವಿದ್ವಾಂಸರುಗಳ ಸಮ್ಮೇಳನಗಳನ್ನು ಏರ್ಪಡಿಸುವದು, ಭಾಷಣಗಳನ್ನು ಮಾಡಿಸಿ ಅಥವಾ ಗ್ರಂಥಗಳನ್ನು ಬರೆಯಿಸಿ ಸಂಭಾವನೆಯನ್ನು ಕೊಡುವದು- ಇಂಥ ಚಟುವಟಿಕೆಗಳಲ್ಲಿ ಮಗ್ನರಾಗಬೇಕು. ಇದಕ್ಕೆಲ್ಲ ಸಂಸ್ಕೃತದಲ್ಲಿ ಭಕ್ತಿಯುಳ್ಳ ಶ್ರೀಮಂತರು ಕೊಡುಗೈತನದ ಪ್ರೋತ್ಸಾಹವನ್ನು ತೋರಿಸಬೇಕು.

ಸಂಸ್ಕೃತಭಾಷೆಯ ಸೇವೆಯು ಸಫಲವಾಗಬೇಕಾದರೆ ಮೇಲೆ ಹೇಳಿದಂಥ ಕೇಂದ್ರಸಂಸ್ಥೆಯಿಂದ ಪ್ರತಿಯೊಂದು ಪಟ್ಟಣಕ್ಕೂ ಸಾಧ್ಯವಾದರೆ ಪ್ರತಿಯೊಂದು ಹಳ್ಳಿಗೂ ಸಂಸ್ಕೃತದ ಪ್ರಭಾವವನ್ನು ಹರಡುವ ಶಾಖಾಸಂಸ್ಥೆಗಳನ್ನು ಸ್ಥಾಪಿಸಬಲ್ಲ ಸ್ವಯಂಸೇವಕರು ಏರ್ಪಾಡಾಗಬೇಕು. ಸಂಸ್ಕೃತಭಾಷೆಯಲ್ಲಿ ಪ್ರಾಚೀನ ವಿಚಾರಗಳು ಮಾತ್ರವಲ್ಲದೆ, ಈಗಿನ ಕಾಲದವರು ತಿಳಿಯತಕ್ಕ ವಿಷಯಗಳನ್ನೆಲ್ಲ ಒಳಗೊಂಡ ಹಳೆಯ ಪುಸ್ತಕಗಳೂ

ಹೊಸ ಗ್ರಂಥಗಳು ಪ್ರಸಿದ್ಧವಾಗಬೇಕು. ಸಂಸ್ಕೃತವು ಹಿಂದಿನ ಕಾಲದಲ್ಲಿ ದೇಶಭಾಷೆಗಳಿಗೆಲ್ಲ ಸಹಾಯವನ್ನು ಕೊಡುವ ಮೂಲಭಂಡಾರವಿದ್ದಂತೆ. ಈಗಲೂ ವಿಜ್ಞಾನಶಾಸ್ತ್ರ, ಇತಿಹಾಸ, ರಾಜಕೀಯ ವಿಚಾರಗಳು, ವೈದ್ಯ, ಜ್ಯೋತಿಷ-ಮುಂತಾದ ಉಪಯುಕ್ತ ವಿಷಯಗಳು ಸಂಗ್ರಹವಾಗಿಯೂ ವಿಸ್ತಾರವಾಗಿಯೂ ಬೇರೆಬೇರೆ ಪರಿಮಾಣದಲ್ಲಿ ಬರೆದ ಗ್ರಂಥಗಳಲ್ಲಿ ಅಡಕವಾಗಿರಬೇಕು. ಸಂಸ್ಕೃತವು ಜನಾಂಗದ ಭಾಷೆ ಎಂಬ ನಂಬಿಕೆಯು ಜನರಿಗೆ ಬಂದಂತೆಲ್ಲ, ಅದರ ಪೂಜ್ಯತೆಯು ಹೆಚ್ಚುವದು. ಇಂಗ್ಲಿಷಿನಂಥ ಪರದೇಶದ ಭಾಷೆಯನ್ನು ಕಲಿಯಬೇಕಾದ ಅವಶ್ಯಕತೆಯೂ ಜನಸಾಮಾನ್ಯಕ್ಕೆ ಮರೆಯಾಗುವದು.

ಸಂಸ್ಕೃತವನ್ನು ಪ್ರೌಢವಿಚಾರಗಳಿಗೆ ಅವಶ್ಯಕವಾಗಿರುವ ಭಾಷೆಯಾಗಿ ಮಾಡಿದರೂ ಮಾಡಬಹುದು, ಆದರೆ ಅದನ್ನು ಜನಸಾಮಾನ್ಯಕ್ಕೆ ಪ್ರಯೋಜನಕರವಾಗಿ ಮಾಡುವದು ಹೇಗೆ? ದೇಶಭಾಷೆಗಳನ್ನು ಬೆಳೆಯಿಸುವದಕ್ಕೆ ಜನರು ಹವಣಿಸುತ್ತಿರುವ ಈ ಕಾಲದಲ್ಲಿ ಸಂಸ್ಕೃತಕ್ಕೆ ಯಾವ ಸ್ಥಾನವನ್ನು ಕೊಡಬಹುದು? ರಾಷ್ಟ್ರಭಾಷೆಯಾದ ಹಿಂದಿಯು ಎಲ್ಲೆಲ್ಲಿಯೂ ನುಗ್ಗುತ್ತಿರುವ ಈ ಸಮಯದಲ್ಲಿ ಸಂಸ್ಕೃತಕ್ಕೆ ಎಲ್ಲಿ ಸ್ಥಾನವನ್ನು ಕಲ್ಪಿಸಬೇಕು? ಉರ್ದು ಹಿಂದಿಗಳು ಸ್ಥಾನಮಾನಕ್ಕೆ ಹೊಡೆದಾಡುತ್ತಿರುವಲ್ಲಿ ಸಂಸ್ಕೃತವನ್ನು ಕೇಳುವವರು ಯಾರು? ಸುಲಭವಾಗಿ ಕಲಿಯಬಹುದಾದ ವ್ಯವಹಾರಕ್ಕೆ ಇತರ ಭಾಷೆಗಳನ್ನು ಬಿಟ್ಟು, ಕಲಿಯುವುದಕ್ಕೆ ಕಷ್ಟವಾದ ಕಲಿತರೂ ವ್ಯವಹಾರದಲ್ಲಿ ಯಾವ ಉಪಯೋಗಕ್ಕೂ ಬಾರದ ಸಂಸ್ಕೃತವನ್ನು ಯಾರು ಏತಕ್ಕೆ ಕಲಿಯಬೇಕು?- ಎಂದು ಕೆಲವರು ಶಂಕಿಸುವರು. ಈ ಪ್ರಶ್ನೆಗಳಿಗೆ ಆಗಲೆ ಉತ್ತರವನ್ನು ಹೇಳಿದಂತೆಯೇ ಆಗಿದೆಯಾದರೂ ನನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುವದಕ್ಕಾಗಿ ಇನ್ನೂ ಒಂದೆರಡು ಲೇಖನಗಳನ್ನು ಈ ವಿಷಯದಲ್ಲಿ ಬರೆಯುವದು ಅವಶ್ಯವಾಗಿದೆ. ಆ ಕೆಲಸಕ್ಕೆ ಮುಂದೆ ಕೈಹಾಕುವೆನು.[1]

* * * * *

1. ಈ ಲೇಖನಕ್ಕೆ 'ಬ್ರಹ್ಮವಿದ್ಯಾ' ಎಂಬ ಇಂಗ್ಲಿಷು ಪತ್ರಿಕೆಯಲ್ಲಿ ಈ ಫೆಬ್ರವರಿ ಸಂಚಿಕೆಯಲ್ಲಿ ಶ್ರೀ ಸಿ. ಕುನ್ಹನ್‌ರಾಜ ಎಂಬುವರು ಬರೆದಿರುವ ಅಭಿಪ್ರಾಯಗಳು ಹಲವು ಆಧಾರವಾಗಿರುತ್ತವೆ.

# 45. ಸಂಸ್ಕೃತದ ಪ್ರಚಾರ

ಸಂಸ್ಕೃತವನ್ನು ಜನಾನುರಾಗಕ್ಕೆ ಪಾತ್ರವಾಗಿ ಮಾಡುವದು ಹೇಗೆಂಬ ಬಗ್ಗೆ ಕೆಲವು ಅಭಿಪ್ರಾಯಗಳನ್ನು ಹಿಂದಿನ ಲೇಖನದಲ್ಲಿ ಬರೆದಿರುತ್ತೇನೆ. ಅದನ್ನು ಸಂಸ್ಕೃತಪ್ರೇಮಿಗಳು ಅವಶ್ಯವಾಗಿ ಓದಿ ತಮ್ಮ ಅಭಿಪ್ರಾಯಗಳಿಗೆ ಕೂಡಿಸಿಕೊಳ್ಳಬೇಕು. ಸಂಸ್ಕೃತವನ್ನು ಜನಸಾಮಾನ್ಯರಲ್ಲಿ ಹರಡುವದಕ್ಕೆ ತಕ್ಕ ಉಪಾಯಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸುವೆನು.

ಸಂಸ್ಕೃತವನ್ನು ಸದ್ಯಕ್ಕೆ ಆಧ್ಯಾತ್ಮವಿದ್ಯೆಯ ಸಲುವಾಗಿಯೇ ಜನರು ಮೆಚ್ಚುತ್ತಿದಾರೆಂದು ಹೇಳಿರುತ್ತೇನೆ. ನಮ್ಮ ದೇಶದಲ್ಲಿ ಯಾವ ದೇಶಭಾಷೆಯನ್ನು ಕಲಿಯುವ ಜನರಾದರೂ ದೇವರ ಸ್ತೋತ್ರಗಳನ್ನು ಸಂಸ್ಕೃತದಲ್ಲಿಯೆ ಮಾಡುವ ಪದ್ಧತಿ ಇದೆ; ಪೂಜೆಯನ್ನು ಮಾಡುವ ಪದ್ಧತಿಯು ಸಂಸ್ಕೃತದ ಸಹಾಯದಿಂದಲೇ ಸಾಗಿರುತ್ತದೆ. ಹುಡುಗರಿಗೆ ಚಿಕ್ಕ ವಯಸ್ಸಿನಲ್ಲಿ ಕಂಠಪಾಠ ಮಾಡುವದಕ್ಕೆ ಬಹಳ ಪ್ರೀತಿ ಎಂಬುದು ನಮಗೆಲ್ಲರಿಗೂ ಗೊತ್ತು. ಈ ವಿಷಯವನ್ನು ನಾವು ಸಂಸ್ಕೃತಪ್ರಚಾರಕ್ಕೆ ಉಪಯೋಗಿಸಿಕೊಳ್ಳಬೇಕು. ಸುಲಭಭಾಷೆಯಲ್ಲಿರುವ ಉತ್ತಮವಾದ ಸ್ತೋತ್ರಗಳನ್ನು ಆರಿಸಿ ಹುಡುಗರಿಗೆ ಹೇಳಿಕೊಡಬೇಕು. ಅವರಿಗೆ ಅರ್ಥವನ್ನೇನೂ ಹೇಳಿಕೊಡಬೇಕಾಗಿಲ್ಲ. ದೇವಸ್ಥಾನಗಳಲ್ಲಿ ಅಥವಾ ಸಣ್ಣಪುಟ್ಟಸಭೆಗಳಲ್ಲಿ ಅಥವಾ ಮನೆಯಲ್ಲಿ ದೇವರ ಪ್ರಾರ್ಥನೆಯನ್ನು ಮಾಡುವಾಗ ಈ ಸ್ತೋತ್ರಗಳನ್ನು ಮಕ್ಕಳಿಂದ ಹೇಳಿಸಬೇಕು; ದೊಡ್ಡವರು ಹೇಳಿಕೊಡಬೇಕು. ಇದರಿಂದ ಒಂದು ಒಳ್ಳೆಯ ಪದ್ಧತಿಯನ್ನು ಆಚರಣೆಗೆ ತಂದುಕೊಂಡಂತೆ ಆಗುತ್ತದೆ; ಭಾಷೆಯ ಉತ್ತಮರತ್ನಗಳು ಕೆಲವನ್ನು ಹಾರವಾಗಿ ಮಾಡಿ ಮಕ್ಕಳ ಕೊರಳಿಗೆ ಹಾಕಿದಂತೆಯೂ ಆಗುತ್ತದೆ.

ಈಗ ಹಿಂದಿಯ ಪಾಠವು ಮಿಡಲ್‌ಸ್ಕೂಲ್‌ಗಳಲ್ಲಿಯೂ ನಡೆಯುತ್ತಿದೆ. ಆದ್ದರಿಂದ ದೇವನಾಗರಿಯ ಅಕ್ಷರವನ್ನು ಕಲಿಸುವವರು ಸಂಸ್ಕೃತಕ್ಕಾಗಿ ಬೇರೆಯ ಪ್ರಯತ್ನವನ್ನು ಮಾಡಬೇಕಾಗಿರುವದಿಲ್ಲ. ಕನ್ನಡ ಪಠ್ಯಪುಸ್ತಕಗಳಲ್ಲಿ ನಾವು ಎಷ್ಟೇ ಬೇಡವೆಂದರೂ ಹಲವು ಸಂಸ್ಕೃತಶಬ್ದಗಳು ಸೇರಿಕೊಂಡಿರುತ್ತವೆ. ಅವು ಸಂಸ್ಕೃತವೆಂದು ಯಾರಾದರೂ ತಿಳಿಸಿಕೊಡದಿದ್ದರೆ ಅವನ್ನು ನಮ್ಮ ಹುಡುಗರು ದೇಶಭಾಷೆಯ ಮಾತುಗಳೆಂದೇ ತಿಳಿದುಕೊಂಡಿರುತ್ತಾರೆ. ಅಂಥ ಬಳಕೆಯ ಮಾತುಗಳಲ್ಲಿ ಕೆಲವನ್ನು ಆರಿಸಿಕೊಳ್ಳಬೇಕು. ಅವುಗಳಿಂದ ಸಂಸ್ಕೃತವಾಕ್ಯಗಳನ್ನು ಮಾಡಿ ಬಾಲಕರ ಸಂಸ್ಕೃತಬಾಲಬೋಧೆಯನ್ನು ಏರ್ಪಡಿಸಬೇಕು. ಸಂಸ್ಕೃತವಿಭಕ್ತಿಗಳ ರೂಪವನ್ನು

ಹೊರತು ಹುಡುಗರು ಹೊಸದಾಗಿ ಕಲಿಯುವದು ಯಾವದೂ ಇರಬಾರದು. ಮೊದಮೊದಲು ಸಂಸ್ಕೃತವಾಕ್ಯಗಳನ್ನು ಒಂದು ಸಾಲು, ಕನ್ನಡ ವಾಕ್ಯಗಳನ್ನು ಒಂದು ಸಾಲು-ಹೀಗೆ ಬರೆದು ಅನುವಾದದ ಸಮೇತ ಕೆಲವು ಪಾಠಗಳನ್ನು ಹೇಳಿಕೊಟ್ಟು ಬಳಿಕ ಅದೇ ಶಬ್ದಗಳಿಂದ ಬೇರೆಬೇರೆಯ ವಾಕ್ಯಗಳನ್ನು ಮಾಡಿಸುತ್ತಾ ಹೋಗಬೇಕು. ರಾಮಾಯಣದ ಕಥೆ, ಮಹಾಭಾರತದ ಕಥೆ- ಇವೆರಡೂ ನಮ್ಮ ಹುಡುಗರಿಗೆ ಬಹುಮಟ್ಟಿಗೆ ಚಿಕ್ಕಂದಿನಲ್ಲಿಯೇ ತಿಳಿದಿರುತ್ತದೆ; ತಿಳಿಯತಕ್ಕದ್ದು ಅವಶ್ಯವೂ ಇದೆ. ಅವುಗಳಿಂದ ಕೂಡಿದ ವಾಕ್ಯಗಳನ್ನು ಮಾಡಿ ಮೊದಲನೆಯ ಪುಸ್ತಕಗಳನ್ನು ತಯಾರಿಸಬೇಕು. **ವ್ಯಾಕರಣದ ಕಷ್ಟಗಳನ್ನು ಮುಂದಕ್ಕೆ ತರದೆ ಭಾಷೆಯನ್ನೇ ಪ್ರಧಾನವಾಗಿ ಕಲಿಸಬೇಕು;** ಅತ್ಯಂತ ಅವಶ್ಯವಾದ, ಸುಲಭವಾದ, ಕೆಲವು ವ್ಯಾಕರಣನಿಯಮಗಳನ್ನು ಮಾತ್ರ ವಾಕ್ಯಗಳ ಉದಾಹರಣೆಗಳ ಮೂಲಕ ತಿಳಿಸಿದರೆ ಆಯಿತು. ಹೀಗೆ ಎಷ್ಟು ಸಂಸ್ಕೃತವನ್ನು ಕಲಿಸಬಹುದೆಂಬುದು ನಮ್ಮಗಳ ಮನಸ್ಸಿಗೆ ಹಿಡಿದೇ ಇಲ್ಲ. ಪ್ರಯತ್ನವನ್ನು ಮಾಡಿ ನೋಡಿದವರಿಗೆ ಸಂಸ್ಕೃತವನ್ನು ಎಷ್ಟು ಸುಲಭವಾಗಿ ಕಲಿಯಬಹುದು, ಕಲಿಸಬಹುದು- ಎಂಬುದರ ಅರಿವಾಗುವದು.

ಇನ್ನು ದೊಡ್ಡವರಿಗೆ ಅನೇಕರಿಗೆ ಈಗೀಗ ಭಗವದ್ಗೀತೆಯ ಪರಿಚಯವು ತಕ್ಕಮಟ್ಟಿಗೆ ಆಗುತ್ತಲಿದೆ. ಅಂಥವರಿಗೆ ಗೀತೆಯ ಶಬ್ದಗಳನ್ನೊಳಗೊಂಡ ಹೊಸಹೊಸ ವಾಕ್ಯಗಳನ್ನು ಸೇರಿಸಿದ ಪಾಠಗಳನ್ನು ಏರ್ಪಡಿಸಿದರೆ ಎಷ್ಟು ಉತ್ತಮವಾದೀತು! ಸಂಸ್ಕೃತವೂ ಬಂದು, ಅಧ್ಯಾತ್ಮವಿಚಾರವೂ ಮನಸ್ಸಿಗೆ ಹಿಡಿಯುವದಕ್ಕೆ ಎಷ್ಟು ಸಹಾಯವಾದೀತು! ಇದನ್ನು ನಮ್ಮ ಪಂಡಿತರುಗಳು ಪ್ರಯತ್ನಿಸಿದರೆ ಫಲವು ಎಷ್ಟು ಕ್ಷಿಪ್ರವಾಗಿ ಆಗುವದೆಂಬುದು ತಿಳಿದೀತು! ಹೀಗೆಯೇ ಕೆಲವು ವ್ರತಕಥೆಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳುವಂತೆ ಬರೆದು ಜನರಿಗೆ ತಿಳಿಯಪಡಿಸಬಹುದು. ಸಂಸ್ಕೃತದ ಸಾಮಾನ್ಯಪರಿಚಯವು ಬಹಳ ಜನರಿಗೆ ಆಗುವದಕ್ಕೆ ಇದೂ ಒಂದು ಉಪಾಯವು.

ಹಿಂದಿಯ ಪುಸ್ತಕಗಳನ್ನು ಬರೆಯುವವರು ದೇಶಭಾಷೆಗಳಿಗೂ ಹಿಂದಿಗೂ ಸಮಾನವಾಗಿರುವ ಬಳಕೆಯ ಸಂಸ್ಕೃತಶಬ್ದಗಳನ್ನು ಪ್ರಯೋಗಿಸಿದರೆ ಹಿಂದಿಯ ಜೊತೆಗೆ ಸಂಸ್ಕೃತವು ನಿರಾಯಾಸವಾಗಿ ಬಂದುಬಿಟ್ಟೀತು. ಹಿಂದಿಯು ಎಷ್ಟಾದರೂ ಸಂಸ್ಕೃತದಿಂದ ಹುಟ್ಟಿರುವ ಭಾಷೆ; ಸಂಸ್ಕೃತದ ಎಷ್ಟೋ ಶಬ್ದಗಳು ಅದರಲ್ಲಿ ಅಪಭ್ರಂಶವಾಗಿರುತ್ತವೆ, ಎಷ್ಟೋ ಶಬ್ದರೂಪಗಳು ಸಂಸ್ಕೃತಕ್ಕೆ ಹತ್ತಿರವಾಗಿಯೂ ಇರುತ್ತವೆ. ಸಂಸ್ಕೃತವನ್ನು

ಕಲಿಸುವವರು ಈ ಸಂಬಂಧವನ್ನು ಸುಪುಟಗೊಳಿಸುವ ಹಿಂದೀ-ಸಂಸ್ಕೃತ ಪುಸ್ತಕಗಳನ್ನು ಸಿದ್ಧಗೊಳಿಸಿದರೆ ಎರಡು ಭಾಷೆಗಳಿಗೂ ಪ್ರೋತ್ಸಾಹವಾಗುವದಲ್ಲವೆ? ಸಂಸ್ಕೃತಪ್ರಚಾರವು ತನಗೆತಾನೆ ಮುಂದುವರಿಯುವದಿಲ್ಲವೆ?

ಸಂಸ್ಕೃತದಲ್ಲಿರುವ ಧರ್ಮಶಾಸ್ತ್ರ, ವೈದ್ಯಶಾಸ್ತ್ರ-ಮುಂತಾದವುಗಳಲ್ಲಿ ಎಷ್ಟೋ ಪಾರಿಭಾಷಿಕಶಬ್ದಗಳು ಅಡಗಿರುತ್ತವೆ. ಈಗ ದೇಶಭಾಷೆಗಳಿಗೆ ಪಾರಿಭಾಷಿಕಶಬ್ದಗಳು ಬಹಳವಾಗಿ ಬೇಕಾಗಿರುತ್ತವೆ. ಕೋರ್ಟು ಕಛೇರಿಗಳಲ್ಲಿ ಉಪಯೋಗಿಸುವ, ಮತ್ತು ಕಾನೂನಿನಲ್ಲಿ ಉಪಯೋಗಿಸಬೇಕಾಗುವ ಶಬ್ದಗಳನ್ನು ಸರಕಾರದವರೂ ಹುಡುಕುತ್ತಿರುವರು. ಕೆಲಕೆಲವು ಧರ್ಮಶಾಸ್ತ್ರಗಳ ಭಾಗಗಳನ್ನೂ ವೈದ್ಯಗ್ರಂಥಗಳ ಭಾಗಗಳನ್ನೂ ಮೂಲಸಮೇತವಾಗಿ ದೇಶಭಾಷೆಗೆ ಪರಿವರ್ತನೆಮಾಡಿಟ್ಟರೆ ಜನರಿಗೆ ನಮ್ಮ ಪ್ರಾಚೀನ ವಿಜ್ಞಾನದ ಅರಿವೂ ಆಗುವದರ ಜೊತೆಗೆ ಪಾರಿಭಾಷಿಕಶಬ್ದಗಳನ್ನು ಅನ್ವೇಷಣೆ ಮಾಡುತ್ತಿರುವವರಿಗೂ ಇದರಿಂದ ಸಹಾಯುವಾಗುವದಿಲ್ಲವೆ? ವಿದ್ವಾಂಸರು ಇದನ್ನು ಆಲೋಚಿಸಬೇಕು.

ನಮ್ಮನ್ನಾಳುತ್ತಿದ್ದ ಶ್ರೀಮನ್ಮಹಾರಾಜರವರು ಹಲವು ಪುರಾಣಗಳನ್ನೂ ತತ್ತ್ವವಿಚಾರದ ಗ್ರಂಥಗಳನ್ನೂ ಮೂಲಸಹಿತವಾಗಿ ಕನ್ನಡಕ್ಕೆ ಇಳಿಸುವ ಪಂಡಿತರಿಗೆ ಪ್ರೋತ್ಸಾಹವನ್ನು ಕೊಟ್ಟಿರುತ್ತಾರೆ. ಈ ಪುರಾಣಗಳಿಂದ ಕೆಲಕೆಲವು ಕಥಾಭಾಗಗಳನ್ನೂ ಕೆಲಕೆಲವು ಉಪದೇಶಭಾಗಗಳನ್ನೂ ಆರಿಸಿದ ಪುಸ್ತಕಗಳನ್ನು ಪ್ರಕಟಿಸಿದರೆ ಜನಸಾಮಾನ್ಯಕ್ಕೆ ಸಂಸ್ಕೃತಜ್ಞಾನವೂ ಪುರಾಣಗಳ ಅರಿವೂ ಆಗುವದಿಲ್ಲವೆ? ಭರತ ಖಂಡದ ಪ್ರಾಚೀನ ಇತಿಹಾಸವನ್ನು ತಿಳಿಯಬೇಕೆನ್ನುವವರಿಗೂ ಪರಂಪರೆಯಿಂದ ಪ್ರಯೋಜನವಾಗಲಾರದೆ? ಇದನ್ನು ವಿಜ್ಞರು ವಿಮರ್ಶೆಮಾಡಬೇಕು. ಸಂಸ್ಕೃತವನ್ನು ಜನಸಾಮಾನ್ಯಕ್ಕೆ ತಿಳಿಯುವಂತೆ ಮಾಡುವ ಇನ್ನೂ ಕೆಲವು ಉಪಾಯಗಳನ್ನು ಮುಂದೆ ಸೂಚಿಸುವೆನು.

* * * * *

## 46. ಸಂಸ್ಕೃತಕ್ಕೆ ತಕ್ಕ ಸ್ಥಾನವನ್ನು ಕೊಡಿರಿ

ಸಂಸ್ಕೃತವನ್ನು ಜನಾನುರಾಗಕ್ಕೆ ಪಾತ್ರವಾಗಿ ಮಾಡುವ ಕೆಲವು ಪ್ರಕಾರಗಳನ್ನು ಹಿಂದಿನ ಲೇಖನಗಳಲ್ಲಿ ಸೂಚಿಸಿರುತ್ತೇನೆ. ಪ್ರಕೃತ ಲೇಖನದಲ್ಲಿ ಆ ಸರಣಿಯನ್ನು ಸದ್ಯಕ್ಕೆ ಅಲ್ಲಿಗೆ ಬಿಟ್ಟು ಭರತಖಂಡದ ಆದ್ಯಂತದಲ್ಲಿಯೂ ಈಗ ಎದ್ದಿರುವ ಸಂಸ್ಕೃತದ

ಸ್ಥಾನವಿಷಯಕವಾದ ಚಳವಳಿಯ ವಿಷಯಕ್ಕೆ ಕೆಲವು ವಾಕ್ಯಗಳನ್ನು ಬರೆಯುವೆನು. ಈಗ ಹಿಂದಿಭಾಷೆಯನ್ನು ಜನಾಂಗದ ಭಾಷೆಯೆಂದು ಕೇಂದ್ರಸರಕಾರದವರು ಗೊತ್ತುಪಡಿಸಿರುತ್ತಾರೆ. ಸಂಸ್ಕೃತಕ್ಕೇ ಈ ಸ್ಥಾನವಿರಬೇಕೆಂಬುದು ಸಂಸ್ಕೃತಪ್ರೇಮಿಗಳ ಅಭಿಪ್ರಾಯವಾಗಿರುತ್ತದೆ.

ಸಂಸ್ಕೃತದಲ್ಲಿ ಆದರವುಳ್ಳವರು ಹೇಳುತ್ತಿರುವದೇನೆಂದರೆ ಭರತಖಂಡದ ಜನಾಂಗಜೀವನದ ಉತ್ತಮಭೂಮಿಕೆಗಳಲ್ಲಿ ಈ ಭಾಷೆಯನ್ನೇ ಉಪಯೋಗಿಸಬೇಕು; ಸಾಮಾನ್ಯನಾಗರೀಕರು ಇದನ್ನೇ ಉಪಯೋಗಿಸಬೇಕೆಂಬ ನಿರ್ಬಂಧವಿರಬೇಕಾದದ್ದೇನೂ ಇಲ್ಲ. ಆ ಭಾಷೆಯಲ್ಲಿ ಅಡಗಿರುವ ಅನುಷ್ಠೇಯವಾದ ಆಧ್ಯಾತ್ಮಿಕ ಜ್ಞಾನವನ್ನೂ ಅವಿಚ್ಛಿನ್ನವಾಗಿ ನಡೆದುಕೊಂಡುಬಂದು ಈಗಲೂ ವೀರ್ಯವಂತವಾಗಿರುವ ನಾಗರಿಕಜೀವನವನ್ನೂ ನಮ್ಮ ಈಗಿನ ಮತ್ತು ಮುಂದಿನ ಜನಾಂಗಿಕ ಐಕಮತ್ಯಕ್ಕೆ ತಳಹದಿಯಾಗಿ ಉಪಯೋಗಿಸಿಕೊಳ್ಳಬೇಕು. ಪ್ರಪಂಚದ ಜನಾಂಗಗಳು ಮಿತ್ರಭಾವದಿಂದ ಇದ್ದುಕೊಂಡಿರುವದಕ್ಕೂ ಜನರು ಶಾಶ್ವತವಾದ ಶಾಂತಿ, ಅಭ್ಯುದಯ, ಆನಂದ- ಇವುಗಳನ್ನು ಅನುಭವಿಸಿಕೊಂಡಿರುವದಕ್ಕೂ ಈ ತಳಹದಿಯೇ ನಂಬಬಹುದಾದ ಫಲಕಾರಿಯಾದ ಸಾಧನವೆಂಬುದನ್ನು ಭೂಮಂಡಲದ ಜನಾಂಗಗಳಿಗೆ ತಿಳಿಸಿಕೊಡಬೇಕು. ಉದ್ದೇಶವು ನೆರವೇರುವದಕ್ಕಾಗಿ ವರ್ಷದ ದಸರಾಕಾಲದಲ್ಲಿ **ಗೀರ್ವಾಣೋತ್ಸವ**ವನ್ನು ಏರ್ಪಡಿಸಬೇಕಾಗಿ ಪ್ರಾರ್ಥಿಸಿ ಗೀರ್ವಾಣ ಭಾಷಾಭಿಮಾನಿಗಳೂ ಸುಪ್ರಸಿದ್ಧರೂ ಆಗಿರುವ ಮೂವತ್ತುನಲವತ್ತು ಜನ ಮಹನೀಯರು ಒಂದು ಕರಪತ್ರವನ್ನು ದೇಶದಲ್ಲೆಲ್ಲ ಹಂಚಿರುತ್ತಾರೆ.

ನಮ್ಮ ದೇಶದಲ್ಲಿ ಈಗ ಎಲ್ಲವೂ ರಾಜಕೀಯರೂಪವನ್ನು ತೆಗೆದುಕೊಳ್ಳುತ್ತಿದೆಯಷ್ಟೆ. ಶಂಖದಲ್ಲಿ ಬಿದ್ದದ್ದೇ ತೀರ್ಥ ಎಂಬಂತೆ ಕೇಂದ್ರಸರ್ಕಾರದವರು ಒಪ್ಪಿದ ಹೊರತು ಸಂಸ್ಕೃತಕ್ಕೆ ಸರಿಯಾದ ಸ್ಥಾನವು ದೊರಕುವ ಸಂಭವವಿಲ್ಲ. ಆದ್ದರಿಂದ ಕಾಲಸ್ಥಿತಿಗನುಗುಣವಾಗಿ ಅವಶ್ಯವಾಗಿ ಎಲ್ಲರೂ ಈ ಪ್ರಾರ್ಥನೆಗೆ ಮನ್ನಣೆಕೊಟ್ಟು ಅಲ್ಲಲ್ಲಿ ಗೀರ್ವಾಣೋತ್ಸವನ್ನು ನಡೆಯಿಸುವದು, ವೃತ್ತಪತ್ರಿಕೆಗಳಲ್ಲಿ ಸಂಪಾದಕೀಯಲೇಖನಗಳನ್ನು ಬರೆಯುವದು, ಬಹಿರಂಗವಾಗಿ ಸಭೆಗಳನ್ನೇರ್ಪಡಿಸಿ ತಕ್ಕ ತೀರ್ಮಾನಗಳನ್ನು ಕೇಂದ್ರಸರಕಾರಕ್ಕೆ ತಿಳಿಯಿಸುವದು, ಮೆರವಣಿಗೆ ಸಾಮೂಹಿಕ ಪ್ರಾರ್ಥನೆಗಳನ್ನೂ ನಡೆಯಿಸುವದು ಇವೇ ಮುಂತಾದ ಪ್ರಕಾರಗಳಿಂದ ಈ ಚಳವಳಿಗೆ ತಮ್ಮ ಕೈಯಲ್ಲಾದ ಒತ್ತಾಸೆಯನ್ನು ನೀಡುವರೆಂಬುದರಲ್ಲಿ ಸಂಶಯವಿಲ್ಲ.

ಆದರೆ ಇಷ್ಟೆಲ್ಲ ಆದರೂ ಈ ಪ್ರಾರ್ಥನೆಯಲ್ಲಿ ನಿಜವಾಗಿ ನಾವು ಅನುಷ್ಠಾನ ಮಾಡಬೇಕೆಂದು ಕೇಳಿರುವ ಭಾಗವು ಯಾವದೆಂಬುದನ್ನು ಲಕ್ಷಿಸಬೇಕು. ಕೆಲವು ತೀರ್ಮಾನಗಳು ಕೇಂದ್ರಸರಕಾರಕ್ಕೆ ತಲುಪಿದರೆ ಆಗಲಿಲ್ಲ. ಈಗಾಗಲೆ ಹಿಂದಿಯು ಸರಕಾರದ ಭಾಷೆಯಾಗಿರಬೇಕೆಂದು ನಿರ್ಣಯಿಸಿಬಿಟ್ಟಿರುತ್ತಾರೆ. ಆದ್ದರಿಂದ ಜನಾಂಗವು ಉಚ್ಚಭೂಮಿಕೆಗಳಲ್ಲಿ ಸಂಸ್ಕೃತವನ್ನೇ ಬಳಸಬೇಕೆಂಬುದಕ್ಕೆ ಅದನ್ನು ಸರಕಾರಿಯ ರಿಕಾರ್ಡುಗಳಲ್ಲಿಡಬೇಕು ಎಂಬ ಸಂಕುಚಿತಾರ್ಥವನ್ನು ಮಾಡಿಕೊಳ್ಳಬಾರದು. ಸಂಸ್ಕೃತವೇ ವಿದ್ವಾಂಸರ ಭಾಷೆಯಾಗಿರಬೇಕು, ಒಂದು ಪ್ರಾಂತದವರು ಮತ್ತೊಂದು ಪ್ರಾಂತದವರೊಡನೆ ವ್ಯವಹಾರವನ್ನು ನಡೆಯಿಸುವಾಗ ಸಂಸ್ಕೃತದಲ್ಲಿಯೇ ನಡೆಯಿಸಬೇಕು, ಈವರೆಗೆ ಇಂಗ್ಲಿಷಿಗೆ ಸಲ್ಲುತ್ತಿದ್ದ ಸ್ಥಾನಮಾನಗಳು ಆ ಭಾಷೆಗೆ ಸಲ್ಲುವಂತೆ ನೋಡಿಕೊಳ್ಳಬೇಕು ಎಂದು ಅರ್ಥವನ್ನು ಕಲ್ಪಿಸಬೇಕು. ಹೀಗಾದರೆ ಸರ್ಕಾರದವರು ಪ್ರಚಾರದಲ್ಲಿ ತರುವ ರಾಜಭಾಷೆ ಯಾವದಾದರೂ ಆಗಲಿ, ಸಂಸ್ಕೃತಕ್ಕೆ ಸ್ವಂತ ಸ್ಥಾನವು ದೊರೆತಂತೆ ಆಗುವದು.

ದೇಶಪ್ರಮುಖರೂ ವಿದ್ವಾಂಸರುಗಳೂ ಕಲೆತು ಪ್ರಧಾನಸಮ್ಮೇಳನವೊಂದನ್ನು ನಡೆಯಿಸಿ ತಕ್ಕ ಆಂದೋಲನವನ್ನು ನಡೆಯಿಸಿದರೆ ಸಂಸ್ಕೃತ ಯೂನಿವರ್ಸಿಟಿ (ಸಕಲವಿದ್ಯಾನಿಲಯ)ವೊಂದನ್ನು ನಿರ್ಮಿಸುವದೇನೂ ಕಷ್ಟವಾಗಲಾರದು. ಅದು ಅನ್ವರ್ಥವಾಗಿಯೂ ಸಕಲವಿದ್ಯಾನಿಲಯುವಾಗಬೇಕು. ಇನ್ನು ಮುಂದೆ ವಿದ್ಯಾವಂತನೆನಿಸಿಕೊಂಡವನು ಯಾವನೂ ಸಂಸ್ಕೃತಾನಭಿಜ್ಞನೆನಿಸಿಕೊಳ್ಳಬಾರದು. ಮಹಾವಿದ್ವಾಂಸನು ಎನ್ನಿಸಿಕೊಳ್ಳುವವನು ಸುಮ್ಮನೆ ಕೆಲವು ಬಿರುದುಬಾವುಲಿಗಳ ಪ್ರದರ್ಶನದಿಂದ ತೃಪ್ತನಾಗದೆ ಗೀರ್ವಾಣಭಾಷೆಯಲ್ಲಿ ಧಾರಾಳವಾಗಿ ಭಾಷಣವನ್ನು ಕೊಡುವದಕ್ಕೆ ಮತ್ತು ಲೇಖನಗಳನ್ನು ಲಲಿತವಾದ ಸಂಸ್ಕೃತದಲ್ಲಿ ಬರೆಯುವದಕ್ಕೂ ಬಲ್ಲವನೆನಿಸಿಕೊಳ್ಳಬೇಕು. ಈಗ ನಮ್ಮ ದೇಶದಲ್ಲಿ ಸಂಗೀತವಿದ್ವಾಂಸರುಗಳಿದ್ದಾರೆ. ಅವರಿಗೆ ಸಂಸ್ಕೃತದಲ್ಲಿ ಅಡಗಿರುವ ಸಂಗೀತಶಾಸ್ತ್ರವನ್ನು ಉಪಯೋಗಿಸಿಕೊಳ್ಳುವ ಶಕ್ತಿಯಿರುವುದಿಲ್ಲ. ಮನೆತನದಿಂದಲೂ ವೈದ್ಯರೆನಿಸಿಕೊಂಡವರಿದ್ದಾರೆ. ಅವರಿಗೆ ಸಂಸ್ಕೃತದಲ್ಲಿ ಅಡಗಿರುವ ವೈದ್ಯಶಾಸ್ತ್ರದ ನೇರಾದ ಪರಿಚಯುವಿಲ್ಲ. ಮುಂದೆ ಸಿದ್ಧವಾಗುವ ಸಂಸ್ಕೃತ ಸಕಲವಿದ್ಯಾನಿಲಯದ ವಿದ್ವಾಂಸರುಗಳು ಸಂಸ್ಕೃತದಲ್ಲಿರುವ ಸಾಹಿತ್ಯ, ಸಂಗೀತ, ವೈದ್ಯ, ಜ್ಯೋತಿಷ, ಗಣಿತ, ರಾಜನೀತಿ-ಮುಂತಾದ ಲೌಕಿಕ ವಿಷಯುಗಳನ್ನು ತಿಳಿದುಕೊಂಡೇ ಆಯಾ ವ್ಯವಹಾರದಲ್ಲಿ ತೊಡಗುವವರಾಗಬೇಕು. ಇಂಗ್ಲಿಷಿನ ಆಯಾ ವಿಷಯುಗಳ ವಿಜ್ಞಾನವನ್ನು ಆಧುನಿಕಪದ್ಧತಿಯಿಂದ ಅಭ್ಯಾಸ

ಮಾಡಿದವರೂ ಆಗಿರಬೇಕು. ವೇದಪ್ರಮಾಣಕರಾದ ಆರ್ಯರೂ, ಬೌದ್ಧರೂ, ಜೈನರೂ ಮತ್ತು ಇನ್ನೂ ಹಲವರೂ ನಮ್ಮ ದೇಶದಲ್ಲಿ ಉತ್ತಮ ಸಂಸ್ಕೃತಗ್ರಂಥಗಳನ್ನು ಬೇರೆಬೇರೆಯ ವಿಷಯಗಳಲ್ಲಿ ಬರೆದಿರುತ್ತಾರೆ. ಆದ್ದರಿಂದ ನಾವು ಈಗ ಭರತಖಂಡ ದವರೆಂಬ ಒಂದೇ ಅಭಿಮಾನದಿಂದ ಯಾವ ಪಕ್ಷಪಾತವೂ ಇಲ್ಲದೆ ಎಲ್ಲಾ ಸಂಸ್ಕೃತಗ್ರಂಥಗಳನ್ನೂ ಮುಂದಕ್ಕೆ ತಂದು ಅಭ್ಯಾಸಮಾಡಬೇಕು. ಹೀಗಾದರೆ ಸಂಸ್ಕೃತಕ್ಕೆ ಅದರ ಸ್ಥಾನವನ್ನು ಕೊಟ್ಟಂತೆ ಆಗುವದು.

ಸರಕಾರವು ಹಿಂದಿಭಾಷೆಯನ್ನು ರಾಷ್ಟ್ರಭಾಷೆ ಎಂದು ಅಂಗೀಕರಿಸಿದರೂ ಕೂಡಲೆ ರಾಜ್ಯಾಂಗರಚನೆಯ ಪಟ್ಟಿಕೆಯನ್ನು ಆ ಭಾಷೆಯಲ್ಲಿಯೇ ಏರ್ಪಡಿಸುವದು ಸಾಧ್ಯವಾಗಿಲ್ಲ. ಏಕೆಂದರೆ ಬಹುಜನರ ಭಾಷೆಯಾಗಿದ್ದಮಾತ್ರದಿಂದ ಬಹುವಿಷಯ ಗಳನ್ನು ವಿವಿಕ್ತವಾಗಿ ತಿಳಿಸಬಲ್ಲ ಯೋಗ್ಯತೆ ಅದಕ್ಕೆ ಇದೆ ಎಂದೇನೂ ಸಿದ್ಧವಾಗು ವದಿಲ್ಲ. **ಈ ಕೊರತೆಯನ್ನು ಮನಗಂಡಿರುವದರಿಂದಲೇ ಸಂಸ್ಕೃತತಜ್ಞರ ಸಮಿತಿ ಯೊಂದನ್ನು ಏರ್ಪಡಿಸಿ ರಾಜನೀತಿಗೆ ಸಂಬಂಧಪಟ್ಟ ಸಂಸ್ಕೃತ ಪಾರಿಭಾಷಿಕಶಬ್ದಗಳನ್ನು ಸಂಕಲನಮಾಡಿಸಬೇಕೆಂದು ನಿರ್ಧಾರವಾಗಿರುತ್ತದೆ. ರಾಜ್ಯಾಂಗಸಭೆಯ ಅಧ್ಯಕ್ಷರಾದ ಡಾ|| ರಾಜೇಂದ್ರಪ್ರಸಾದರವರು ಏಕಭಾಷಾ ನಿರ್ಧಾರಣೆಗಾಗಿ ಸಭೆಯವರನ್ನು ಅಭಿನಂದನೆ ಮಾಡುತ್ತಾ ನಾವು ಇಂದು ಅತ್ಯಂತ ವಿವೇಕಪೂರ್ಣವಾದ ಕಾರ್ಯವನ್ನು ಮಾಡಿರುತ್ತೇವೆಂಬ ಸಂತೋಷವೂ ಆನಂದವೂ ನನಗೆ ಆಗಿರುತ್ತದೆ; ಮುಂದಿನ ಪೀಳಿಗೆಯವರು ಇದಕ್ಕಾಗಿ ನಮಗೆ ಧನ್ಯವಾದಗಳನ್ನು ನೀಡುವರೆಂದು ನನಗೆ ಭರವಸೆಯಿದೆ ಎಂದು ನುಡಿದರಂತೆ,** ದೇಶೀಯಭಾಷೆಯೊಂದು ನಮ್ಮೆಲ್ಲರನ್ನೂ ಒಂದುಗೂಡಿಸುವಂತೆ ಮಾಡಿದ್ದು ಉತ್ತಮಕಾರ್ಯವಲ್ಲವೆಂದು ಯಾರುತಾನೆ ಹೇಳಲಾರರು? ಆದರೆ ದೇಶಭಕ್ತಿಯ ಉತ್ಸಾಹಭರದಲ್ಲಿ ನಾವುಗಳು ಎಷ್ಟೇ ಹಿರಿಹಿರಿ ಹಿಗ್ಗಿದರೂ ಮಹಾರಾಷ್ಟ್ರ, ಬಂಗಾಳ ಮುಂತಾದ ಉತ್ತರದ ಪ್ರಮುಖಭಾಷೆಗಳೂ ದಕ್ಷಿಣದ ದ್ರಾವಿಡಭಾಷೆಗಳೂ ತಮ್ಮ ಮೇಲೆ ಒಂದು ಹೊರೆ ಹೊರಿಸಿದ್ದಾರೆಂದು ಕಾಲಕ್ರಮದಲ್ಲಾದರೂ ಮನಸ್ಸಿಗೆ ತಂದುಕೊಳ್ಳದೆ ಇರುವದು ಸಾಧ್ಯವೇಇಲ್ಲ. ಹಿಂದಿಯನ್ನು ಮುಂದೆ ನಿಲ್ಲಿಸಿ ಸಂಸ್ಕೃತದ ಸಹಾಯುವನ್ನು ಕೋರುವದರ ಬದಲಾಗಿ ನೇರಾಗಿ ಸಂಸ್ಕೃತವನ್ನೇ ತಂದಿದ್ದರೆ ಯಾರೊಬ್ಬರಿಗೂ ಈ ಮನಸ್ಸಿನ ಕೊರೆತಕ್ಕೆ ಕಾರಣವಿರಲಿಲ್ಲ. ಏಕೆಂದರೆ ಸಂಸ್ಕೃತವು ಯಾವ ಒಂದು ಗೊತ್ತಾದ ಪ್ರಾಂತದ ಭಾಷೆಯಲ್ಲ. ಅನೇಕ ಭಾಷೆಗಳಿಗೆ ತಾಯಿಯಾಗಿರುತ್ತದೆ; ಮಿಕ್ಕ ಭಾಷೆಗಳಿಗೆ ಸಾಕುತಾಯಿಯಾಗಿದೆ. ನಮ್ಮ

ಅನಾದರದಿಂದ ಈಗಿನ ಕೆಲವು ರಾಜಕೀಯ ವಾತಾವರಣವನ್ನು ಸುತ್ತುಗೊಳಿಸುವದಕ್ಕೆ ಅಲ್ಪಸ್ವಲ್ಪ ಶಬ್ದಗಳು ಅದರ ಕೋಶದಲ್ಲಿ ಕಾಣದೆ ಇರಬಹುದು; ಆದರೆ ಈ ಕೊರತೆಯು ಅತ್ಯಲ್ಪಪ್ರಯತ್ನದಿಂದ ಪೂರ್ಣಗೊಳಿಸಿಕೊಳ್ಳಬಹುದು. ಸಂಸ್ಕೃತವು ಜನಾಂಗದ ಭಾಷೆ ಎಂಬ ನೆನಪು ಬಂದರೆ ಆಗ ಆಗುವ ಲಾಭವು ಎಷ್ಟು ಅಪರಿಮಿತವಾಗಿದ್ದೀತು !

**ನಮ್ಮ ನಿಜವಾದ ಆತ್ಮನಾದ ಪರಮಾತ್ಮನ ನೆನಪು ಬಂದರೆ ಎಲ್ಲ ಹೃದಯದ ಗಂಟುಗಳೂ ಪೂರ್ಣವಾಗಿ ಬಿಚ್ಚಿಕೊಳ್ಳುವವು-ಎಂದು ಶ್ರುತಿವಾಕ್ಯವಿದೆ. ಆದರೆ ಪರಮಾತ್ಮನು ನಮ್ಮೆಲ್ಲರ ಆತ್ಮನು ಎಂಬ ಈ ಮಧುರಸಂದೇಶವನ್ನು ಇತ್ತಿರುವದು ಸಂಸ್ಕೃತಭಾಷೆ.** ಆದ್ದರಿಂದ ಪರಮಾತ್ಮನು ನಮ್ಮೆಲ್ಲರ ಆತ್ಮನಾದರೆ ಸಂಸ್ಕೃತವು ನಮ್ಮೆಲ್ಲರ ಉಸಿರು. **ಆಹಾರಶುದ್ಧಿಯಾದರೆ ಪರಮಾತ್ಮನ ಸ್ಮೃತಿಯು ಬರುವದು ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ನಮಗೆ ಹೊರಗಿನ ಭಾಷೆಯ ವ್ಯಾಮೋಹವು ತಪ್ಪಿದರೆ, ಸಂಸ್ಕೃತದ ನೆನಪು ಬರುತ್ತದೆ;** ಸಂಸ್ಕೃತದ ನೆನಪು ಬಂದರೆ ದೇಶದವರಲ್ಲಿ ಒಗ್ಗಟ್ಟು ಹೆಚ್ಚುತ್ತದೆ, ದೇಶದವರ ಚಟುವಟಿಕೆಗಳು ಎದ್ದುಕೊಳ್ಳುತ್ತವೆ, ಸಂಪತ್ತು ಅಭಿವೃದ್ಧಿಯಾಗುತ್ತದೆ, ಇಹಪರಸುಖಗಳು ತಾವೇ ಕೈವಶವಾಗುತ್ತವೆ.

ಅತ್ಯಂತ ಪ್ರಾಚೀನವಾದರೂ ಸದ್ಯೋಜಾತವಾಗಿರುವ ಈ ಭಾಷೆಯಲ್ಲಿ ಅಡಗಿರುವ ಸಂಸ್ಕೃತಿಯು ಜನರ ಕಣ್ಣಮುಂದೆ ನಿಂತಿರುವಂತೆ ವಿಷಯಗಳನ್ನು ವೈವಿಧ್ಯತೆಯಿಂದ ಕೂಡಿಸಿ ಪ್ರಕಟಿಸುವ ಅಖಿಲಭಾರತೀಯ ದೈನಂದಿನಪತ್ರಿಕೆಯೊಂದು ಕೂಡಲೆ ನಿರ್ಮಾಣವಾಗಬೇಕು. ಧರ್ಮ, ಅರ್ಥ, ಕಾಮ, ಮೋಕ್ಷ- ನಾಲ್ಕು ಪುರುಷಾರ್ಥಗಳೂ ಸಂಸ್ಕೃತಭಾಷೆಯ ಅಭ್ಯಾಸದಿಂದ ಕೈಗೂಡುವವೆಂಬ ಭರವಸೆಯು ಜನರಿಗೆ ಉಂಟಾಗಬೇಕು. ಅದರಲ್ಲಿ ಒಟ್ಟು ಜನಾಂಗದ ಅಭ್ಯುದಯಕ್ಕೆ ಬೇಕಾದ ವಿಚಾರಗಳೇ ಪ್ರಕಟವಾಗಬೇಕು. ಸಂಸ್ಕೃತವನ್ನು ಅರಿಯದವರು ನಾಗರೀಕರಲ್ಲವೆಂಬ ಭಾವನೆಯು ವಾಚಕರಲ್ಲಿ ಮೂಡುವಂತೆ ಆಗಬೇಕು. ನವಗ್ರಂಥಗಳ ನಿರ್ಮಾಣಕ್ಕೆ ವಿದ್ವಾಂಸರುಗಳಿಗೆ ಪ್ರೋತ್ಸಾಹ ದೊರೆಯಬೇಕು. ಆಗ ನಾವು ಸಂಸ್ಕೃತಕ್ಕೆ ಸರಿಯಾದ ಸ್ಥಾನವನ್ನು ಕೊಟ್ಟವರಾಗುವೆವು. ಸಂಸ್ಕೃತವನ್ನು ಭೂಲೋಕಕ್ಕೆ ಇತ್ತಿರುವ ಋಷಿಗಳ ಋಣದಿಂದ ನಿರ್ಮುಕ್ತರಾಗುವೆವು. ಆರ್ಯಸಂಸ್ಕೃತಿಯನ್ನು ಹಡೆದಿರುವ ಭಾರತ ಮಾತೆಯ ಸತ್ಪುತ್ರರೆನಿಸುವೆವು.

* * * * *

# 47. ಭಾರತಸಂಸ್ಕೃತಿಯೂ ಸಂಸ್ಕೃತವೂ

ವಿದೇಶಿಯರ ಪ್ರಭಾವದಿಂದಲೂ ಕಲಿದೋಷದಿಂದಲೂ ಭಾರತದೇಶದಲ್ಲಿ ಪರದೇಶಗಳ ಸಂಸ್ಕೃತಿಗಳು ಮೇಲುಗೈಯಾಗಿ ನಮ್ಮ ಸಂಸ್ಕೃತಿಯು ಕುಗ್ಗುತ್ತಾ ಬಂದಹಾಗೆಲ್ಲ ಭಾರತದ ಗೀರ್ವಾಣಭಾರತೀಯ ನುಡಿಗಳು ನಮ್ಮ ದೇಶದವರ ಕಿವಿಗಳಿಗೆ ದೂರವಾಗುತ್ತಾಬಂದವು. ವಿಲಾಸಜೀವನವು ಹೆಚ್ಚುತ್ತಷ್ಟೂ, ಸ್ವದೇಶದ ಸ್ವತಂತ್ರ ಜೀವನೋಪಾಯಗಳು ಮರೆಯಾಗುತ್ತ ಬಂದಹಾಗೆಲ್ಲ ಜನರು ಬಡತನದ ಭಾರವನ್ನು ತಡೆಯಲಾರದೆ ಹೇಗಾದರೂ ಹೊಟ್ಟೆಬಟ್ಟೆಗೆ ನೇರವಾದರೆ ಸಾಕೆಂಬ ಹೇಯಭಾವನೆಯನ್ನು ತಳೆಯುತ್ತಾ ಬಂದರು. ಇದರಿಂದ ವೇದ, ಶಾಸ್ತ್ರಷ್ಟೂ, ಪುರಾಣ-ಇವುಗಳ ಮೂಲಕವಾಗಿಯಾಗಲಿ ತೀರ್ಥಯಾತ್ರೆಷ್ಟೂ, ಕರ್ಮಾಚರಣೆ-ಮುಂತಾದ ಮಾರ್ಗಗಳಿಂದಲಾಗಲಿ ಕೇಳಬಹುದಾಗಿದ್ದ ಸಂಸ್ಕೃತಶಬ್ದಗಳು ಜನರ ಸನ್ನಿವೇಶದಿಂದ ದೂರವಾದವು. ದೇಶಭಾಷೆಗಳಲ್ಲಿ ಬಳಕೆಯಲ್ಲಿದ್ದ ಅಲ್ಪಸ್ವಲ್ಪ ಸಂಖ್ಯೆಯ ಸಂಸ್ಕೃತಶಬ್ದಗಳೂ ಇತ್ತೀಚೆಗೆ ಕಡಿಮೆಯಾಗುತ್ತಾ ಹಸಿಬಿಸಿಯ ಇಂಗ್ಲಿಷುಶಬ್ದಗಳ ಬಳಕೆಯು ಸಾಮಾನ್ಯಜನರ ಬಾಯಿಯಲ್ಲಿಯೂ ಹೆಚ್ಚಾಗುತ್ತಾ ಬಂದಿತು.

ಈ ದುರ್ದಶೆಯು ಭಾರತದ ಅಭಿಮಾನದೇವತೆಗಳಿಗೆ ಇನ್ನು ಸಹನೀಯವಲ್ಲವೆಂದು ತೋರಿರಬೇಕು. ಭೂಮಂಡಲದ ಸಮಾಜದಲ್ಲಿ ಆದ ವಿಪ್ಲವಗಳಿಂದ ಭಾರತಕ್ಕೆ ಮತ್ತೆ ಸ್ವಾತಂತ್ರ್ಯವು ದೊರಕಿತು. ಈಗ ಭಾರತೀಯಸಂಸ್ಕೃತಿ, ಸಂಸ್ಕೃತಭಾಷೆ- ಇವುಗಳಿಗೂ ಬೆಲೆಯನ್ನು ಕೊಡಬೇಕೆಂಬ ವಿಚಾರವು ಜನನಾಯಕರ ಮನಸ್ಸಿನಲ್ಲಿಯೂ ಅಲ್ಲಲ್ಲಿ ಮೂಡಿರುವಂತೆ ಕಾಣುತ್ತದೆ. ಹಿಂದಿಯೇ ನಮ್ಮ ರಾಷ್ಟ್ರಭಾಷೆಯೆಂದು ಈಗ ನಿಶ್ಚಿತವಾಗಿದ್ದರೂ ಅದಕ್ಕೆ ಸಂಸ್ಕೃತದ ಬೆಂಬಲವು ಬೇಕೇಬೇಕಾಗಿದೆ. ಭಾರತವು ಅನೇಕ ದಿಶೆಗಳಲ್ಲಿ ಹೊರಗಿನ ದೃಷ್ಟಿಕೋನಗಳನ್ನು ಅನುಸರಿಸಿ ದೇಶಾಭ್ಯುದಯವನ್ನು ಪಡೆಯಬೇಕೆಂದು ಪ್ರಯತ್ನಿಸುತ್ತಿದೆ. ಆದರೆ ಆ ಅಭ್ಯುದಯವು ನಮ್ಮ ಹಿಂದಿನ ಸಂಸ್ಕೃತಿಯ ಆಧಾರವನ್ನು ಇಟ್ಟುಕೊಂಡೇ ಆಗಬೇಕೆಂದು ಈಗ ಅನೇಕರಿಗೆ ಮನದಟ್ಟಾಗಿಬಿಟ್ಟಿದೆ. ಆ ಸಂಸ್ಕೃತಿಯ ಪರಿಚಯವೂ ನಮಗೆ ಸಂಸ್ಕೃತಭಾಷೆಯಿಂದಲೇ ಆಗಬೇಕಾಗಿರುತ್ತದೆ. ಆ ಕಾರಣದಿಂದ ಸಂಸ್ಕೃತಶಿಕ್ಷಣವು ಅತ್ಯವಶ್ಯವಾಗಿರುತ್ತದೆ.

ಈ ವಿಷಯವು ರಾಷ್ಟ್ರದವರೆಲ್ಲರಿಗೂ ಈಗ ಮನದಟ್ಟಾಗಿದೆ. ಸಂಸ್ಕೃತಭಾಷೆಯ

ಪ್ರಚಾರಕ್ಕೆ ಪ್ರಯತ್ನಿಸಬೇಕೆಂಬ ಕುತೂಹಲವೂ ಈಗ ಎಲ್ಲರಲ್ಲಿಯೂ ತೋರುತ್ತಿದೆ. ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಸಂಸ್ಕೃತಪ್ರಧಾನವಾದ ಪರೀಕ್ಷೆಗಳ ಏರ್ಪಾಟಾಗಿರುತ್ತದೆ. ಮೈಸೂರು, ಕೇರಳ, ಉತ್ತರಪ್ರದೇಶ, ಬಿಹಾರ, ಬಂಗಾಳ, ಗುಜರಾತ್- ಮುಂತಾದ ಪ್ರಾಂತಗಳಲ್ಲಿ ಕೆಲವು ಪರೀಕ್ಷಾಸಂಸ್ಥೆಗಳೂ ಏರ್ಪಟ್ಟಿವೆ. ಉತ್ತರಪ್ರದೇಶದಲ್ಲಿ ಒಂದು ವಿಶ್ವವಿದ್ಯಾನಿಲಯವು ಸ್ಥಾಪಿತವಾಗಲಿದೆಯೆಂದೂ ಕೇಳಿರುತ್ತೇನೆ. ಇನ್ನು ಕೆಲವು ಕಡೆಗಳಲ್ಲಿಯೂ ಇಂಥ ವಿಶ್ವವಿದ್ಯಾನಿಲಯಗಳು ಏಳುವ ಸಂಭವವೂ ಕಾಣುತ್ತಲಿದೆ. ಅವುಗಳೆಲ್ಲ ರೂಪವನ್ನು ತಾಳಿದರೆ ಭಾರತಭಾರತಿಯಾದ ಸಂಸ್ಕೃತದ ಏಳಿಗೆಯು ಸ್ವಲ್ಪಮಟ್ಟಿಗೆ ಆದೀತು.

ಸಂಸ್ಕೃತಗ್ರಂಥಗಳು ಅಚ್ಚಾಗದೆ ಅಲ್ಲಲ್ಲಿ ಅಜ್ಞಾತವಾಸವನ್ನು ಅನುಭವಿಸುತ್ತಿವೆ. ಇವನ್ನು ಹೊರಕ್ಕೆ ತರುವ ಪ್ರಯತ್ನಮಾಡಬೇಕೆಂದು ಅನೇಕ ಸಂಸ್ಕೃತ ಪ್ರೇಮಿಗಳು ಆಗಾಗ್ಗೆ ತಮ್ಮ ಅಭಿಪ್ರಾಯವನ್ನು ಪ್ರಕಟಗೊಳಿಸುತ್ತಿದ್ದಾರೆ. ಹೊಸದಾಗಿ ಗ್ರಂಥವನ್ನು ಬರೆಯುತ್ತಿರುವ ವಿದ್ವಾಂಸರಿಗೆ ತಕ್ಕ ಪ್ರೋತ್ಸಾಹವನ್ನು ಕಲ್ಪಿಸುವದೂ ಸಂಸ್ಕೃತಗ್ರಂಥಗಳ ಮಾರಾಟದ ವಿಕ್ರಯಸ್ಥಾನಗಳು ಏರ್ಪಡುವದೂ ಅವಶ್ಯವೆಂದು ಅನೇಕರು ಹೇಳುತ್ತಿದ್ದಾರೆ.

ಆದರೆ ಇದಕ್ಕಿಂತಲೂ ಹೆಚ್ಚಿನ ಕಾರ್ಯವೊಂದಿದೆ. ಸಂಸ್ಕೃತವಾಙ್ಮಯದಲ್ಲಿ ಲೌಕಿಕವಿಚಾರದ ವಿಷಯಗಳಿಗೇನೂ ಕಡಿಮೆಯಿಲ್ಲಷ್ಟೆ. ಅವುಗಳಲ್ಲಿ ವೈದ್ಯಷ್ಟೆ, ಸಂಗೀತ, ಜ್ಯೋತಿಷ- ಇವು ಮುಖ್ಯವಾಗಿವೆ; ಆದರೆ **ಸಂಸ್ಕೃತಭಾಷೆಯಲ್ಲಿ ಹುದುಗಿರುವ ಮುಖ್ಯವಿದ್ಯೆಯು ಅಧ್ಯಾತ್ಮವಿದ್ಯೆ. ಈ ವಿಷಯಗಳ ಪರಿಚಯವನ್ನು ಜನಸಾಮಾನ್ಯಕ್ಕೆ ಮಾಡಿಕೊಡುವ ಪ್ರಯತ್ನವು ಸಾಗುವದು ಅತ್ಯವಶ್ಯವಾಗಿದೆ.** ಸಂಸ್ಕೃತಮೂಲದ ಸಮೇತ ದೇಶಭಾಷೆಗಳಿಗೆ ಆ ವಿಚಾರದ ಗ್ರಂಥಗಳನ್ನು ಅನುವಾದ ಮಾಡಿಸಿ ಪ್ರಕಟಿಸುವ ಕಾರ್ಯವು ಒಂದು ಉದಾರದಾನಯಜ್ಞವಾದೀತು. ನಮ್ಮ ದೇಶದ ಸಿರಿವಂತರು ಈ ಕಾರ್ಯವನ್ನು ಹೆಚ್ಚಿಸಿದಷ್ಟೂ ಸಂಸ್ಕೃತದಲ್ಲಿ ಜನರಿಗೆ ಸವಿಯುಂಟಾದೀತು.

ವಿಶೇಷವಾಗಿ ಅಧ್ಯಾತ್ಮವಿಷಯಕವಾದ- ಕರ್ಮ, ಉಪಾಸನೆ, ಜ್ಞಾನ- ಈ ಎಲ್ಲಾ ವಿಷಯಗಳ ತಿಳಿವಳಿಕೆಯನ್ನು ಕೊಡುವ- ಹೊಸ ಸಂಸ್ಕೃತಗ್ರಂಥಗಳನ್ನು ಚಿಕ್ಕಚಿಕ್ಕ ಸುಲಭವಾಕ್ಯಗಳಿಂದ ಬರೆಯಿಸಿ ಅವುಗಳ ಅನುವಾದವನ್ನು ಜೊತೆಯಲ್ಲಿಯೇ ಪ್ರಕಟಿಸಿದರೆ ಜನರಿಗೆ ಸಂಸ್ಕೃತ- ಸಂಸ್ಕೃತಿಪ್ರಚಾರಗಳೆರಡೂ ಏಕಕಾಲಕ್ಕೆ ಆದಾವು. ಈ

ಕಾರ್ಯದಲ್ಲಿ ಅಧ್ಯಾತ್ಮಪ್ರಕಾಶಕಾರ್ಯಾಲಯವಾದರೂ ತೊಡಗುವಂತೆ ಮಹಾಜನರು ಪ್ರೋತ್ಸಾಹಿಸಿದರೆ ಆತ್ಮಪ್ರೇಮ, ಸಂಸ್ಕೃತಭಾಷಾಪ್ರೇಮ, ಸಂಸ್ಕೃತಿ ಪ್ರೇಮ- ಇವುಗಳ ಮೂಲವನ್ನು ಬೆಳೆಯಿಸಿಕೊಳ್ಳಬಹುದೆಂದು ನನಗೆ ತೋರುತ್ತದೆ. "**ಅಧ್ಯಾತ್ಮಪ್ರಕಾಶ**" ಪತ್ರಿಕೆಯ ವಾಚಕರು ಇತ್ತಕಡೆ ಮನಸ್ಸು ಹಾಕುವರೆ?

* * * * *

# 48. ಸಂಸ್ಕೃತಕ್ಕೆ ಸ್ಥಾನವುಂಟೆ?

ಭಾಷೆಗೆ ಅನುಗುಣವಾಗಿ ದೇಶಗಳ ವಿಭಾಗವು ಸಂನಿಹಿತವಾಯಿತು. ಜನರಿಗೆ ತಮ್ಮತಮ್ಮ ತಾಯಿನುಡಿಯಿಂದ ಮಾತನಾಡುವದು, ಬರೆಯುವದು, ಅಭಿಪ್ರಾಯವಿನಿಮಯಮಾಡುವದು- ಇವುಗಳಿಗೆ ಸೌಕರ್ಯವು ಹೆಚ್ಚುವದು; ನಮ್ಮ ಅಭ್ಯುದಯಕ್ಕೆ ಅವಕಾಶವು ದೊರಕುವದು.

ಆದರೂ ನಾವೆಲ್ಲರೂ ಭಾರತದೇಶದ ನಾಗರಿಕರೆಂಬುದನ್ನು ಮರೆಯುವಂತಿಲ್ಲಷ್ಟೆ. ಭರತಖಂಡಕ್ಕೆ ಒಂದೇ ರಾಷ್ಟ್ರನಿಯಮವು ಘಟಕವಾಗಿದೆ ಎಂಬುದಿಷ್ಟೇ ನಮ್ಮಗಳ ಒಗ್ಗಟ್ಟಿಗೆ ಕಾರಣವೋ? ಮತ್ತೆ ಯಾವದಾದರೂ ಅಸಾಧಾರಣವಾದ ಸಂಘಟಕವು ಇದೆಯೊ? ಈ ಸಮಯದಲ್ಲಿಯೇ ನಮ್ಮ ಕೇಂದ್ರಸರಕಾರದವರು ಸಂಸ್ಕೃತಾಭ್ಯಾಸವನ್ನು ಅಭಿವೃದ್ಧಿಗೊಳಿಸುವ ಸದುದ್ದೇಶದಿಂದ ಒಂದು ಸಮೀಕ್ಷಕಸಮಿತಿಯನ್ನು ಏರ್ಪಡಿಸಿರುವದು ನಮಗೆಲ್ಲ ವಿಚಾರಪ್ರಚೋದಕ ವಾಗಿರುತ್ತದೆ. ಸಂಸ್ಕೃತಕ್ಕೆ ನಮ್ಮಲ್ಲಿ ಯಾವ ಸ್ಥಾನವನ್ನು ಕೊಡಬೇಕು?- ಎಂಬುದೊಂದು ದೊಡ್ಡ ಪ್ರಶ್ನೆಷ್ಟೆ.

ದೇಶಭಾಷೆಗಳಲ್ಲಿ ಪ್ರೀತಿಯು ಹೆಚ್ಚಬೇಕೆಂಬ ಮಾತಿಗೆ ಎರಡಿಲ್ಲಷ್ಟೆ. ಆದರೆ ಆ ಭಾಷೆಗಳಿಗೆಲ್ಲ ಒಂದು ಬಗೆಯ ಏಕತ್ವವನ್ನು ಕೊಟ್ಟುಷ್ಟೆ, ನಮ್ಮ ವಾಙ್ಮಯಗಳೆಲ್ಲ ಒಂದಾನೊಂದು ಗೊತ್ತಾದ ದಿಶೆಯಲ್ಲಿ ಬೆಳೆಯುವಂತೆ ಮಾಡಿರುವ ಸಂಸ್ಕೃತವನ್ನು ಅಸಡ್ಡೆಮಾಡಿದರೆ ಬೇರನ್ನು ಮರೆತು ಕೊಂಬೆಗಳಿಗೆ ನೀರೆರೆದಂತೆ ಆದೀತು.

ಸಂಸ್ಕೃತವು ವೈದಿಕಕರ್ಮದ ಭಾಷೆ, ಬ್ರಾಹ್ಮಣರ ಭಾಷೆ- ಎಂಬುದೊಂದು ಸಂಕುಚಿತದೃಷ್ಟಿಯುಂಟು. ಆದರೆ ನಮ್ಮ ಸಮಾಜಕ್ಕೆ ಒಂದು ಸಾಂಘಿಕಶಕ್ತಿಯನ್ನು ಕೊಟ್ಟ ಭಾಷೆ, ಆಧ್ಯಾತ್ಮಿಕವಿಚಾರಗಳ ತವರುಮನೆಯಾದ ಭಾಷೆ ಯಾವದು? ಸಂಸ್ಕೃತದಲ್ಲಿ

ಅನೇಕಶಾಸ್ತ್ರಗಳಿವೆ; ನಮ್ಮ ಆಧ್ಯಾತ್ಮಿಕಸಂಸ್ಕೃತಿಯನ್ನು ಉನ್ನತಿಗೊಳಿಸುವ ಪುರಾಣ, ಇತಿಹಾಸ, ಧರ್ಮಶಾಸ್ತ್ರಗಳಿವೆ. ಇಂಡಿಯ ದೇಶದ ಪುರಾತನತತ್ತ್ವಶಾಸ್ತ್ರಗಳನ್ನು ತಿಳಿದುಕೊಳ್ಳುವ ಕುತೂಹಲಗಳಿಗೆ ಮಾತ್ರ ಸಂಸ್ಕೃತವು ಪ್ರಯೋಜನಕರವೆಂಬಂತಿಲ್ಲಷ್ಟೆ. ಪ್ರಪಂಚದಲ್ಲಿ ಎಲ್ಲೆಲ್ಲಿಯೂ ತಲೆಯೆತ್ತಿ ಮೆರೆಯುತ್ತಿರುವ ಚಾರ್ವಾಕವಾದಕ್ಕೆ ದಿವ್ಯೌಷಧ ಯು ಸಂಸ್ಕೃತಭಾಷೆಯ ಮೂಲಕ ಎಲ್ಲರಿಗೂ ಸಿಕ್ಕುವ ಸಂಭವವಿದೆ.

ಪರಮಾತ್ಮನು ಎಲ್ಲಾ ಮನುಷ್ಯರಿಗೂ ಎಲ್ಲಾ ಪ್ರಾಣಿಗಳಿಗೂ ಆತ್ಮನು; ಆತನಲ್ಲಿ ನಾವೆಲ್ಲರೂ ಒಂದಾಗಿರುವೆವು. ಆದ್ದರಿಂದ ರಾಗದ್ವೇಷಾದಿಗಳಿಗೆ ಕಾರಣವಿಲ್ಲ-ಎಂಬ ಅಮೋಘಸಂದೇಶವು ಸಂಸ್ಕೃತದಲ್ಲಿಯೇ ಇಂದಿಗೂ ಜೀವಂತವಾಗಿ ದೊರಕುತ್ತದೆ. ಆ ಭಾಷೆಯನ್ನು ನಾವೆಲ್ಲರೂ ನಮ್ಮದಾಗಿ ಮಾಡಿ ಇಹಪರಸುಖ ಗಳನ್ನು ಹೆಚ್ಚಿಸಿಕೊಳ್ಳುವ ಸದಿಚ್ಛೆಯು ನಮ್ಮೆಲ್ಲರಲ್ಲಿಯೂ ಮೊಳೆಯಲಿ !

* * * * *

# ಸಂಸ್ಕೃತವೂ ಸಂಸ್ಕೃತಿಯೂ

## ಭಾಗ - 3

## 49. ಸಂಸ್ಕೃತವೂ ಹಿಂದಿಯೂ

**ಶ್ರೀಯುತ ಟಿ.ಕೆ. ಕೃಷ್ಣಸ್ವಾಮಿ ಅಯ್ಯರ್, ಎಂ.ಎ.,**
**ಆಚಾರ್ಯ, ಸಂಸ್ಕೃತ ಪ್ರೊಫೆಸರ್, ಡಿ.ಎಚ್.ಎಸ್.ಕೆ. ಕಾಲೇಜು,**
**ದಿಬ್ರೂಘರ್, ಅಸ್ಸಾಮ್**[1]

ಭಾರತದ ಬೇರೆಬೇರೆಯ ಸಂಸ್ಥಾನಗಳ ಒಗ್ಗಟ್ಟನ್ನು ಎಲ್ಲರ ಯೋಗಕ್ಷೇಮಕ್ಕೆ ಉಪಯೋಗಿಸಬಹುದಾದರೆ ಸಂಸ್ಕೃತದ್ವಾರದಿಂದ ಮಾತ್ರವೇ.

ಪೋಷಕಮಾತೆಯಾದ ಸಂಸ್ಕೃತದೊಡನೆ ಇರುವ ಹಿಂದೀಸಂಸ್ಥಾನಗಳೂ ಸಂಸ್ಕೃತವಿಲ್ಲದೆ ಎರವಾಗಿ ತಂದ ಹಿಂದೀತರಸಂಸ್ಥಾನಗಳೂ ಭಾರತದ ಒಗ್ಗಟ್ಟಿಗೊಂದು ಶಂಕುಸ್ಥಾನವಾಗಿದ್ದಾವು, ಪರಸ್ಪರದ್ವೇಷವನ್ನೂ ವೈಮನಸ್ಯವನ್ನೂ ತಂದುಕೊಂಡಾವು.

ನಾನು ಹಿಂದೀ ಪದವೀಪರೀಕ್ಷೆಗಳಲ್ಲಿ ಉತ್ತೀರ್ಣನಾದದ್ದು 1932ರಲ್ಲಿ; ವಾರಾಣಾಸಿಯಲ್ಲಿ ಒಂಬತ್ತುವರ್ಷಗಳು ವಿದ್ಯಾರ್ಥಿಯಾಗಿದ್ದೆ. 1933ರಿಂದ ಇಂದಿನವರೆಗೂ ಉತ್ತರದಲ್ಲಿಯೇ ಇದೇನೆ. ಆದರೆ ಕೇರಳಕ್ಕೆ ಹೋದಾಗ ನಮ್ಮವರು ಯಾರಾದರೂ ಹಿಂದಿಗ್ರಂಥವನ್ನು ತಂದರೆ ನಾನು ಕಿಡಿಕಿಡಿಯಾಗುತ್ತೇನೆ. ಅಚ್ಚರಿಯೇನೂ ಅಲ್ಲ. ಉತ್ತರದಲ್ಲಿ ಕಾನ್ಪುರ ಅಥವಾ ಲಕ್ನೋದವರು, ದಿಬ್ರೂಘರ್ ಅಥವಾ ಕಲಕತ್ತೆಯವರು ಮನೆಯಲ್ಲಿ ಮಕ್ಕಳು ತಮಿಳನ್ನೋ ತೆಲುಗನ್ನೋ ಓದುವದನ್ನು ಸಹಿಸಿಕೊಳ್ಳುವವರು ಎಷ್ಟುಮಂದಿ ಇದಾರೆ?

* * * * *

ಭಾಷೆ ಎಂಬುದು ಬ್ರಹ್ಮಸ್ವವೇ ಹೊರತು ಸರ್ವಸ್ವವಲ್ಲ. ಆದ್ದರಿಂದ ಅಕ್ಷರಜ್ಞರು, ವಿಜ್ಞಾನಶಾಸ್ತ್ರಜ್ಞರು, ಬುದ್ಧಿಜೀವಿಗಳು, ಶಿಕ್ಷಣಶಾಸ್ತ್ರಜ್ಞರು- ಇಂಥವರಿಗೇ ಭಾರತ ಒಕ್ಕೂಟದ ಭಾಷಾಪ್ರಶ್ನೆಯನ್ನು ಬಿಡಿಸುವದರಲ್ಲಿ ಸ್ವಾತಂತ್ರ್ಯವನ್ನು ಕೊಡತಕ್ಕದು ಯುಕ್ತ.

* * * * *

---

1. ಇವರು ಜುಲೈ 5ರಂದು ಕೇಂದ್ರ ಸರಕಾರದ ವಿದ್ಯಾಭ್ಯಾಸದ ಮಂತ್ರಿಯವರಿಗೆ ಬರೆದ ಪತ್ರದ ಭಾಗಗಳು ತಾ॥ 15.8.1963ರ ಟ್ರೂಥ್ ಪತ್ರಿಕೆಯಿಂದ.

ಹಿಂದಿಗೆ ಬಹುಜನಮತವಿದೆಯಂತೆ; ಅದು ಇಂಡಿಯದಲ್ಲೆಲ್ಲ ತನ್ನ ತಂತಿಗಳನ್ನು ಹರಡುತ್ತಿದೆ. ವರ್ತಮಾನವನ್ನು ಕಳುಹಿಸುವ ಅಥವಾ ವಿದ್ಯುಚ್ಛಕ್ತಿಯ ವಾಹಕಗಳಾದ ತಂತಿಗಳು ಅವಶ್ಯವೆನಿಸಿದ್ದರೂ ಅವುಗಳಲ್ಲಿ ಯಾರೊಬ್ಬರಿಗೂ ಪ್ರೇಮವಿರುವದಿಲ್ಲ. ಸಂಸ್ಕೃತವು ಭಾರತದ ಶುದ್ಧರಕ್ತ, ಪ್ರಾಣವಾಯು, ಮೆದುಳು. ಪರದೇಶದ ಭಾಷೆ ನಮ್ಮನ್ನಾಳುವದು ಹೇಗೆ ನಮಗೆ ಬೇಡವೋ ಹಾಗೆಯೇ ನಮಗೆ ಹಿಂದಿಯು ಹಿಂದೀತರ ಸಂಸ್ಥಾನಗಳನ್ನಾಳುವದು ಬೇಡ.

ನಮ್ಮ ಸ್ಕೂಲುಗಳಲ್ಲಿ ಸಂಸ್ಕೃತವೇ ತೃತೀಯಭಾಷೆಯೆಂದು ನಾವು ಸಂಕಲ್ಪಿಸಿಬಿಟ್ಟರೆ ಹತ್ತುಹದಿನೈದುವರ್ಷಗಳೊಳಗಾಗಿ ನಮಗೆ ದೊರಕುವ ಸರಕಾರಿಯ ಭಾಷೆಯ ವಿಷಯಕ್ಕೆ ನಮಗೆ ಹೆಮ್ಮೆಯುಂಟಾದೀತು. ಭೂಮಂಡಲದಲ್ಲೆಲ್ಲ ಪೂಜ್ಯತೆ ಬಂದೀತು. U.N.O (ಯೂ.ಎನ್.ಓ) ದಂಥ ಸಭೆಗಳಲ್ಲಿ ಸಂಸ್ಕೃತವು ಕಿವಿಗೆ ಬೀಳುವಂಥ ದಿನವು ಬರಲಿ!- ಎಂಬುದು ನನ್ನ ಪ್ರಾರ್ಥನೆ. ಹಿಂದಿಯನ್ನು ಕೆಳಕ್ಕೆ ತಳ್ಳಿ ಸಂಸ್ಕೃತವನ್ನು ಮೇಲಕ್ಕೆತ್ತಿದ್ದರಿಂದ ಕಾಲದ, ಅಥವಾ ಧನದ ಅಥವಾ ಜ್ಞಾನದ ಅಥವಾ ಕಾರ್ಯದಕ್ಷತೆಯ, ಸಂಸ್ಕೃತಿಯ ಅಥವಾ ವಿಜ್ಞಾನದ ವಿಷಯಕ್ಕೆ ನಮಗೆ ಯಾವ ನಷ್ಟವೂ ಆಗುವಂತಿಲ್ಲ. ಕ್ರಿಸ್ತಿಯನ್ನರು, ಮುಸಲ್ಮಾನರು, ಅಥವಾ ಡಿ.ಎಂ.ಕೆ ಸಂಘದವರು- ಇವರಲ್ಲಿ ಯಾರೊಬ್ಬರಿಗೂ ಸಂಸ್ಕೃತವನ್ನು ಸರಿಗಟ್ಟುವ ಸ್ವಂತಭಾಷೆಯಿರುವದಿಲ್ಲ. ನಮ್ಮ ಮಕ್ಕಳಿಗೆ ಹಿಂದಿಸೀಸೆಯ ಹಾಲುಕುಡಿಸುವದನ್ನು ಬಿಡೋಣ, ಭಾರತಾಂಬೆಯ ಸ್ತನ್ಯಪಾನವನ್ನು ಮಾಡಿಸೋಣ.

ಸುಮಾರು ಸಾವಿರವರ್ಷಗಳ ಹಿಂದೆ ಕೇರಳದಿಂದ ಹೊರಟು ಭಾರತದಲ್ಲೆಲ್ಲ ಸಂಚರಿಸಿದ ಶಂಕರಾಚಾರ್ಯರು ಉಪದೇಶಿಸಿದ್ದೂ ಮತಪ್ರಚಾರವನ್ನು ಮಾಡಿದ್ದೂ ಚರ್ಚಿಸಿದ್ದೂ ಗ್ರಂಥರಚನೆಯನ್ನು ಮಾಡಿದ್ದೂ ತಮಿಳಿನಲ್ಲಲ್ಲ, ಮಲೆಯಾಳಿಯಲ್ಲಲ್ಲ; ಪರಿಶುದ್ಧವಾದ ಪ್ರಾಚೀನ ಸಂಸ್ಕೃತದಲ್ಲಿ. ಇಸ್ರೆಲ್‌ದೇಶದ ಉದಾಹರಣೆಯನ್ನು ಕಂಡುಕಂಡೂ ಸಂಸ್ಕೃತವನ್ನು ಅಸಡ್ಡೆಮಾಡುವದಕ್ಕೆ ನಮಗೆ ನಾಚಿಕೆಯಿಲ್ಲವಲ್ಲ!

ದಕ್ಷಿಣದವರು-ಉತ್ತರದವರು ನಮ್ಮದು ಎಂದುಕೊಳ್ಳುತ್ತಿರುವ- ಸಂಸ್ಕೃತವನ್ನು ಹಿಂದೆ ಕಲಿತರು, ಅದರಲ್ಲಿ ಕೃಷಿಮಾಡಿ ಪೋಷಿಸಿ ಅದಕ್ಕಾಗಿ ಸರ್ವಸ್ವವನ್ನೂ ತೆತ್ತರು; ಇಂದೂ ಅದನ್ನೇ ಭಕ್ತಿಭಾವದಿಂದ ಕಾಣುತ್ತಿದಾರೆ. ಸಂಸ್ಕೃತದಲ್ಲಿ ಕೃಷಿಮಾಡಿದ್ದ ದಕ್ಷಿಣದವರು ತಮ್ಮ ತಮ್ಮ ಭಾಷೆಗಳನ್ನೇನೂ ಕೈಬಿಡಲಿಲ್ಲ. ಸಂಸ್ಕೃತದಿಂದ ಅದನ್ನೂ ಅದರ ಸಂಸ್ಕೃತಿಯನ್ನೂ ಪೋಷಿಸಿದರು. ಆದರೆ ಉತ್ತರದಲ್ಲಿ ಪರಕೀಯರ

ಧಾಳಿಯಿಂದ ಮೂಲಭಾಷೆಯಮೇಲೆ ಹಿಡಿತವು ತಪ್ಪಿತು. ಅವರು ಈಚೆಗೆ 'ಹಿಂದಿ' ಎಂಬ ಹೆಸರಿನಿಂದ ಹಬ್ಬುತ್ತಿರುವ ಸಂಕರಭಾಷೆಯನ್ನು ಹೆತ್ತರು!

* * * * *

ಒಮ್ಮೆ ಸಂಸ್ಕೃತವು ನಮ್ಮ ಪರಸ್ಪರಸಂಬಂಧಕಭಾಷೆಯಾಗಿತ್ತು. ಈಗಲೂ ಆಗಿದೆ. ಅದು ಬುದ್ಧಿಜೀವಿಗಳ ಮತ್ತು ರಾಷ್ಟ್ರಾಕಕಾರಿಗಳ ಭಾಷೆಯಾಗಿತ್ತು. ಅದನ್ನು ಈಗಲೂ ಉಳಿಸಿಕೊಳ್ಳುವದಕ್ಕೆ ಯತ್ನಿಸೋಣ!

* * * * *

## 50. ಸಂಸ್ಕೃತಸಾಹಿತ್ಯದಲ್ಲಿ ಸಾರ್ವಲೌಕಿಕದೃಷ್ಟಿ

**-ಮಹಾಮಹೋಪಾಧ್ಯಾಯ ಎನ್. ರಂಗನಾಥಶರ್ಮಾ**

ಎಲ್ಲ ಜನರಿಗೆ ಸಂಬಂಧಪಟ್ಟದ್ದು ಸಾರ್ವಲೌಕಿಕ. ಈ ಲೋಕದ ಇಹಜೀವನಕ್ಕೆ ಎಂದರೆ ಮಾನವನ ಸುಖೋಪಭೋಗಕ್ಕೆ ಸೇರಿದ್ದು ಲೌಕಿಕದೃಷ್ಟಿ . ಸಂಸ್ಕೃತಸಾಹಿತ್ಯದಲ್ಲಿ ಎಲ್ಲ ಜನರ ಇಹಲೋಕದ ಸುಖೋಪಭೋಗಕ್ಕೆಂದು ವಿರಚಿತವಾದದ್ದು ಲೌಕಿಕ ಸಾಹಿತ್ಯ. ಪಾರಮಾರ್ಥಿಕಸುಖವನ್ನು ಬಯಸುವವರಿಗಾಗಿ ಪ್ರಸ್ತುತವಾಗಿರುವದು ಮತಧರ್ಮಕ್ಕೆ ಸಂಬಂಧಪಟ್ಟ ಧಾರ್ಮಿಕ ವೈದಿಕಸಾಹಿತ್ಯ. ಸಂಸ್ಕೃತದಲ್ಲಿ ಎರಡೂ ಉದ್ದೇಶದ ಜನರಿಗೆಂದು ಅಪಾರಸಾಹಿತ್ಯವು ಸೃಷ್ಟಿಯಾಗಿದೆ- ಎಂಬುದು ಸ್ಪಷ್ಟವಾಗಿರುವ ವಿಚಾರ.

**ಸರ್ವಸ್ತರತು ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತು ।**
**ಸರ್ವಸ್ಸುಖಮವಾಪ್ನೋತು ಮಾ ಕಶ್ಚಿತ್ ದುಃಖಭಾಗ್ ಭವೇತ್ ॥**

ಎಲ್ಲರೂ ಕಷ್ಟಗಳನ್ನು ದಾಟಲಿ; ಎಲ್ಲರೂ ಒಳಿತನ್ನು ಕಾಣಲಿ. ಎಲ್ಲರೂ ಸುಖವನ್ನು ಪಡೆಯಲಿ; ಮತ್ತು ಯಾರು ಕೂಡ ದುಃಖವನ್ನು ಅನುಭವಿಸುವಂತೆ ಆಗುವದು ಬೇಡ- ಎಂಬುದು ಮೇಲಿನ ಶ್ಲೋಕದ ಭಾವಾರ್ಥ. ''**ಕೃಣ್ವಂತೋ ವಿಶ್ವಮಾರ್ಯಮ್**''ಎನ್ನುತ್ತದೆ- ಪೂಜ್ಯವಾದ ವೇದ. ಈ ಜಗತ್ತನ್ನೇ

1. ಬೆಂಗಳೂರು ವೈಯಾಲಿಕಾವಲ್ ಗೀತಗೋವಿಂದ ಸಂಘದವರು ಪ್ರಕಟಿಸಿದ 'ಜಯದೇವ' ಎಂಬ ರಜತಮಹೋತ್ಸವ ಸಂಚಿಕೆಯಿಂದ ಆಯ್ದಲೇಖನ.

ಆರ್ಯವಾಗಿಸಲು ಮಹರ್ಷಿಗಳು ತೊಡಗಿದರು. ಆರ್ಯ ಎಂದರೆ ಪೂಜ್ಯ, ಗೌರವಾರ್ಹ, ಸುಸಂಸ್ಕೃತ-ಎಂದರ್ಥ. ಮನುಷ್ಯನಿಗೆ ಪೂಜ್ಯತೆ ಬರುವದು ನಡೆವಳಿಕೆಯಿಂದ. ಉತ್ತಮನಡತೆ, ವಿದ್ಯೆ ಮತ್ತು ಐಶ್ವರ್ಯ-ಇವು ಗೌರವವನ್ನು ತರುತ್ತದೆ. ಮನುಮಹರ್ಷಿಯು ಹೀಗೆ ಹೇಳಿದ್ದಾನೆ.

**ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ ।**
**ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ ॥** ಮನು. 2-20

ಈ ಭಾರತದೇಶದಲ್ಲಿ ಜನ್ಮತಳೆದ ತಿಳಿವಳಿಕೆಯುಳ್ಳವನ ಬಳಿಯಲ್ಲಿ ವಿಶ್ವದ ಎಲ್ಲ ಜನರೂ ತಮ್ಮ ತಮ್ಮ ನಡೆವಳಿಕೆಯನ್ನು ಕಲಿಯಬೇಕು- ಎಂಬುದು ಶ್ಲೋಕದ ಅಭಿಪ್ರಾಯ.

ವಿಶ್ವವನ್ನು ಆರ್ಯವನ್ನಾಗಿಸುವದು ಮತ್ತು ಎಲ್ಲ ಮಾನವರೂ ತಮ್ಮ ಶೀಲವನ್ನು ಕಲಿಯಬೇಕು- ಎಂಬ ಮಾತುಗಳು ಸಂಸ್ಕೃತಭಾಷೆಯನ್ನು ಬಳಸುವ ಜನರ 'ಸರ್ವಲೋಕಹಿತೈಷಿಣೀ' ಮಂಗಳ ದೃಷ್ಟಿಯನ್ನು ಸಂಕ್ಷೇಪವಾಗಿ ಪ್ರತಿಪಾದಿಸಿದೆ, ಆದ್ದರಿಂದಲೆ ಈ ಭಾರತಭೂಮಿಯಲ್ಲಿ ಜನ್ಮವೆತ್ತಿದ ಮಹರ್ಷಿಗಳೂ ಮಹಾಕವಿಗಳೂ ವಿದ್ವಾಂಸರೂ ಸಂಸ್ಕೃತ ಭಾಷೆಯಲ್ಲಿ ಅದೆಷ್ಟೋ ಸಾವಿರವರ್ಷಗಳಿಂದಲೂ ಅಸಂಖ್ಯಾತ ಗ್ರಂಥರಾಶಿಯನ್ನು ಬಹಳ ಪರಿಶ್ರಮವನ್ನು ವಹಿಸಿ ವಿರಚಿಸಿ ಸಂಸ್ಕೃತಸಾಹಿತ್ಯವನ್ನು ವಿಸ್ತಾರಗೊಳಿಸಿದರು. ಇಂಥ ಸಂಸ್ಕೃತಸರಸ್ವತಿಯು ಅತಿಪ್ರಾಚೀನವಾದುದು; ವಿಪುಲವಾದ ವಾಙ್ಮಯವುಳ್ಳದ್ದು, ಮತ್ತು ಅನಾದಿಕಾಲದಿಂದಲೂ ಭರತಖಂಡದಲ್ಲಿ ಗಂಗಾನದಿಯಂತೆ ಹರಿಯುತ್ತಿದ್ದು ತನ್ನನ್ನು ಆಶ್ರಯಿಸಿಕೊಂಡಿರುವವರನ್ನು ಪವಿತ್ರಗೊಳಿಸುತ್ತ ಕಂಗೊಳಿಸುತ್ತಿದೆ. ಹೀಗಿದ್ದರೂ ಭಾರತೀಯರೇ ಆದ ಕೆಲವು ಜನರು ಇದರ ಮಹಿಮೆಯನ್ನರಿಯದೆ **'ಸಂಸ್ಕೃತಭಾಷೆಯಲ್ಲಿ ಏನಿದೆ? ಸಂಸ್ಕೃತವನ್ನು ಏಕೆ ಕಲಿಯಬೇಕು?'** ಎಂದು ಕೇಳುತ್ತ ಮೆರೆಯುತ್ತಿದ್ದಾರೆ. ಸಂಸ್ಕೃತದಲ್ಲಿ ಬರಿಯ ಜಾತಿಮತಗಳಿಗೆ ಸಂಬಂಧಪಟ್ಟ ನಿಯಮಗಳು, ದೇವದಾನವರ ಕಥೆಗಳು, ಹಿಂದಿನಕಾಲಕ್ಕೆ ಸಂಬಂಧಿಸಿದ ಅದಾವುದೋ ಪೌರಾಣಿಕಕಲ್ಪಿತ ಕಥೆಗಳು ಇರಬಹುದು. ಮದುವೆ- ಮತ್ತಿತರ ಸಂದರ್ಭಗಳಲ್ಲಿ ಪುರೋಹಿತರು ಉಚ್ಚರಿಸುವ ಅರ್ಥವಾಗದ ಅಥವಾ ಅರ್ಥವಿಲ್ಲದ ಕೆಲವು ಮಂತ್ರಗಳಿರಬಹುದು. ಇಂಥ ಈ ಭಾಷೆಯಿಂದ ಇಂದು ನಮಗೆ ಆಗ ಬೇಕಾದದ್ದೇನು? ಎಂದು ವಾದಹೂಡುತ್ತಾರೆ. 'ಇದಾದರೊ ಪುರೋಹಿತರ ಭಾಷೆ, ಬ್ರಾಹ್ಮಣಜಾತಿಯವರ ಭಾಷೆ, ಬರಿಯ ಮೂಢನಂಬಿಕೆಯನ್ನು ಪೋಷಿಸುವದು ಇದು' ಎಂದು ಅವಹೇಳನ ಮಾಡುತ್ತಾರೆ.

ಆದ್ದರಿಂದ ಇಲ್ಲಿ ಈಗ ಸಂಕ್ಷೇಪವಾಗಿ ಸಮಾಧಾನದಿಂದ ಉತ್ತರವೀಯಬೇಕು, 'ಸಂಸ್ಕೃತವು ಪುರೋಹಿತರ ಭಾಷೆ, ಬ್ರಾಹ್ಮಣರ ಸ್ವತ್ತು ಅದು' ಎಂದೇನು ಹೇಳುವರೋ ಈ ಮಿಥ್ಯಾಆರೋಪಕ್ಕೆ ಮೂಲದಲ್ಲಿರುವದು ಅಜ್ಞಾನ. ಇಂಥ ಅಭಿಪ್ರಾಯವನ್ನು ಸಮರ್ಥಿಸಲು ಯಾವ ಪ್ರಮಾಣವೂ ಇಲ್ಲ. ಅಲ್ಲದೆ ಇದಕ್ಕೆ ವ್ಯತಿರಿಕ್ತವಾಗಿ ಇದು ಸಾರ್ವಜನಿಕರ ಭಾಷೆ, ಮತ್ತು ಬರಿಯ ಜಾತಿಮತಗಳಿಗೆ ಅಂಟಿಕೊಂಡಿಲ್ಲದ್ದು- ಎನ್ನುವದಕ್ಕೆ ಅನೇಕ ಪ್ರಮಾಣಗಳು ಇವೆ. ಸಮಾಜದಲ್ಲಿ ಜನರು ಮಾತನಾಡುವ ನುಡಿಗೆ ತಾನೇ ನುಡಿ- ಎನ್ನುವದು? ನುಡಿಯೊಂದಕ್ಕೆ ಒಂದು ಜಾತಿಯ ಜೊತೆಗೆ ಸಂಬಂಧವಿರುತ್ತದೆಯೆಂದು ನಾವೆಂದೂ ಎಲ್ಲಿಯೂ ಕೇಳಿಲ್ಲ. ವಾಲ್ಮೀಕಿ ರಾಮಾಯಣದ ಫಲಶ್ರುತಿಯಲ್ಲಿ ಹೀಗೆ ಹೇಳಲಾಗಿದೆ:-

**ಪಠನ್ ದ್ವಿಜೋವಾಗೃಷಭತ್ವಮೀಯಾತ್**
**ಸ್ಯಾತ್ ಕ್ಷತ್ರಿಯೋ ಭೂಮಿಪತಿತ್ವಮೀಯಾತ್ ।**
**ವಣಿಗ್‌ಜನಃ ಪಣ್ಯಪತಿತ್ವಮೀಯಾತ್**
**ಜನಶ್ಚ ಶೂದ್ರೋಽಪಿ ಮಹತ್ತ್ವಮೀಯಾತ್ ॥**

ರಾಮಾಯಣವನ್ನು ಓದುತ್ತಿದ್ದರೆ- ಎಂಬುದು ಎಲ್ಲೆಡೆ ಅನುವಾದವಾಗುತ್ತದೆ. "ರಾಮಾಯಣವನ್ನು ಓದುವ ಶೂದ್ರನು ಹಿರಿಮೆಯನ್ನು ಹೊಂದುವನು" ಎಂದು ಇಲ್ಲಿ ಹೇಳಲಾಗಿದೆ. ವಾಲ್ಮೀಕಿರಾಮಾಯಣವನ್ನು ಬರೆದಿರುವದು ಸಂಸ್ಕೃತದಲ್ಲಿ. ಆದರೆ ಇದನ್ನು ಓದಲು ಎಲ್ಲರಿಗೂ ಅಧಿಕಾರವುಂಟು. ಮಹಾಭಾರತದಲ್ಲಿಯೂ ಸಹ ಹೀಗಿದೆ:-

**ಸ್ತ್ರೀ ಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।**
**ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥**

"ಹೆಂಗಸರೂ, ಶೂದ್ರರೂ ದ್ವಿಜಬಂಧುಗಳೂ ವೇದವನ್ನು ಸಾಕ್ಷಾತ್ತಾಗಿ ತಿಳಿಯಲಾರರು. ಆದ್ದರಿಂದ ಕೃಪೆಯಿಟ್ಟು ವ್ಯಾಸಮಹರ್ಷಿಗಳು 'ಭಾರತ'ವನ್ನು ಬರೆದು ಹೇಳಿದರು" ಎಂದು ತಿಳಿಸಿದೆ. ಶೂದ್ರಾದಿಗಳಿಗೆಂದೇ ಮಹಾಭಾರತವನ್ನು ಬರೆದದ್ದೆಂದು ಸ್ಪಷ್ಟವಾಗಿದೆ. ವಿಷ್ಣುಸಹಸ್ರನಾಮ ಸ್ತೋತ್ರದಲ್ಲಿಯೂ "ಯಾರು ಇದನ್ನು ದಿನವೂ ಕೇಳುವರೋ ಮತ್ತು ಸದಾ ಹೇಳುತ್ತಿರುವರೋ" ಎಂದು ಮೊದಲುಮಾಡಿ ಶೂದ್ರನು ಸುಖವನ್ನು ಹೊಂದುತ್ತಾನೆ ಎಂದು ಪೂರ್ಣಗೊಳಿಸಲಾಗಿದೆ. "ಜ್ಞಾನವನ್ನು ಪಡೆಯಲು ಎಲ್ಲರಿಗೂ ಅಧಿಕಾರವಿದೆ." "ತಿಳಿವಳಿಕೆಗೆ ಕೋಲಿನ ತಡೆ ಏನೂ ಇಲ್ಲ"

ಎಂದು ಶಂಕರಾಚಾರ್ಯರು ಹೇಳಿದ್ದಾರೆ. ನಾಲ್ಕನೆಯ ವರ್ಣದವನಾದರೂ ವಿದುರನು ಜ್ಞಾನಿಯಾಗಿದ್ದನು. ಧೃತರಾಷ್ಟ್ರನಿಗೆ ನೀತಿಯನ್ನು ಉಪದೇಶಿಸಿದನು- ಎಂಬುದು ಮಹಾಭಾರತದಲ್ಲಿ ಪ್ರಸಿದ್ಧವಾಗಿದೆ. ಅಲ್ಲಿಯೇ ಧರ್ಮವ್ಯಾಧನೆಂಬ ಮಾಂಸಮಾರಾಟಮಾಡುವ ಕಟುಕನೊಬ್ಬನು ಒಬ್ಬಾನೊಬ್ಬ ಬ್ರಾಹ್ಮಣನಿಗೆ ತತ್ತ್ವೋಪದೇಶ ಮಾಡಿದನೆಂದು ಹೇಳಲಾಗಿದೆ. ಭಾಗವತದ ಹತ್ತನೆಯ ಸ್ಕಂಧದಲ್ಲಿ ಪ್ರತಿಲೋಮದಿಂದ **ಕೀಳುಜಾತಿಯವಳನ್ನು ಮದುವೆಯಾದ್ದರಿಂದ** ಹುಟ್ಟಿದ ಶೂದ್ರನೊಬ್ಬನು ವ್ಯಾಸಮಹರ್ಷಿಗಳ ಶಿಷ್ಯನಾಗಿದ್ದನು. ಅವನಾದರೊ-

**ಋಷೇರ್ಭಗವತೋ ಭೂತ್ವಾ ಶಿಷ್ಯೋಽಧೀತ್ಯ ಬಹೂನಿ ಚ।**
**ಸೇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ ॥**

"ವ್ಯಾಸಮಹರ್ಷಿಗಳ ಶಿಷ್ಯನಾಗಿದ್ದು ಇತಿಹಾಸ, ಪುರಾಣ, ಧರ್ಮಶಾಸ್ತ್ರ ಇತ್ಯಾದಿಯೆಲ್ಲವನ್ನೂ ಚೆನ್ನಾಗಿ ಓದಿ ತಿಳಿದುಕೊಂಡಿದ್ದು ಬ್ರಾಹ್ಮಣರಿಗೆ ಪುರಾಣಗಳನ್ನು ಶ್ರವಣಮಾಡಿಸುತ್ತಿದ್ದನು" ಎಂದು ಹೇಳಲಾಗಿದೆ. ರೋಮಹರ್ಷರ ಮಗನಾದ ಉಗ್ರಶ್ರವಸನು ಸೂತಪುರಾಣಿಕನೆಂದೇ ಪ್ರಸಿದ್ಧನಾಗಿದ್ದಾನೆ.

ವ್ಯಾಕರಣಶಾಸ್ತ್ರದಲ್ಲಿಯಂತೂ ಮಹಾಭಾಷ್ಯವನ್ನು ಬರೆದ ಪತಂಜಲಿಯು ಸಂಸ್ಕೃತಶಬ್ದಗಳನ್ನು ಕುರಿತಂತೆ ಪ್ರಯೋಗದಲ್ಲಿಲ್ಲದ ಶಬ್ದಗಳೂ ಇವೆಯೇ? ಎಂಬ ಅನುಮಾನಕ್ಕೆ "ಈ ಎಲ್ಲಾ ಶಬ್ದಗಳೂ ಬೇರೆ ಬೇರೆ ಪ್ರದೇಶಗಳಲ್ಲಿ ಬಳಕೆಯಲ್ಲಿವೆ" ಎಂದು ಹೇಳಿ ಶಬ್ದವನ್ನು ಬಳಸುವ ಪ್ರದೇಶವು ವಿಸ್ತಾರವಾದದ್ದು, ಭೂಮಿಯಲ್ಲಿಯೇ ಏಳು ದ್ವೀಪಗಳಿವೆ, ಮೂರು ಲೋಕಗಳೂ ಇವೆಯಷ್ಟೆ!" ಎಂದು ಹೇಳಿರುತ್ತಾನೆ. ಸಂಸ್ಕೃತವು ಪುರೋಹಿತರ ಭಾಷೆಯಾಗಿದ್ದರೆ ಅದು ಹೇಗೆ ಸಪ್ತದ್ವೀಪಗಳನ್ನು ವ್ಯಾಪಿಸಿಕೊಳ್ಳುತ್ತಿತ್ತು? ಎಂಬುದನ್ನು ವಿಚಾರಮಾಡಬೇಕು.

ಸಂಸ್ಕೃತವು ಬ್ರಾಹ್ಮಣರ ಸ್ವತ್ತು ಎಂಬುದು ನಿಜವಾಗಿದ್ದಪಕ್ಷದಲ್ಲಿ ಬೌದ್ಧ ಮತೀಯರಾದ ಆರ್ಯದೇವ, ಭಾವಿವೇಕ, ಶಾಂತರಕ್ಷಿತ, ಧರ್ಮಕೀರ್ತಿ, ನಾಗಾರ್ಜುನ, ದಿಙ್ನಾಗ, ಚಂದ್ರಕೀರ್ತಿ-ಮುಂತಾದ ನೂರಾರು ಉದ್ದಾಮ ಪಂಡಿತರು ವಿಪುಲ ತರ್ಕದಿಂದ ಜಟಿಲವಾದ ಬೌದ್ಧದರ್ಶನ ಗ್ರಂಥಗಳನ್ನು ಸಂಸ್ಕೃತ ಭಾಷೆಯಲ್ಲಿ ಹೇಗೆ ಬರೆದರು? ಸಾವಿರಾರು ಬೌದ್ಧಮತೀಯ ಗ್ರಂಥಗಳು ಸಂಸ್ಕೃತದಿಂದ ಚೀನಿಭಾಷೆಗೆ ಅನುವಾದಗೊಂಡಿದ್ದಾದರೂ ಹೇಗೆ? ಜೈನಮತಸ್ಥರಾದ ಉಮಾಸ್ವಾತಿ, ಪೂಜ್ಯಪಾದ, ಹೇಮಂತಭದ್ರ, ಭಟ್ಟಾಕಳಂಕ, ಹರಿಭದ್ರ, ವಾದಿರಾಜ,

ಅಮೃತಚಂದ್ರಸೂರಿ, ಹೇಮಚಂದ್ರ-ಮೊದಲಾದ ಪ್ರಸಿದ್ಧ ಆಚಾರ್ಯರು ಸಂಸ್ಕೃತದಲ್ಲಿ ಬೌದ್ಧ-ಜೈನ ಗ್ರಂಥಗಳನ್ನು ಬರೆಯಲು ಸಮರ್ಥರಾದದ್ದಾದರೂ ಹೇಗೆ? ಅವೈದಿಕರಾದ ಲಾಕುಲ, ಕಾಲಾಮುಖ, ಪಾಶುಪತ- ಮುಂತಾದವರ ತಾಂತ್ರಿಕ ಗ್ರಂಥಗಳೂ ಸಹ ಸಂಸ್ಕೃತಭಾಷೆಯಲ್ಲಿ ಹೊರಬಂದದ್ದು ಹೇಗೆ?- ಎಂಬುದು ವಿಚಾರಣೀಯವಾಗಿದೆ. ಭಾರತೀಯರ ಸಂಸ್ಕೃತಭಾಷಾಮಯವಾದ ಜ್ಯೋತಿಷ ಶಾಸ್ತ್ರವು ಮ್ಲೇಚ್ಛರಲ್ಲಿ ನೆಲೆಗೊಂಡಿದೆ- ಎಂದು ವರಾಹಮಿಹಿರಾಚಾರ್ಯರು ಹೇಳಿದ್ದಾರೆ.

**ಮ್ಲೇಚ್ಛಾ ಹಿ ಯವನಾಸೇತೀಷು ಸಮ್ಯಕ್ ಶಾಸ್ತ್ರಮಿದಂ ಸ್ಥಿತಮ್ ।**
**ದ್ವಿಜವತ್ ತೇಽಪಿ ಪೂಜ್ಯಂತೇ ಕಿಂ ಪುನರ್ವೇದವಿದ್ ದ್ವಿಜಃ ॥**

ಮ್ಲೇಚ್ಛರೆಂದರೆ ಗ್ರೀಕರು, ಅವರಲ್ಲಿ ಈ ಶಾಸ್ತ್ರವು ರೂಪುಗೊಂಡಿದೆ. ಬ್ರಾಹ್ಮಣರಂತೆಯೇ ಅವರು ಗೌರವಿಸಲ್ಪಡುತ್ತಾರೆ- ಎಂದ ಮೇಲೆ ವೇದವನ್ನು ಬಲ್ಲ ಬ್ರಾಹ್ಮಣರ ಬಗ್ಗೆ ಹೇಳಬೇಕಾದದ್ದೇನು?- ಆಲ್‌ಬರೂನಿ, ಫೈಸಿ, ಅಬುಲ್‌ಫಸಲ್, ದಾರಾಷಿಕೊ ಮತ್ತಿತರರು ರಾಮಾಯಣ, ಮಹಾಭಾರತ, ಭಗವದ್ಗೀತೆ, ಪಂಚತಂತ್ರ, ಉಪನಿಷತ್ತು-ಮೊದಲಾದವುಗಳನ್ನು ಪಾರಸೀಭಾಷೆಗೆ ಅನುವಾದ ಮಾಡಿರುವದು ಇತಿಹಾಸಸಿದ್ಧ ಸಂಗತಿಯಾಗಿದೆ. ಹೀಗೆ ಇವೂ ಇನ್ನಿತರ ಪ್ರಮಾಣಗಳೂ ಎದ್ದುಕಾಣುತ್ತಿರುವಾಗ ಸಂಸ್ಕೃತವು ಪುರೋಹಿತರ ಭಾಷೆ, ಬ್ರಾಹ್ಮಣರ ಭಾಷೆ - ಎಂದು ಅರ್ಥವಿಲ್ಲದ, ಆಧಾರವಿಲ್ಲದ ಹರಟೆಗಳನ್ನು ತಿರಸ್ಕರಿಸಬೇಕೇ ಹೊರತು ಇವುಗಳಲ್ಲಿ ಹುರಳೇನೂ ಇಲ್ಲ.

ಆಯಿತು; ಸರಿ ಈಗ ಜಾತಿಮತಸಂಬಂಧವಿಲ್ಲದ ಮತ್ತು ಎಲ್ಲಾ ಜನರ ಹಿತಕ್ಕೆಂದೇ ಪ್ರವೃತ್ತವಾಗಿರುವ ಸಂಸ್ಕೃತಸಾಹಿತ್ಯದತ್ತ ಗಮನವನ್ನು ಹರಿಸೋಣ. ಸರ್ವರ ಹಿತವನ್ನೂ ಉದ್ದೇಶದಲ್ಲಿಟ್ಟುಕೊಂಡಿರುವ ಉದಾರಭಾವನೆಗಳುಳ್ಳ ಅನೇಕ ಮಾತುಗಳು ವೇದ, ಧರ್ಮಶಾಸ್ತ್ರ, ಕಾವ್ಯ, ಇತಿಹಾಸ, ಪುರಾಣಾದಿಗಳಲ್ಲಿ ಏನೇನು ಬಂದಿವೆಯೆಂಬುದನ್ನು ಅನೇಕ ವಿದ್ವಾಂಸರು ಈಗಾಗಲೆ ಈ ಸಭೆಯಲ್ಲಿ **ಎನ್. ಎಂ. ಕೆ ಕಾಲೇಜಿನಲ್ಲಿ ನಡೆದ ವಿಚಾರಗೋಷ್ಠಿಯಲ್ಲಿ ಚೆನ್ನಾಗಿ ಪ್ರತಿಪಾದಿಸಿದ್ದಾರೆ.** ನಾನು ಈಗ ಸರ್ವಜನಸುಖಕಾಮನೆಯಿಂದ, ಲೌಕಿಕಹಿತದೃಷ್ಟಿಯಿಂದ ನಮ್ಮ ಪೂರ್ವಜರು ಸಂಸ್ಕೃತ ಸಾಹಿತ್ಯದಲ್ಲಿ ಬರೆದಿರುವ ಗ್ರಂಥಗಳನ್ನು ನಿರೂಪಿಸಲು ಯಥಾಶಕ್ತಿ ಪ್ರಯತ್ನಿಸುವೆನು. ನಮ್ಮ ಪರಂಪರೆಯಲ್ಲಿ ಈ ಹದಿನೆಂಟು ವಿದ್ಯಾಸ್ಥಾನಗಳು ಅಂಗೀಕೃತವಾಗಿವೆ.

**ಅಂಗಾನಿ ವೇದಾಶ್ಚತ್ವಾರಃ ಮೀಮಾಂಸಾನ್ಯಾಯ ವಿಸ್ತರಃ ।**
**ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾಃ ಹ್ಯೇತಾಶ್ಚತುರ್ದಶ ॥**

ನಾಲ್ಕುವೇದಗಳು, ಆರುವೇದಾಂಗಗಳು, ಮೀಮಾಂಸೆ, ನ್ಯಾಯಶಾಸ್ತ್ರ ಮತ್ತು ಪುರಾಣಗಳು-ಎಂದು ಹದಿನಾಲ್ಕು ವಿದ್ಯೆಗಳನ್ನು ಹೇಳಿ-

**ಆಯುರ್ವೇದೋ ಧನುರ್ವೇದಃ ಗಾಂಧರ್ವಶ್ಚೇತಿ ತೇ ತ್ರಯಃ ।**
**ಅರ್ಥಶಾಸ್ತ್ರಂ ಚತುರ್ಥಂ ಚ ವಿದ್ಯಾ ಹ್ಯಷ್ಟಾದಶೈವ ತಾಃ ॥**

ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ನಾಲ್ಕನೆಯದಾಗಿ ಅರ್ಥಶಾಸ್ತ್ರ- ಹೀಗೆ ಇವು ಹದಿನೆಂಟು ವಿದ್ಯೆಗಳು- ಎಂದು ವಿಷ್ಣುಪುರಾಣದಲ್ಲಿ ಹೇಳಲಾಗಿದೆ. ಇಲ್ಲಿ ಹದಿನೆಂಟು ಉಪಪುರಾಣಗಳೂ ಪುರಾಣದಲ್ಲಿ ಸೇರಿರುತ್ತವೆ. ಮೀಮಾಂಸೆಯಲ್ಲಿ ವೇದಾಂತವೂ, ನ್ಯಾಯದಲ್ಲಿ ವೈಶೇಷಿಕವೂ ರಾಮಾಯಣ, ಮಹಾಭಾರತ, ಸಾಂಖ್ಯ, ಯೋಗ, ಪಾಶುಪತ, ವೈಷ್ಣವಮತಾದಿಗಳೆಲ್ಲವೂ ಧರ್ಮಶಾಸ್ತ್ರದಲ್ಲಿ ಸೇರಿಹೋಗುತ್ತವೆ- ಎನ್ನಲಾಗಿದೆ. ಅಮರಸಿಂಹ, ಹೇಮಚಂದ್ರ-ಮುಂತಾದವರಿಂದ ರಚಿತವಾದ ಕೋಶಗಳೆಲ್ಲ ನಿರುಕ್ತವೆಂಬ ವೇದಾಂಗದಲ್ಲಿ ಸೇರಿರುತ್ತವೆ. ಅರ್ಥಶಾಸ್ತ್ರವು ನೀತಿಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ, ಶಿಲ್ಪಶಾಸ್ತ್ರ, ರೂಪಶಾಸ್ತ್ರ, ಕಲಾಶಾಸ್ತ್ರವೆಂದು- ನಾನಾ ವಿಧವಾಗಿದೆ. ಕಲೆಗಳು ಸಂಗೀತ, ವಾದ್ಯ, ನೃತ್ಯ, ನಾಟ್ಯ-ಮುಂತಾದವಂತೂ ಗಾಂಧರ್ವವೇದದಲ್ಲಿ ಹೇಳಲ್ಪಟ್ಟಿದ್ದರೂ ವಿಶೇಷ ಕೌಶಲವನ್ನು ಅಪೇಕ್ಷಿಸುವ ಕಾರಣ ಕಲೆಗಳಲ್ಲಿಯೂ ಸೇರಿಸಲ್ಪಟ್ಟಿವೆ. ಹೀಗೆಯೇ ಜೈನ, ಬೌದ್ಧ, ಚಾರ್ವಾಕ, ದರ್ಶನಗಳು ಎಲ್ಲೆಲ್ಲಿ ಸಾಧ್ಯವೋ ಅಲ್ಲಿ ಸೇರುವುದನ್ನು ಗಮನಿಸಬಹುದು. ಅರವತ್ತುನಾಲ್ಕು ಕಲೆಗಳಲ್ಲಿ ವಾಸ್ತುವಿದ್ಯೆ, ಕೆತ್ತನೆ, ಬೇಸಾಯ, ಹೊಲಿಗೆ, ಯಂತ್ರರಚನೆ, ಇಂದ್ರಜಾಲ, ಧಾತುವಾದ, ಖನಿಜವಿಜ್ಞಾನ- ಮುಂತಾದ ಲೋಕೋಪಯೋಗಿ ಕಲೆಗಳೂ ಸೇರಿವೆ. ಸಂಸ್ಕೃತಭಾಷೆಯಲ್ಲಿ ಏನಿದೆ? ಎಂದು ಕೇಳುವವರ ಬಾಯಿಮುಚ್ಚಲು ಈ ಕೆಲವನ್ನು ಇಲ್ಲಿ ಸಂಗ್ರಹವಾಗಿ ಹೇಳಿದೆ.

ವೇದದ ಆರು ಅಂಗಗಳಲ್ಲಿನ ವಿವರ:-

**ಶಿಕ್ಷಾ:** ಈ ಶಾಸ್ತ್ರವು ವರ್ಣಗಳ ಉತ್ಪತ್ತಿಸ್ಥಾನವನ್ನು ತೋರಿಸುತ್ತಾ ವರ್ಣಗಳನ್ನು ಉಚ್ಚರಿಸುವ ವಿಧಾನವನ್ನು ಸ್ಪಷ್ಟಪಡಿಸುತ್ತದೆ. ಒಂದೊಂದು ವರ್ಣವನ್ನು ಉಚ್ಚರಿಸುವಾಗಲೂ ನಾವು ಒಂದು ಗೊತ್ತಾದ ಪ್ರಯತ್ನವನ್ನು ಆಶ್ರಯಿಸ

ಬೇಕಾಗುತ್ತದೆ. ಆ ಪ್ರಯತ್ನವು ಅಭ್ಯಂತರ, ಬಾಹ್ಯ, ಒಳಯತ್ನ ಹೊರಯತ್ನ ಎಂದು ಎರಡು ವಿಧ. ಅಕ್ಷರವನ್ನು ಶುದ್ಧರೀತಿಯಲ್ಲಿ ಹೇಗೆ ಉಚ್ಚರಿಸಬೇಕೆಂಬ ವಿಚಾರವು ಶಿಕ್ಷಾಶಾಸ್ತ್ರದಲ್ಲಿ ಸೂಕ್ಷ್ಮ ರೀತಿಯಲ್ಲಿ ಪ್ರತಿಪಾದಿತವಾಗಿದೆ.

**ಗೀತೀ ಶೀಘ್ರೀ ಶಿರಃಕಂಪೀ ಯಥಾಲಿಖಿತಪಾಠಕಃ ।**
**ಅನರ್ಥಜ್ಞೋಽಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ॥**

ಹಾಡುತ್ತಾ ಹೇಳುವವನು, ಬೇಗಬೇಗನೆ ಉಸುರುವವನು, ಅಂಗಾಂಗಗಳನ್ನು ಅಲ್ಲಾಡಿಸುತ್ತಾ ನುಡಿಯುವವನು, ಬರೆದಿರುವದನ್ನು ಬೇಜಾರಾಗುವಂತೆ ಓದುವವನು, ಅರ್ಥವನ್ನರಿಯದೆ ಉಚ್ಚರಿಸುವವನು, ಮತ್ತು ಕೀರಲು ಧ್ವನಿಯವನು- ಈ ಆರು ಮಂದಿಯೂ ಉತ್ತಮಪಾಠಕರಲ್ಲ, ಅಥವಾ ಅಧಮ ಓದುಗರು- ಎಂದು ಮುಂತಾಗಿ ಸರ್ವಜನಾದರಣೀಯ ವಿಚಾರವನ್ನು ಇಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಮಾತನ್ನು ಉಚ್ಚರಿಸುವ ಬಗ್ಗೆ ಬೇರಾವ ಭಾಷೆಯಲ್ಲಿಯೂ ಇಂಥ ಶಾಸ್ತ್ರವು ದೊರಕಲಾರದು.

**ವ್ಯಾಕರಣ:** ಭಾಷೆಯನ್ನು ಓದಬಯಸುವ ಎಲ್ಲಾ ಜನರಿಗೂ ವ್ಯಾಕರಣವು ಉಪಯೋಗಕರವೆಂಬುದು ಸುಸ್ಫುಟವಾಗಿದೆ. 'ಅಪಶಬ್ದಗಳನ್ನು ತ್ಯಜಿಸುವದು ಮತ್ತು ಭಾಷೆಯ ಸ್ವರೂಪದ ಸಂರಕ್ಷಣೆಯು' ವ್ಯಾಕರಣದ ಪರಮಪ್ರಯೋಜನವು. ಸಂಸ್ಕೃತವ್ಯಾಕರಣದಲ್ಲಿ ಇನ್ನೂ ಅದೆಷ್ಟೋ ವಿಶೇಷಗಳು ಬೆಳೆದುಬಂದಿವೆ- ಅರ್ಥವನ್ನು ತಿಳಿಯುವದಕ್ಕೆಂದು ತಾನೆ, ಶಬ್ದಗಳನ್ನು ಬಳಸುವದು? ಶಬ್ದ-ಅರ್ಥಗಳಿಗೆ ಇರುವ ಸಂಬಂಧ ಎಂಥದ್ದು? ಸಂಬಂಧವೇ ಇರದಿದ್ದರೆ ಶಬ್ದವು ಅರ್ಥವನ್ನು ತಿಳಿಸಲಾರದು. ಹಾಗಾದರೆ ಶಬ್ದವೆಂದರೇನು? ವರ್ಣಗಳೇ ಶಬ್ದವೇ ಅಥವಾ ವರ್ಣಗಳು ಧ್ವನಿಸುವ ಇನ್ನೇನಾದರೂ ಶಬ್ದವೇ? ಅರ್ಥವೆಂಬುದು ವ್ಯಕ್ತಿಯೆ? ಅಥವಾ ಅದನ್ನೊಳಗೊಂಡ ಜಾತಿಯೆ? ಅಥವಾ ಎರಡೂ ಹೌದೆ? ವಾಕ್ಯವೆಂದರೇನು? ವಾಕ್ಯದಲ್ಲಿರುವ ಪರಸ್ಪರ ಸಂಬಂಧ ಎಂಥದ್ದು? ಒಂದುನೂರು ಸಂಬಂಧಗಳು-ಎಂದಿದ್ದಾನೆ ಪತಂಜಲಿ. ಇವೇ ಮೊದಲಾದ ವಿಪುಲವಿಚಾರಗಳು ಸಂಸ್ಕೃತವ್ಯಾಕರಣದಲ್ಲಿ ನಿರೂಪಿತವಾಗಿವೆ. ಅಲ್ಲದೆ ಭರ್ತೃಹರಿ-ಎಂಬಾತನು ತನ್ನ ವಾಕ್ಯಪದೀಯ- ಎಂಬ ಗ್ರಂಥದಲ್ಲಿ ವ್ಯಾಕರಣದರ್ಶನವೆಂಬ ಶಬ್ದಾದ್ವೈತದರ್ಶನವನ್ನೇ ವಿಸ್ತಾರವಾಗಿ ಪ್ರತಿಪಾದಿಸಿದ್ದಾನೆ.

**ವಾಕ್ಯಪದೀಯ**ವೆಂಬ ಗ್ರಂಥದಲ್ಲಿ ಹೀಗಿದೆ:-

**ಅನಾದಿನಿಧನೋ ಬ್ರಹ್ಮ ಶಬ್ದತತ್ವಂ ಯದಕ್ಷರಮ್ ।**
**ವಿವರ್ತತೇಽರ್ಥಭಾವೇನ ಪ್ರಕ್ರಿಯಾ ಜಗತೋೀಯರ್ತಃ ॥**

ಆದಿ-ಅಂತ್ಯವಿಲ್ಲದ ಬ್ರಹ್ಮತತ್ವವೇ ಅಕ್ಷರವು. ಶಬ್ದತತ್ವವೆಂದರೂ ಇದೇ ಆಗಿದೆ. ಇದು ಅರ್ಥರೂಪದಿಂದ ಜಗತ್ತಿನ ಪ್ರಕ್ರಿಯೆಯಾಗಿ ವಿವರ್ತವಾಗಿದೆ-

**ಸ್ವರೂಪಜ್ಯೋತಿರೇವಾಂತಃ ಪರಾವಾಗನಪಾಯಿನೀ ।**
**ಯಸ್ಯಾಂ ದೃಷ್ಟಸ್ವರೂಪಾಯಾಂ ಅಧಿಕಾರೋ ನಿವರ್ತತೇ ॥**

ಒಳಗಣ ನಾಶವಿಲ್ಲದ ಪರಾವಾಕ್ಕು ಎಂಬುದೇ ಸ್ವರೂಪಜ್ಯೋತಿಯು. ಇದು ಕಂಡಕೂಡಲೆ ಅಽಕಾರವು ಹಿಂತಿರುಗುತ್ತದೆ- ಎಂಬುದು ಸಿದ್ಧಾಂತವಾಕ್ಯವು. ಇಂಥ ಪರಮಸೂಕ್ಷ್ಮ ವಿಚಾರಪರಿಪಾಟಿಯು ಸಂಸ್ಕೃತಸಾಹಿತ್ಯವನ್ನುಳಿದು ಬೇರೆಲ್ಲಿಯೂ ಕಂಡೂ ಇಲ್ಲ , ಕೇಳಿಯೂ ಇಲ್ಲ. ಮತ್ತು **ಫಿಲಾಲಜಿ** ಎಂಬ ಮಾತಿನಿಂದ ಲಕ್ಷಿತವಾಗುವ ಭಾಷಾಶಾಸ್ತ್ರಕ್ಕೆ ಸಂಸ್ಕೃತವ್ಯಾಕರಣಶಾಸ್ತ್ರದ ಕೊಡುಗೆ ಅಪರಿಮಿತವೆಂಬುದನ್ನು ನೆನಪಿನಲ್ಲಿಡಬೇಕು.

**ನಿರುಕ್ತಃ-** ವೈದಿಕನಿಘಂಟುವಿನ ವ್ಯಾಖ್ಯಾನವಾದ ಇದು ವ್ಯಾಕರಣಶಾಸ್ತ್ರದ ಪರಿಶಿಷ್ಟವಿದ್ದಂತೆ ಇದೆ. ಇದು ವ್ಯಾಕರಣದ ಪರಿಪೂರ್ಣತೆ ತರುವ ವಿದ್ಯಾಭ್ಯಾಸ-ಎಂಬುದಾಗಿ ಯಾಸ್ಕಾಚಾರ್ಯರೇ ಹೇಳಿದ್ದಾರೆ. ಅಮರಕೋಶ-ಮುಂತಾದ ಲೌಕಿಕನಿಘಂಟುಗಳಿಗೆ ಉಗಮಸ್ಥಾನವೇ ಈ ನಿರುಕ್ತವು. ವಿದ್ವಾಂಸರಿಗೆ ಕುತೂಹಲ ವನ್ನು ಉಂಟುಮಾಡುವ ಅನೇಕ ವಿಚಾರಗಳು ಇಲ್ಲಿ ಯಾಸ್ಕರಿಂದ ನಿರೂಪಿಸಲ್ಪಟ್ಟಿವೆ.

**ಛಂದಶ್ಶಾಸ್ತ್ರ:-** ಪಿಂಗಳಾಚಾರ್ಯರಿಂದ ಮೊದಲ್ಗೊಂಡ ಈ ಶಾಸ್ತ್ರವು ಮುಂದೆ ವಿರಚಿತವಾದ ವೃತ್ತರತ್ನಾಕರ ಮೊದಲಾದ ಎಲ್ಲಾ ಗ್ರಂಥಗಳ ಜನನಿಯು. ಮಾತ್ರಾ ಮತ್ತು ವರ್ಣಗಳೆಂಬ ಭೇದದಿಂದ ವಿಸ್ತಾರವಾಗಿ ಬೆಳೆದುಬಂದ ಈ ಛಂದಸ್ಸಿನಿಂದ ಇಡಿಯ ಸಾಹಿತ್ಯವೇ- ಮೂರು ಲೋಕಗಳೂ ವಿಷ್ಣುವಿನಿಂದ ವ್ಯಾಪ್ತವಾದಂತೆ-ವ್ಯಾಪಿಸಲ್ಪಟ್ಟಿದೆ. ಎಲ್ಲಾ ಕವಿಗಳಿಗೂ ಸಂಗೀತಕಲಾವಿದರಿಗೂ ಬಹು ಪ್ರಯೋಜನಕಾರಿಯಾಗಿರುವದು ಈ ಶಾಸ್ತ್ರವೆಂದು ಎಲ್ಲರಿಗೂ ತಿಳಿದೇ ಇದೆ.

**ಕಲ್ಪ :-** ಈ ವೇದಾಂಗವು ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ ಮತ್ತು ಶುಲ್ಬಸೂತ್ರ- ಎಂದು ನಾಲ್ಕು ವಿಧವಾಗಿದೆ. ಗೃಹ್ಯಸೂತ್ರಗಳಲ್ಲಿ ಮನೆಕಟ್ಟುವಿಕೆ, ಗೃಹಪ್ರವೇಶ, ಕೃಷಿ, ಕೆರೆ-ಕಟ್ಟೆಗಳ ನಿರ್ಮಾಣ- ಮುಂತಾದ ಲೌಕಿಕ ವಿಚಾರಗಳೂ

ಪ್ರಸ್ತುತವಾಗಿವೆ. ತೆರಿಗೆವಸೂಲಿ, ಆಸ್ತಿ ಹಂಚಿಕೆ, ಇಂದಿನ ಕಾಲದಲ್ಲಿ ಸಿವಿಲ್, ಕ್ರಿಮಿನಲ್ ಎಂದು ವಿಂಗಡನೆಯಾಗಿರುವ ನ್ಯಾಯಗಳು, ಕಳ್ಳತನ-ಇತ್ಯಾದಿ ಅಪರಾಧಗಳಿಗೆ ವಿಧಿಸಲಾಗುವ ಶಿಕ್ಷೆ-ಮೊದಲಾದವು ಧರ್ಮಶಾಸ್ತ್ರದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ.

**ಶುಲ್ಬಸೂತ್ರ:-** ವಸ್ತುಪ್ರಮಾಣವನ್ನು ನಿರ್ಣಯಿಸಲು ಬಳಸುವ ಅಳತೆಯಗದಾರಕ್ಕೆ ಶುಲ್ಬವೆನ್ನುತ್ತಾರೆ. ಯಜ್ಞದ ವೇದಿಕೆಗಳನ್ನು ನಿರ್ಮಿಸಲು ಶುಲ್ಬಸೂತ್ರಗಳು ಹೊರಟಿರುವವಾದರೂ ಪ್ರಮೇಯಗಳು, ಆಯತಸಮೀಕರಣಗಳು, ನಿಶ್ಚಿತಸಮೀಕರಣಗಳು-ಮುಂತಾದ ಜ್ಯಾಮಿತಿಯ ಮೂಲತತ್ತ್ವಗಳು ಈ ಸೂತ್ರಗಳಲ್ಲಿ ಕಂಡುಬರುತ್ತವೆಯೆಂದು ಗಣಿತಶಾಸ್ತ್ರಜ್ಞರು ಅಭಿಪ್ರಾಯಪಟ್ಟಿರುತ್ತಾರೆ. **ಪೈಥಾಗೊರಸದ ಪ್ರಮೇಯವೆಂದು ಇಂದು ಪ್ರಸಿದ್ಧವಿರುವ ತತ್ತ್ವವನ್ನು ಕಾತ್ಯಾಯನನು ಅದೆಷ್ಟೋ ಶತಮಾನಗಳ ಹಿಂದೆಯೆ ಪ್ರತಿಪಾದಿಸಿದ್ದನು.**

**ಜ್ಯೋತಿಷ:-** ಈ ಶಾಸ್ತ್ರದಲ್ಲಿ ಫಲ, ಮುಹೂರ್ತ, ಮತ್ತು ಗಣಿತ-ಎಂಬ ಮೂರು ವಿಭಾಗಗಳುಂಟು. ಅದರಲ್ಲಿಯೂ ಗಣಿತವೇ ಮುಖ್ಯ ಪ್ರಮೇಯವಾಗಿದೆ. ವೇದಾಂಗಜ್ಯೋತಿಷವೆಂಬ ಗ್ರಂಥದಲ್ಲಿ ಹೇಳಿರುವದು ಹೀಗಿದೆ.

**ಯಥಾ ಶಿಖಾ ಮಯೂರಾಣಾಂ ನಾಗಾನಾಂ ಮಣಯೋ ಯಥಾ।**
**ತದ್ವದ್ ವೇದಾಂಗಶಾಸ್ತ್ರಾಣಾಂ ಗಣಿತಂ ಮೂರ್ಧ್ನಿಸಂಸ್ಥಿತಮ್ ॥**

ನವಿಲುಗಳಿಗೆ ಶಿಖೆಯೆಂಬಂತೆ ಮತ್ತು ಹಾವುಗಳಿಗೆ ಮಣಿಯೆಂಬಂತೆ ವೇದಾಂಗಶಾಸ್ತ್ರಗಳಿಗೆ ಗಣಿತವು ಮೂರ್ಧನ್ಯಪ್ರಾಯವಾಗಿದೆ. ಆದ್ದರಿಂದಲೇ ಇದು ಆರ್ಯಭಟ, ಬ್ರಹ್ಮಗುಪ್ತ, ವರಾಹಮಿಹಿರ, ಭಾಸ್ಕರಾಚಾರ್ಯ-ಮೊದಲಾದ ಪುರುಷಶ್ರೇಷ್ಠರಾದ ವಿದ್ವದಗ್ರೇಸರರಿಂದ ನಾನಾ ಪ್ರಕಾರವಾಗಿ ವಿಸ್ತಾರವಾಗಿ ಬೆಳೆಸಲ್ಪಟ್ಟಿದೆ. ಖಗೋಳಶಾಸ್ತ್ರ ಹಾಗೂ ಗಣಿತವಿಜ್ಞಾನಗಳು **ಈ ಜಗತ್ತಿನಲ್ಲಿ ಮೊಟ್ಟಮೊದಲಿಗೆ ಭಾರತದೇಶದಲ್ಲಿಯೇ ಹುಟ್ಟಿಬೆಳೆದವು**-ಎಂದು **ವಿಲ್‌ಡುರಂಟ್** ಮೊದಲಾದ ವಿಖ್ಯಾತ ಇತಿಹಾಸಕಾರರು ಮುಕ್ತಮನಸ್ಸಿನಿಂದ ಅಭಿಪ್ರಾಯಪಟ್ಟಿದ್ದಾರೆ. **ಆರ್ಕಿಮಿಡೀಸ್, ಅಪೋಲೋನಿಯಸ್-** ಮುಂತಾದ ಗ್ರೀಸ್ ದೇಶದ ಪ್ರಖ್ಯಾತ ವಿಜ್ಞಾನಿಗಳಿಗೆ ಹೊಳೆಯದ ಬಿಡಿ, ಹತ್ತು, ನೂರು, ಸಾವಿರ ಇತ್ಯಾದಿ ದಶಮಾನಪದ್ಧತಿ ಗಣನೆಯನ್ನು ಭಾರತೀಯಪಂಡಿತರು ಆವಿಷ್ಕರಿಸಿದರು. **ಆರ್ಯಭಟನು** ವರ್ಗಸಮೀಕರಣ, ತ್ರಾಪಿಜ್ಯ-ತ್ರಿಕೋನ-ವರ್ತುಲಗಳ ಕ್ಷೇತ್ರಫಲಗಳನ್ನು ಕಂಡುಹಿಡಿಯುವ ಸೂತ್ರಗಳನ್ನು ತೋರಿಸಿದನು. ಭೂಮಿಯ ದೈನಂದಿನ ಹಾಗೂ

ವಾರ್ಷಿಕ ಚಲನಗತಿಯನ್ನು ಅವನೇ ನಿರ್ದೇಶಿಸಿದನು. **ಬ್ರಹ್ಮಗುಪ್ತನು** ಚಂದ್ರನ ವ್ಯಾಸಪ್ರಮಾಣವನ್ನು ಸ್ಪಷ್ಟವಾಗಿ ಹೇಳಿದನು. **ಭಾಸ್ಕರಾಚಾರ್ಯನು** Radical sign, Negative quantity, Permutation and Combination ಮುಂತಾದ ಗಣಿತ ಪ್ರಕಾರಗಳನ್ನು ತೋರಿಸಿಕೊಟ್ಟನು. ಸೂರ್ಯಚಂದ್ರರ ಗ್ರಹಣದ ಕಾಲವನ್ನೂ ಕಾರಣವನ್ನೂ **ವರಾಹಮಿಹಿರನು** ಹೇಳಿದ್ದಾನೆ. ರಾಹುವು ಗ್ರಹಣಕ್ಕೆ ಕಾರಣವಲ್ಲ ವೆಂದು ಆತನೇ ಯುಕ್ತಿಪೂರ್ವಕವಾಗಿ ಪ್ರತಿಪಾದಿಸಿದ್ದಾನೆ.

**ಭೂಚ್ಛಾಯಾಂ ಖಗ್ರಹಣೇ ಭಾಸ್ಕರಮರ್ಕಗ್ರಹೇ ಪ್ರವಿಶತೀಂದುಃ ।**
**ಪ್ರಗ್ರಹಣಮತಃ ಪಶ್ಚಾತ್ ನೇಂದೋಃ ಭಾನೋಶ್ಚ ಪೂರ್ವಾರ್ಧಾತ್ ॥**

ಖಗ್ರಾಸಗ್ರಹಣದಲ್ಲಿ ಚಂದ್ರನು ಭೂಮಿಯ ನೆರಳಿನಲ್ಲಿ ಸೂರ್ಯನನ್ನು ಪ್ರವೇಶಿಸುವ ಕಾರಣ ಗ್ರಹಣವಾಗುತ್ತದೆ, ಸೂರ್ಯಚಂದ್ರರ ಪೂರ್ವಪಶ್ಚಿಮ ಚಲನೆಯಿಂದ, ಆದ್ದರಿಂದ ರಾಹುವು ಇದಕ್ಕೆ ಕಾರಣವಲ್ಲ - ಎಂಬುದೇ ಶಾಸ್ತ್ರದ ಅಭಿಪ್ರಾಯವು.

ಸೂರ್ಯನು ಹುಟ್ಟುವದೂ ಇಲ್ಲ, ಮುಳುಗುವದೂ ಇಲ್ಲ. **'ನೋದೇತಿ ನಾಸ್ತಮೇತಿ'** ಎಂದು ವೇದದಲ್ಲಿಯೇ ಹೇಳಿದೆ. ಗ್ರಹನಕ್ಷತ್ರಗಳು ಪರಸ್ಪರ ಆಕರ್ಷಣ ಶಕ್ತಿಯಿಂದ ನೆಲೆಗೊಂಡಿವೆ. ಎಲ್ಲ ಗ್ರಹನಕ್ಷತ್ರಗಳೂ ಆಕಾಶದಲ್ಲಿ ವಾಯುರಶ್ಮಿಗಳಿಂದ ಕಟ್ಟಲ್ಪಟ್ಟಿವೆಯೆಂದು ವಿಷ್ಣುಪುರಾಣದಲ್ಲಿ ಹೇಳಿದೆ. ವಾಯುರಶ್ಮಿ-ಎಂಬ ಶಬ್ದಕ್ಕೆ ಏನರ್ಥ? ಅದಕ್ಕೆ ಆಕರ್ಷಣಶಕ್ತಿಯೆಂಬುದನ್ನು ಬಿಟ್ಟು ಬೇರೆ ಏನು ಅಭಿಪ್ರಾಯ ವಿದ್ದೀತೆಂದು ಪ್ರಾಜ್ಞರಾದವರು ಆಲೋಚಿಸಬೇಕು.

**ವೈದ್ಯಶಾಸ್ತ್ರ:-** ಎಲ್ಲಾ ಪ್ರಜೆಗಳ ಹಿತಕ್ಕೆಂದೇ ವೈದ್ಯಶಾಸ್ತ್ರವು ಹೊರಟಿರು ವದು. ಆಯುರ್ವೇದಶಾಸ್ತ್ರದಲ್ಲಿ ಚರಕಸಂಹಿತಾ, ಸುಶ್ರುತಸಂಹಿತಾ- ಎಂಬ ಎರಡು ಸಂಹಿತೆಗಳು ಆಧಾರಭೂತವಾಗಿರುವವು. ರೋಗಗಳ ಕಾರಣ, ರೋಗನಿಶ್ಚಯ, ಚಿಕಿತ್ಸೆ ಮತ್ತು ಆರೋಗ್ಯ- ಎಂಬ ನಾಲ್ಕು ವ್ಯೂಹಗಳುಳ್ಳ ಈ ಶಾಸ್ತ್ರವನ್ನು ಎಲ್ಲ ರೀತಿಯಿಂದ ತಜ್ಞರು ಬೆಳೆಸಿರುತ್ತಾರೆ. ಔಷಧನಿರ್ಮಾಣಕ್ರಮ, ಚಿಕಿತ್ಸಾವಿಧಾನ-ಮುಂತಾದ ವಿವರಗಳು ಚರಕಸಂಹಿತೆಯಲ್ಲಿ ವಿವರಿಸಲ್ಪಟ್ಟಿವೆ. **ಸುಶ್ರುತನು** ಶಸ್ತ್ರಚಿಕಿತ್ಸೆಯನ್ನು ವಿವರಿಸಿದ್ದಾನೆ. 120 ರೀತಿಯ ಶಸ್ತ್ರಕ್ರಿಯೋಪಯೋಗಿ ಉಪಕರಣಗಳು ಸುಶ್ರುತ ಸಂಹಿತೆಯಲ್ಲಿ ಬಣ್ಣಿಸಲ್ಪಟ್ಟಿವೆ. ಪ್ರಾಚೀನಭಾರತದಲ್ಲಿ ಶಸ್ತ್ರಚಿಕಿತ್ಸೋಪಕರಣಗಳು **Surgical Instruments in ancient India** ಎಂಬ ಸಚಿತ್ರಪುಸ್ತಕವೊಂದು ಇಂಗ್ಲಿಷ್‌ನಲ್ಲಿ ಪ್ರಕಟವಾಗಿದೆ.

ಕಾಶೀನಗರವಾಸಿಯಾದ ಸುಶ್ರುತನು ಹೆಣಗಳನ್ನು ಕತ್ತರಿಸಿ ಆ ಅನುಭವದಿಂದ ಮನುಷ್ಯದೇಹದ ಅಂಗೋಪಾಂಗಗಳ ವರ್ಣನೆಯನ್ನು ಮಾಡಿದ್ದಾನೆ. ಈ ಎರಡು ಸಂಹಿತೆಗಳು ಅರಾಬಿಕ್ ಭಾಷೆಗೆ ಅನುವಾದ ಗೊಂಡಿವೆಯೆಂದು ಫಿಹ್ರಿಸ್ತ- ಎಂಬ ಅರಬ್ಬೀ ಗ್ರಂಥದಲ್ಲಿ ಬರೆದಿದೆ. ಭಾರತೀಯ ವೈದ್ಯಪದ್ಧತಿಯು ಅರಬ್ಬೀ ವೈದ್ಯರ ಮೂಲಕ ಯುರೋಪ್ ಖಂಡದಲ್ಲಿ ಹರಡಲ್ಪಟ್ಟಿತು- ಎಂದು ಇತಿಹಾಸಕಾರರು ಹೇಳುತ್ತಾರೆ. ವಾಗ್ಭಟನ ಅಷ್ಟಾಂಗ ಹೃದಯ, ಮಾಧವನ ಮಾಧವನಿದಾನ, ಮುಂತಾದ ಆಯುರ್ವೇದದ ಅನೇಕ ಪ್ರಮಾಣಗ್ರಂಥಗಳು ಸಂಸ್ಕೃತಭಾಷೆಯಲ್ಲಿ ದೊರಕುತ್ತವೆ. ಹೀಗೆಯೇ ಪಶುಚಿಕಿತ್ಸೆ, ಹಸ್ತ್ಯಾಯುರ್ವೇದ, ವೃಕ್ಷಚಿಕಿತ್ಸೆ-ಮುಂತಾದವೂ ಸಂಸ್ಕೃತಸಾಹಿತ್ಯದಲ್ಲಿವೆ. **ಜೀವಕನೆಂಬ** ನೇತ್ರವೈದ್ಯನು ಅಕ್ಷಿಪಟಲದಲ್ಲಿ ರೋಗರಹಿತವಾದ ಪಾಪೆಯನ್ನು ಜೋಡಿಸುತ್ತಿದ್ದನೆಂದು ಬೌದ್ಧಗ್ರಂಥಗಳಲ್ಲಿ ಬರೆದಿದೆ.

**ಕಾಮಶಾಸ್ತ್ರ:-** ನಾಲ್ಕು ಪುರುಷಾರ್ಥಗಳಲ್ಲಿ ಕಾಮವನ್ನು ಒಂದೆಂದು ಪರಿಗಣಿಸಿದ ನಮ್ಮ ಪ್ರಾಚೀನರು ಎಲ್ಲರ ಅನುಭವದಿಂದ ಸಿದ್ಧವಾದ ಪ್ರತ್ಯಕ್ಷ ಲೌಕಿಕಾನುಭವವನ್ನು ಉದಾಸೀನಮಾಡಲಿಲ್ಲವೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

**ಕರ್ಪೂರ ಇವ ದಗ್ಧೋಽಪಿ ಶಕ್ತಿಮಾನ್ ಯೋ ಜನೇ ಜನೇ ।**
**ನಮೋಽಸ್ತ್ವವಾರ್ಯವೀರ್ಯಾಯ ತಸ್ಮೈ ಮಕರಕೇತವೇ ॥**

ಕರ್ಪೂರದಂತೆ ಉರಿದು ಇಲ್ಲವಾದರೂ ಸಹ ಯಾವನು ಎಲ್ಲರಲ್ಲಿಯೂ ಶಕ್ತಿವಂತನೋ ಅಂಥ ತಡೆಯಲಾಗದ ಪರಾಕ್ರಮವುಳ್ಳ ಆ ಮನ್ಮಥನಿಗೆ ನಮಸ್ಕಾರ- ಎಂಬ ಕವಿಯೊಬ್ಬನ ಉದ್ಗಾರದ ಬಗ್ಗೆ ಯಾವನಿಗೂ ಯಾವಳಿಗೂ ಭಿನ್ನಾಭಿಪ್ರಾಯ ವಿರಲಾರದು. ಆದರೆ ಧರ್ಮಕ್ಕೆ ವಿರುದ್ಧವಲ್ಲದ ಕಾಮವು ನಾನಾಗಿದ್ದೇನೆ (ಭ.ಗೀ.) ಎಂದು ಭಗವತನಿಂದ ಕಾಮವು ಹತೋಟಿಯಲ್ಲಿ ಇಡಲ್ಪಟ್ಟಿತೇ ಹೊರತು ದೂರಮಾಡಲ್ಪಡ ಲಿಲ್ಲವೆಂಬುದು ಭಾರತದ ಹಿರಿಮೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡೇ **ವಾತ್ಸ್ಯಾಯನಮಹರ್ಷಿಯು** ಕಾಮಶಾಸ್ತ್ರವನ್ನು ವಿರಚಿಸಿದ್ದಾನೆ. ಅನಂಗರಂಗ, ರತಿರಹಸ್ಯ- ಮುಂತಾದ ಇನ್ನೂ ಅನೇಕ ಗ್ರಂಥಗಳೂ ಕಾಣಬರುತ್ತವೆ. ದತ್ತಕ, ದೀರ್ಘಚಾರಾಯಣ, ಘೋಟಮುಖ, ಕೊಕ್ಕೋಕ-ಮುಂತಾದವರೆಲ್ಲ ಈ ಶಾಸ್ತ್ರದ ಮೇಲೆ ಅನೇಕ ಗ್ರಂಥಗಳನ್ನು ಬರೆದರು.

ಆಧುನಿಕ ಮನಃಶಾಸ್ತ್ರಜ್ಞರಾದ ಫ್ರಾಯ್ಡ್, ಆಡ್ಲರ್-ಮತ್ತಿತರರು ಎತ್ತಿರುವ

ಕೆಲವು ಸಮಸ್ಯೆಗಳಿಗೆ ಸಮಂಜಸವಾದ ಉತ್ತರಗಳು ಕಾಮಶಾಸ್ತ್ರ ಗ್ರಂಥಗಳಲ್ಲಿವೆ ಯೆಂದು ಮನಃಶಾಸ್ತ್ರಜ್ಞರೇ ಹೇಳುತ್ತಾರೆ.

**ವಾಣಿಜ್ಯ:-** ಪ್ರತಿಯೊಂದು ರಾಷ್ಟ್ರದ ಆರ್ಥಿಕ ಪ್ರಗತಿಯೂ ವ್ಯಾಪಾರ ವಹಿವಾಟನ್ನು ಆಧರಿಸಿರುತ್ತದೆಯಷ್ಟೆ. ನಮ್ಮ ಪ್ರಾಚೀನರೂ ಇದನ್ನು ಉಪೇಕ್ಷೆ ಮಾಡಲಿಲ್ಲ. ಕೃಷಿ, ಪಶುಪಾಲನೆ, ವಾಣಿಜ್ಯ-ಇವು ವೈಶ್ಯರ ಸಹಜವೃತ್ತಿ-ಎಂದಿದೆ ಭಗವದ್ಗೀತೆ. ಧರ್ಮಶಾಸ್ತ್ರಗಳಲ್ಲಿ ವಾಣಿಜ್ಯಪ್ರಕಾರಗಳು ವಿವರಿಸಲ್ಪಟ್ಟಿವೆ. ಪ್ರಾಚೀನವಾಣಿಜ್ಯವನ್ನು ಕುರಿತು ಪುಸ್ತಕಗಳೂ ಪ್ರಕಟವಾಗಿವೆ.

**ಸಂಗೀತ ಮತ್ತು ನೃತ್ಯ:-** ಪಂಡಿತರಿಂದ ಹಿಡಿದು ಪಾಮರರವರೆಗೆ ಎಲ್ಲ ಜನರ ಅಭಿನಂದನೆಗೆ ಪಾತ್ರವಾದ, ಆನಂದಕ್ಕೆ ಕಾರಣವಾಗಿರುವ ಎರಡು ಶ್ರೇಷ್ಠಕಲೆಗಳಾದ ನೃತ್ಯ- ಸಂಗೀತಗಳು ಸಂಸ್ಕೃತಸಾಹಿತ್ಯದಿಂದ ಆವಿರ್ಭವಿಸಿ ಬೃಹದಾಕಾರವನ್ನು ತಳೆದವು-ಎಂಬುದು ಎಷ್ಟೋ ಜನರಿಗೆ ಗೊತ್ತೇಇಲ್ಲ. ಸಂಗೀತ ರತ್ನಾಕರ, ಸಂಗೀತದರ್ಪಣ, ಸಂಗೀತಸುಧಾಕರ, ಬೃಹದ್ದೇಶಿ, ಸಂಗೀತಮುಕ್ತಾವಳೀ, ಚತುರ್ದಂಡಿಪ್ರಕಾಶಿಕಾ, ರಾಗವಿಬೋಧ, ದತ್ತಿಲಮ್-ಮುಂತಾದ ಅನೇಕ ಸಂಸ್ಕೃತಗ್ರಂಥಗಳು ಭಾರತೀಯ ಸಂಗೀತಕಲೆಯನ್ನು ವಿಸ್ತಾರವಾಗಿ ವರ್ಣಿಸಿವೆ. ಸಾಮವೇದವು ಸಂಗೀತವನ್ನು ಆಧರಿಸಿದೆ. ಅಲ್ಲಿ ಸ-ರಿ-ಗ-ಮ-ಪ-ದ-ನಿ-ಸಗಳು ಪ್ರಯುಕ್ತವಾಗಿವೆ. ಗಂಧರ್ವವೇದವು ಒಂದು ಉಪವೇದವೆನಿಸಿದೆ. ಸಂಗೀತ ಗ್ರಂಥಗಳು ಷಡ್ಜ- ಮುಂತಾದ ಸಪ್ತಸ್ವರಗಳನ್ನೂ ಧ್ರುವ-ಮೊದಲಾದ ತಾಳಭೇದ ಗಳನ್ನೂ ಶುದ್ಧಸಂಕೀರ್ಣಶ್ರುತಿರಾಗ-ಮುಂತಾದವುಗಳನ್ನೂ ನಿರೂಪಿಸುತ್ತವೆ. ವೀಣೆ, ಮೃದಂಗ,-ಮುಂತಾದ ನಾನಾವಾದ್ಯಗಳು ಅಲ್ಲಿ ಬಣ್ಣಿಸಲ್ಪಟ್ಟಿವೆ. ಕರ್ನಾಟಕ ಸಂಗೀತ-ಹಿಂದೂಸ್ತಾನಿಸಂಗೀತ-ಎಂಬ ಎರಡು ಪದ್ಧತಿಗಳಿಗೆ ಭರತಸಂಹಿತೆ, ಹನುಮತ್ಸಂಹಿತೆ-ಎಂಬ ಎರಡು ಗ್ರಂಥಗಳೇ ಆಧಾರ. ಸಂಸ್ಕೃತದಲ್ಲಿ ಸಂಗೀತಶಾಸ್ತ್ರವು ವಿಪುಲವಾಗಿದೆ.

ಹೀಗೆಯೇ ಭರತಮುನಿಯ ನಾಟ್ಯಶಾಸ್ತ್ರವೂ ನಾಟ್ಯ, ನೃತ್ಯ, ನೃತ್ತಲಾಸ್ಯ ತಾಂಡವ-ಮುಂತಾದ ನೃತ್ಯಭೇದಗಳನ್ನು ಕಾರಣ, ಅಂಗಹಾರ, ಭಂಗಿ-ಮುಂತಾದ ಪರಿಕರಗಳೊಂದಿಗೆ ಪ್ರತಿಪಾದಿಸುತ್ತದೆ. ಅಭಿನಯದರ್ಪಣ-ಮುಂತಾದ ನಾಟ್ಯ ಗ್ರಂಥಗಳು ಸಂಸ್ಕೃತದಲ್ಲಿ ರಚಿತವಾಗಿವೆ. ಇಂದಿನ ಕಾಲದಲ್ಲಿ ಈ ಶಾಸ್ತ್ರವನ್ನು ಅರಿಯದ ಅಜ್ಞರು, ಸೋಮಾರಿಗಳು-ಹೊಸಕುಣಿತಗಳನ್ನೂ ವಿಕಾರಗಾನಗಳನ್ನೂ ಆರಂಭಿಸಿ ಜನರ ಶಾಸ್ತ್ರಾಭಿರುಚಿಯನ್ನು ಹಾಳುಮಾಡಿರುವದು ಶೋಚನಿಯ ಸಂಗತಿಯಾಗಿದೆ.

**ಸಾಹಿತ್ಯ:-** ಕಲೆಗಳಲ್ಲಿ ಇದು ಮೂರ್ಧನ್ಯಪ್ರಾಯವಾಗಿದ್ದು ಸಹೃದಯರಿಗೆ ಮಾತ್ರ ಅರಿವಾಗುವದು ಕವಿಕೃತಿಯಾದ ಕಾವ್ಯ. ಬುದ್ಧಿಯುಳ್ಳ ಯಾರು ತಾನೆ ಕಾವ್ಯದಲ್ಲಿ ಆ ಆನಂದವನ್ನು ಅನುಭವಿಸುವದಿಲ್ಲ? ಸಂಸ್ಕೃತಸಾಹಿತ್ಯದಲ್ಲಿಯಾದರೋ, ವಾಲ್ಮೀಕಿ, ವ್ಯಾಸ, ಭಾಸ, ಕಾಳಿದಾಸ, ಭವಭೂತಿ, ಬಾಣಭಟ್ಟ-ಮುಂತಾದವರಿಂದ ವಿಸ್ತಾರಗೊಂಡ ಕಾವ್ಯಪ್ರಪಂಚವು ಪ್ರಸಿದ್ಧವೇ ಇದೆ. ರಾಮಾಯಣ-ಮಹಾಭಾರತ ಗಳಂತೂ ಭಾರತದೇಶ ಮಾತ್ರವಲ್ಲ, ಇಡೀ ವಿಶ್ವದ ಭಾಗ್ಯವೆಂದೇ ಬಗೆಯಬೇಕು. ಮಧುರನೆಂಬ ಕನ್ನಡ ಕವಿಯೊಬ್ಬನು ಹೀಗೆ ಹೇಳಿದ್ದಾನೆ.

**ಬೆಲೆಯಿಂದಕ್ಕುಮೆ ಕೃತಿ ಗಾವಿಲ । ಭುವನದ ಭಾಗ್ಯದಿಂದ ಮಕ್ಕುಂ ನೋಡಲ್ ।**
**ಬೆಲೆಗೊಟ್ಟುತಾರ ಮಧುವಂ । ಮಲಯಾನಿಲಂ ಮನೋಜನಂ ಕೌಮುದೀಯಂ॥**

ಇದರ ಅರ್ಥವೇನೆಂದರೆ: ''ಎಲೈ ಮೂಢ, ಹಣದ ದುರಾಸೆಯಿಂದ ಉತ್ತಮ ಕಾವ್ಯವೆಂದೂ ಹೊರಬರುವದಿಲ್ಲ. ಆದರೆ ಭುವನದ ಭಾಗ್ಯದಿಂದ ಕಾವ್ಯವು ಉಂಟಾಗುತ್ತದೆ, ವಸಂತಋತುವನ್ನಾಗಲಿ, ಮಲಯದ ತಂಗಾಳಿಯನ್ನಾಗಲಿ, ಮನ್ಮಥನನ್ನಾಗಲಿ ಅಥವಾ ಬೆಳದಿಂಗಳನ್ನಾಗಲಿ ಹಣದಿಂದ ಎಂದಾದರೂ ಕೊಳ್ಳಲು ಸಾಧ್ಯವಿದೆಯೆ?''

ಅಲಂಕಾರಶಾಸ್ತ್ರವೆಂಬ ಕಾವ್ಯಮೀಮಾಂಸಾಶಾಸ್ತ್ರವು ಸಾಹಿತ್ಯವಿದ್ಯೆಯ ಒಂದು ವಿಧಾನ. ಆನಂದವರ್ಧನ, ಅಭಿನವಗುಪ್ತ, ಮಮ್ಮಟ, ಭಾಮಹ, ದಂಡಿ, ಕುಂತಕ ಅಪ್ಪಯ್ಯದೀಕ್ಷಿತ, ಜಗನ್ನಾಥ-ಮುಂತಾದ ಕಾವ್ಯಮೀಮಾಂಸಕರು ಈ ಶಾಸ್ತ್ರವನ್ನು ವಿಸ್ತಾರವಾಗಿ ಬೆಳೆಸಿದ್ದಾರೆ. ಈ ಶಾಸ್ತ್ರವು ಕವಿಗಳಿಗೆ ಶಿಕ್ಷಣನೀಡುವದು ಮಾತ್ರವಲ್ಲದೆ ಕಾವ್ಯವನ್ನು ಹೇಗೆ ಆಸ್ವಾದಿಸಬೇಕೆಂದು ಸಹೃದಯರಿಗೂ ತಿಳಿಸಿಕೊಡುತ್ತದೆ. ಸಂಸ್ಕೃತದಲ್ಲಿ ಶಬ್ದಚಿತ್ರವೆಂಬ ಕಾವ್ಯಭೇದವೊಂದಿದೆ. ಅನುಪ್ರಾಸ, ಯಮಕ, ಸರ್ವತೋಭದ್ರ, ಗತಪ್ರತ್ಯಾಗತ, ಏಕಾಕ್ಷರೀ, ದ್ವ್ಯಕ್ಷರೀ, ಮುರಜಬಂಧ, ಚಕ್ರಬಂಧ, ಗೋಮೂತ್ರಿಕಾ ಬಂಧ, ಅತಾಲವು, ಆಕ್ಷರಚ್ಯುತಕ, ಬಿಂದುಚ್ಯುತಕ, ಮಾತ್ರಾಚ್ಯುತಕ, ಕ್ರಿಯಾಗುಪ್ತ, ಕಾರಕಗುಪ್ತ, ಸಮಸ್ಯಾ, ಅಂತರಾಲಾಪ, ಬಹಿರಾಲಾಪ, ಮುಂತಾದ ಅನೇಕ ವಿದ್ಯಾವಿನೋದ ಪ್ರಕಾರಗಳು ಸಂಸ್ಕೃತದಲ್ಲಿವೆ. ಅನ್ಯೋಕ್ತಿಯೆಂಬುದೊಂದು ಅರ್ಥಾಲಂಕಾರದ ಪ್ರಕಾರವು.

**ವಾಸ್ತುಶಿಲ್ಪ**ದಲ್ಲಿ ಮಾನಸಾರ, ಮನುಷ್ಯಾಲಯ ಚಂದ್ರಿಕಾ, ವಾಸ್ತುವಿದ್ಯಾ ಶಿಲ್ಪರತ್ನ, ಮಯಮತ, ಕಾಶ್ಯಪಶಿಲ್ಪ , ಅಭಿಲಷಿತಾರ್ಥ ಚಿಂತಾಮಣಿ, ಸಮರಾಂಗಣ ಸೂತ್ರಧಾರ-ಇತ್ಯಾದಿ ಕೃತಿಗಳು ವಿಖ್ಯಾತವಾಗಿವೆ. ಇವುಗಳಲ್ಲಿ ರಾಜಧಾನಿ, ಪಟ್ಟಣ,

ಮತ್ತು ಹಳ್ಳಿಗಳ ನಿರ್ಮಾಣಗಳನ್ನು ಹೇಳಲಾಗಿದೆ. ಜನಸಂಖ್ಯೆಗೆ ಅನುಗುಣವಾಗಿ ಸರ್ವತೋಭದ್ರ, ನಂದ್ಯಾವರ್ತ, ಪದ್ಮಕ, ಸ್ವಸ್ತಿಕ, ಚತುರ್ಮುಖ, ಮುಂತಾದವು ನಗರಾದಿಗಳ ಆಕಾರಗಳು, ಸೇನೆಯನ್ನು ಇರಿಸಲು ಸ್ಕಂಧಾವಾರ, ನಿಗಮ, ಶಿಬಿರ-ಮುಂತಾದ ವಿಶಿಷ್ಟರಚನೆಗಳೂ ಇವೆ. ಇಟ್ಟಿಗೆ ಮಾಡುವಿಕೆ, ಸಿಮೆಂಟಿನಂಥ ವಜ್ರಲೇಪದ ತಯಾರಿಕೆ-ಮುಂತಾದ ವಿಚಾರಗಳು ಇಲ್ಲಿ ತಿಳಿಸಲ್ಪಟ್ಟಿವೆ. ದ್ರಾವಿಡ, ನಾಗರ, ವೇಸರ-ಎಂಬ ದೇವಾಲಯದ ಪ್ರಕಾರಗಳೂ, ಮನೆಗಳ, ಅರಮನೆಗಳ, ಕಂಬಗಳ ರಚನೆ, ನಾನಾ ಅಳತೆಗಳಿಗೆ ಅನುಗುಣವಾಗಿ ವಿವಿಧ ದೇವತಾವಿಗ್ರಹಗಳ ತಯಾರಿಕೆ ಮುಂತಾದವೆಲ್ಲ ಈ ಗ್ರಂಥಗಳಲ್ಲಿ ಪ್ರತಿಪಾದಿತವಾಗಿವೆ, 'ಅಭಿಲಷಿತಾರ್ಥ ಚಿಂತಾಮಣಿ' ಎಂಬ ಗ್ರಂಥದಲ್ಲಿ ಚಿತ್ರಲೇಖನಪದ್ಧತಿಯು ವಿಸ್ತಾರವಾಗಿ ವಿವರಿಸಲ್ಪಟ್ಟಿದೆ.

ಇನ್ನು ಹೆಚ್ಚು ಬೆಳೆಸುವದೇಕೆ? ಹಿಂದಿನ ಕಾಲದಲ್ಲಿ ಮಾನವನ ಜೀವನಕ್ಕೆ ಉಪಯೋಗಕರವಾಗಿದ್ದ ಏನೇನು ವಿಷಯಗಳಿದ್ದವೋ ಅವೆಲ್ಲ ಸಂಸ್ಕೃತಸಾಹಿತ್ಯದಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಪಾಕಶಾಸ್ತ್ರ, ಗಂಧವಾದ, ರಸವಿದ್ಯೆ, ನೌಕಾಶಾಸ್ತ್ರಗಳೂ ಇವೆ. (ವೇಶ್ಯಾವೃತ್ತಿಯನ್ನು ಕುರಿತ ಗ್ರಂಥಗಳೂ ಇವೆ). ನಳಪಾಕಶಾಸ್ತ್ರವೆಂಬ ಗ್ರಂಥವೊಂದು ಪ್ರಕಟವಾಗಿರುವದನ್ನು ನೋಡಿದ್ದೇನೆ. ಇದುವರೆಗೆ ತಿಳಿಸಿದ ವಿಷಯಗಳೆಲ್ಲ ಇಹಲೋಕದ್ದೇ ಹೊರತು ಪರಲೋಕದ್ದಲ್ಲ. ಮನುಷ್ಯಜಾತಿಗೆ ಸಂಬಂಧ ಪಟ್ಟದ್ದೆಂಬದ್ದನ್ನು ಬಿಟ್ಟರೆ ಇಲ್ಲಿ ಎಲ್ಲಿಯೂ ಜಾತಿಮತದ ಗಂಧಗಾಳಿಯೂ ಇಲ್ಲ. ಆದ್ದರಿಂದ ಇವೆಲ್ಲ **'ಸೆಕ್ಯುಲರ್'** ಎಂದು ಪರಿಭಾವಿಸಬೇಕು. ಯಾವನು, ಯಾವಳು ಬೇಕಾದರೂ ಎಲ್ಲರೂ ಸಹ ಇದರಲ್ಲಿ ವಿಹರಿಸಬಹುದು.

**ಸಿಕಂದರಧರಾನಾಥಃ ಯವನೈಃ ಪ್ರೇರಿತಃ ಪುರಾ ।**
**ಪುಸ್ತಕಾನಿ ಚ ಸರ್ವಾಣಿ ತೃಣಾನ್ಯಗ್ನಿರಿವಾದಹತ್ ॥**

ಸಿಕಂದರನೆಂಬ (ಇವನು ಅಲೆಗ್ಸಾಂಡರ್ ಅಲ್ಲ) ಸಿಕಂದರಖಾನನೆಂಬ ಮಹಮ್ಮದೀಯ ರಾಜನು ಹಿಂದೆ ಯವನರಿಂದ ಪ್ರೇರಣೆಪಡೆದು ಬೆಂಕಿಯು ಹುಲ್ಲನ್ನು ಹೇಗೋ ಹಾಗೆ ಎಲ್ಲಾ ಪುಸ್ತಕಗಳನ್ನೂ ಸುಟ್ಟುಹಾಕಿದನು- ಎಂದು ದಾಖಲಿಸಿರುವ "ರಾಜತರಂಗಿಣಿ" ಎಂಬ ಗ್ರಂಥವು ಇನ್ನೂ ಬದುಕಿರುವಾಗ ಅತಿ ವಿಶಾಲವಾದ ತುಂಬ ಆಳವಾದ ಸಂಸ್ಕೃತಸರಸ್ವತಿಯ ಭಾಂಡಾಗಾರದಲ್ಲಿ-

**ಕತಿ ನಷ್ಟಾಃ ಕತಿ ಶಿಷ್ಟಾಃ ಕತಿ ದೃಷ್ಟಾ ಮಯೇತಿ ಕೋ ವಕ್ತಾ ।**
**ದುರ್ಗ್ರಹದೂಷಿತಮನಸಾಂ ಸುಗ್ರಹಸಂಪತ್ತಯೇ ಕೃತೋ ಯತ್ನಃ ॥**

"ಅಳಿದವು ಎಷ್ಟೋ ಉಳಿದವು ಎಷ್ಟೋ, ನಾನು ಎಷ್ಟೆಲ್ಲ ಕಂಡಿದ್ದೇನೆ-ಎಂದು

ಹೇಳುವವರಾರು? ದುರ್ಬುದ್ಧಿಯಿಂದ ಕೂಡಿದವರಿಗೆ ಸದ್ಬುದ್ಧಿಯುಂಟುಮಾಡಲು ಪ್ರಯತ್ನಪಟ್ಟಿದ್ದೇನೆ.''

ಇನ್ನೂ ಏನೆಂದರೆ ಈ ಪ್ರಪಂಚದಲ್ಲಿ ವಿಶ್ವರಹಸ್ಯವನ್ನು ಕಾಣುವ ಕುತೂಹಲವುಳ್ಳ ತತ್ತ್ವಾನ್ವೇಷಣತತ್ಪರರಾದ ಮೇಧಾವಿಪುರುಷ ಶ್ರೇಷ್ಠರು ಅನೇಕ ಮಂದಿ ಇದ್ದಾರೆ. ಅಂಥವರ ಸರ್ವಂಕಷ, ಸರ್ವಂಸಹ ಬುದ್ಧಿಯು ಅಲ್ಪವಾದ ಮೆದು ಆಹಾರದಿಂದ ತೃಪ್ತಿಹೊಂದದು. ಅಂಥವರ ಜ್ಞಾನತೃಷೆಯನ್ನು ತಣಿಸಲು ವಿಸ್ತಾರವಾದ ದರ್ಶನಶಾಸ್ತ್ರಗಳೂ ಸಂಸ್ಕೃತದಲ್ಲಿವೆ. ಪ್ರತೀತ್ಯಸಮುತ್ಪಾದ, ಪ್ರಜ್ಞಾಪಾರಮಿತಾ-ಮುಂತಾದ ತರ್ಕಕರ್ಕಶ ವಿಚಾರಗರ್ಭಿತ ಬೌದ್ಧದರ್ಶನಗಳಲ್ಲಿ ತಾವು ಯಥೇಷ್ಟವಾಗಿ ವಿಹರಿಸಿರಿ. ಸಪ್ತಭಂಗೀನಯ, ಮತ್ತಿತರ ಪ್ರೌಢಕಲ್ಪನಾಧುರಂಧರವಾದ ಜೈನದರ್ಶನವೂ ಇದೆ.

**ಆನ್ವೀಕ್ಷಕೀ-**ಎಂದೂ ತರ್ಕಶಾಸ್ತ್ರವೆಂದೂ ಹೇಳಲಾಗುವ ನ್ಯಾಯ- ವೈಶೇಷಿಕ ದರ್ಶನದಲ್ಲಿ ಇಡಿಯ ಆಯುಷ್ಯವನ್ನು ಕಳೆಯಲು ಸಾಧ್ಯ. ಹೆಚ್ಚಿನ ಶಕ್ತಿಯಿದ್ದರೆ ಜಗದೀಶ, ಗದಾಧರ-ಇವರ ಗ್ರಂಥಗಳೊಂದಿಗೆ ಮಲ್ಲಯುದ್ಧಮಾಡಿರಿ, ಪರಮಾರ್ಥವಿಚಾರದಲ್ಲಿ ಆಸಕ್ತಿಯಿದ್ದರೆ ದೊಡ್ಡ ಸಾಂಖ್ಯಶಾಸ್ತ್ರವೇ ಇದೆ, ಅಥವಾ ಪರಮಾರ್ಥಸಾಧನೆಯ ಸಾಮಗ್ರಿಯ ಅವಶ್ಯಕತೆಯಿದ್ದರೆ ಯೋಗದರ್ಶನವನ್ನು ಸಮೀಕ್ಷಿಸಿರಿ. ಅದರದೇ ಅಂಗವಾದ ಹಠಯೋಗವು ಆರೋಗ್ಯ-ಮುಂತಾದ ಲೌಕಿಕಫಲವನ್ನು ಉಂಟುಮಾಡವಂಥದ್ದು- ಎಂಬುದು ವಿಶೇಷ. ವೇದಾಂತ ದರ್ಶನಕ್ಕೂ ಬಾಗಿಲು ಎಲ್ಲರಿಗೂ ತೆರೆದೇ ಇದೆ. ಜ್ಞಾನವನ್ನು ಕೋಲುಹಿಡಿದು ತಡೆಯಲಾಗುವದಿಲ್ಲ. ನಿಜವೇನೆಂದರೆ ಎಲ್ಲಾ ಜನರ ಸುಖಾಭಿಲಾಷೆಯನ್ನೂ ಸರ್ವಧರ್ಮಸಮನ್ವಯವನ್ನೂ ಮಹಾತ್ಮರು ತೋರಿಸಿದ್ದಾರೆ.

**ಶ್ರೋತವ್ಯಃ ಸೌಗತೋ ಧರ್ಮಃ ಸ್ಮರ್ತವ್ಯಃ ಪುನರಾರ್ಹತಃ ।**
**ವೈದಿಕೋ ವ್ಯವಹರ್ತವ್ಯಃ ಧ್ಯಾತವ್ಯಃ ಪರಮಶ್ಶಿವಃ ॥**

ಬೌದ್ಧಧರ್ಮವನ್ನು ಕೇಳಬೇಕು, ಜೈನಧರ್ಮವನ್ನು ನೆನಪಿನಲ್ಲಿಡಬೇಕು, ವೈದಿಕಜೀವನವನ್ನು ನಡೆಸಬೇಕು, ಪರಶಿವನನ್ನು ಧ್ಯಾನಮಾಡಬೇಕು- ಎಂಬ **ಸರ್ವಧರ್ಮಸಮನ್ವಯ**ವನ್ನು ಅಭಿನವಗುಪ್ತಾಚಾರ್ಯರು ತಿಳಿಸಿದ್ದಾರೆ. **ಸಂಸ್ಕೃತವು ಅಮೃತ, ಅದರಲ್ಲಿ ಏನು ಬೇಕಾದರೂ ಇದೆ. ಅಂಥದ್ದನ್ನು ಕುಡಿದು ತೃಪ್ತರಾಗಿರಿ. ಸಾರವಿಲ್ಲದ ಗಂಜಿಯಿಂದ ಆಗಬೇಕಾದದ್ದೇನು ?**

* * * * *

# 51. ಸರ್ವಭಾಷಾಸರಸ್ವತೀ

## (ಡಾ|| ಹಾ. ಮಾ. ನಾಯಕರ ಲೇಖನದಿಂದ ಆಯ್ದ ಭಾಗ)

ಭಾಷೆ ನಮ್ಮ ಪಾಲಿಗೆ ಲಭ್ಯವಾಗಿರುವ ಒಂದು ದಿವ್ಯ ವರ. ಮನುಷ್ಯನನ್ನು ಮಿಕ್ಕ ಪ್ರಾಣಿಗಳಿಂದ ಬೇರ್ಪಡಿಸಿದ ಒಂದು ಪ್ರಧಾನ ಲಕ್ಷಣ. ನಮ್ಮ ಯೋಚನೆ, ಆಲೋಚನೆಗಳು, ಆಸೆ, ಅನಿಸಿಕೆಗಳು, ಭಾವ, ಭಾವನೆಗಳು ಒಡಮೂಡುವದು ಭಾಷೆಯಲ್ಲಿ. ಭಾಷೆ ಅವ್ಯಕ್ತಮನಸ್ಸಿನ ವ್ಯಕ್ತರೂಪ. ಸಂಪ್ರದಾಯ, ಸಾಹಿತ್ಯಗಳು ನಿಂತು ಬಂದಿರುವದು ಅದರ ಮೂಲಕ. ಭಾಷೆ ಇಲ್ಲದೆ ಬದುಕಿಲ್ಲ. ನಮ್ಮ ನೆನ್ನೆ ಮೊನ್ನೆಗಳೆಲ್ಲ ಭಾಷೆಯಿಂದಲೇ ಇಂದೂ ಉಳಿದಿವೆ.

ಸಂಪದ್ಯುಕ್ತಸಾಹಿತ್ಯವನ್ನುಳ್ಳ ಭಾಷೆಗಳು ಅನೇಕ. ಸಂಪರ್ಕಸಾಧನ ಮಾತ್ರವಾಗಿ ಉಳಿದ ಭಾಷೆಗಳು ಹಲವು. ಕೆಲವು ಭಾಷೆಗಳಿಗೆ ಸಮಾಜದಲ್ಲಿ, ರಾಷ್ಟ್ರಜೀವನದಲ್ಲಿ ವಿಶೇಷಸ್ಥಾನಮಾನಗಳುಂಟು. ಮತ್ತೆ ಕೆಲವು ನಿರ್ಲಕ್ಷ್ಯಕ್ಕೆ ಒಳಗಾಗಿ ತಿರಸ್ಕೃತಗೊಂಡಿರುವದೂ ಉಂಟು. ವಿಜ್ಞಾನ, ವಾಣಿಜ್ಯ, ವಿದ್ಯಾಭ್ಯಾಸಗಳ ನೆಪದಲ್ಲಿ ಕೆಲವು ಭಾಷೆಗಳಲ್ಲಿ ಉಪಭಾಷೆಗಳ ವರ್ಣವೈವಿಧ್ಯ, ವೈಭವ-ಉಂಟು. ಕೆಲವು ಭಾಷೆಗಳಲ್ಲಿ ಒಣ ಏಕತಾನತೆ ತಾನೇ ತಾನಾಗಿರುವದುಂಟು.

ಭಾಷೆಗಳು ಒಂದು ಮಾಧ್ಯಮ ಅಷ್ಟೆ. ಎಲ್ಲರಿಗೂ ಅವರವರ ಭಾಷೆಗಳು ಪ್ರಿಯವಾದವು. ಹತ್ತಿರವಾದವು. ಉಪಯುಕ್ತತೆಯ ದೃಷ್ಟಿಯಲ್ಲಿ ಒಬ್ಬೊಬ್ಬರಿಗೆ ಒಂದೊಂದು ಹೆಚ್ಚು ಪ್ರಿಯ ಎನಿಸಬಹುದು. ಬಹುಭಾಷೆಗಳ ದೇಶವಾದ ನಮ್ಮಲ್ಲಿ ಭಾಷೆಗಳ ಬಗೆಗೆ ನಮ್ಮ ಜನರ ತಿಳಿವಳಿಕೆ ಸ್ಪಷ್ಟವಾದಲ್ಲಿ, ನೇರವಾದಲ್ಲಿ, ಎಷ್ಟೋ ಉದ್ವೇಗ-ಮಾತ್ಸರ್ಯಗಳು ಕಡಿಮೆಯಾಗುತ್ತವೆ, ಸಂಘರ್ಷದ ತೀವ್ರತೆ ಇಳಿಮುಖವಾಗುತ್ತದೆ.

ಭಾಷೆಯ ಸಾಮಾನ್ಯ ಲಕ್ಷಣ ಎಂದರೆ ಅದರ ಸಂವಹನಗುಣ; ತಿಳಿಸುವ ಲಕ್ಷಣ. ವಾಸ್ತವವಾಗಿ ಭಾಷೆಗಳಲ್ಲಿ ಮೇಲುಕೀಳುಗಳಿಲ್ಲ. ಈ ಗುಣವನ್ನು ನಮ್ಮ ಕಣ್ಣು ನೇರಕ್ಕೆ ನಾವು ಆರೋಪಿಸಿಕೊಂಡಿರುವದು. ಇದರಿಂದ ಈ ಭಾಷೆ, ಆ ಭಾಷೆ ಎಂದು ಕೈಮಾಡಿತೋರಿಸುತ್ತಿದ್ದೇವೆ. ಜಗಳ ವೈಮನಸ್ಸುಗಳಿಗೆ ಹಾದಿಹಾಕುತ್ತಿದ್ದೇವೆ. ಎಲ್ಲಾ ಭಾಷೆಗಳೂ ಮಾಡುವ ಕೆಲಸ ಒಂದೇ ಎಂಬುದನ್ನು ನಾವು ಮರೆತಿದ್ದೇವೆ.

ವಿದ್ಯಾಽದೇವತೆ ಸರಸ್ವತೀ ಸಕಲಭಾಷಾತ್ಮಕಳು. ಅವಳು ಯಾವ ಒಂದು ಭಾಷೆಗೆ ಮೀಸಲಾದವಳಲ್ಲ. **ಸರ್ವಭಾಷಾಸರಸ್ವತೀ** ಎಂಬುದೊಂದು ಕನ್ನಡಿಗರ ಕಲ್ಪನೆ. ಅದನ್ನು ನಾವು ನೆನಪಿನಲ್ಲಿಟ್ಟುಕೊಂಡಿರುವುದು ಎಲ್ಲ ಕಾಲಕ್ಕೂ ಶ್ರೇಯಸ್ಕರ. ನಮಗೆ ಮಾತ್ರವಲ್ಲ-ರಾಷ್ಟ್ರಜೀವನಕ್ಕೆ ಕೂಡ.

* * * * *

# 52. ಅಮರಭಾರತಿ

ಆ ಭಾಷೆಯು ನನಗೆ ಹಳೆಯದೂ ಆಗಿತ್ತು, ಹೊಸದಾಗಿಯೂ ಕಾಣಿಸಿತು. ಸಭೆಯಲ್ಲಿ ಕುಳಿತವರೆಲ್ಲರೂ ಧಾರಾಳವಾಗಿ ಅದನ್ನು ಬಳಸುತ್ತಿದ್ದರು. ನನಗೆ ಅದು ಅರ್ಥವಾಗುತ್ತಲೂ ಇತ್ತು. ಆದರೆ ನಾನು ಮಾತ್ರ ಅದನ್ನು ಆಡಿದವನಲ್ಲ. ಇದು ಯಾವ ಭಾಷೆಯೊ! ಎಂದು ಯೋಚಿಸಹತ್ತಿದೆನು.

ಅವರು ಮಾಡುತ್ತಿದ್ದ ಚರ್ಚೆಯನ್ನು ಆದಷ್ಟುಮಟ್ಟಿಗೂ ಅವರ ಭಾಷೆಯಲ್ಲಿಯೇ ಕನ್ನಡಿಸಿದ್ದೇನೆ. ಪ್ರತ್ಯಯಗಳನ್ನು ಬಿಟ್ಟರೆ, ಬಲುಮಟ್ಟಿಗೆ ಅವರು ಬಳಸುತ್ತಿದ್ದ ಶಬ್ದಗಳನ್ನೇ ಇಲ್ಲಿ ಬಳಸಿದ್ದೇನೆ, ಒಬ್ಬರೆಂದರು; ''ಸರ್ವತ್ರ ದೇವನಾಗರೀ ಲಿಪಿಯನ್ನೇ ಭಾಷಾಪ್ರಚಾರಕಾರ್ಯಕ್ಕೆ ಉಪಯೋಗಿಸಬೇಕು. ದೇವಭಾಷೆಗೆ ಈ ಲಿಪಿಯೇ ಶೋಭಿಸುತ್ತದೆ.'' ಅದಕ್ಕೆ ಮತ್ತೊಬ್ಬರು; ''ಭಾಷೆಯನ್ನು ಅಭ್ಯಾಸ ಮಾಡಬೇಕೆಂಬ ಇಚ್ಛೆಯಿದ್ದರೆ ಲಿಪಿಯೇನೂ ಅಭ್ಯಂತರವಾಗುವದಿಲ್ಲ.'' ಈ ಲಿಪಿಯ ಪರಿಚಯವಿಲ್ಲದ ಪಂಡಿತರು ಸರ್ವಪ್ರಾಂತಗಳಲ್ಲಿಯೂ ಇರುತ್ತಾರೆ. ಪ್ರಾಂತಲಿಪಿ ಯಿದ್ದರೆ ಈ ಭಾಷೆಯು ಪ್ರಾಂತದ ಜನರಿಗೆ ಸಮೀಪತರವಾಗುತ್ತದೆ.

ಒಬ್ಬರ ಅಭಿಪ್ರಾಯವು ಹೀಗಿತ್ತು: ''ಭಾಷೆಯಲ್ಲಿ ಮೂಲಶಬ್ದಗಳನ್ನು ಕೆಲವನ್ನು ಆರಿಸಿ ಸುಲಭ ಸಂಸ್ಕೃತವನ್ನು ಮಾಡುವ ಪ್ರಯತ್ನವು ಸಾಧುವಲ್ಲ ; ಅದರಿಂದ ಆಕರಗ್ರಂಥಗಳ ಅಭ್ಯಾಸಕ್ಕೆ ವಿಘ್ನವಾಗುತ್ತದೆ'' ಎಂದು. ಅದಕ್ಕೆ ಇನ್ನೊಬ್ಬರ ಪ್ರತಿವಾದವು ಹೀಗಿತ್ತು: ''ಸುಲಭ ಭಾಷೆಯೇ ಜನಾನುರಾಗಕ್ಕೆ ಪಾತ್ರವಾದೀತು. 'ವಾಕ್ಯದಲ್ಲಿ ಸಂಹಿತೆಯು ಅವರ ವಿವಕ್ಷೆಯಂತೆ ಇರುವದು'- ಎಂಬ ನಿಯಮವೂ ಇದೆ. ಇದು ವ್ಯಾವಹಾರಿಕಭಾಷೆಗೇ ಮುಖ್ಯವಾಗಿ ಅನ್ವಯಿಸತಕ್ಕದ್ದು. ಪ್ರೌಢವಿದ್ಯಾರ್ಥಿಗಳು ಆದಷ್ಟು ಸರಳವಾದ ಶೈಲಿಯಲ್ಲಿ ಸಣ್ಣ ಸಣ್ಣ ವಾಕ್ಯಗಳನ್ನು ನಿಯಮಬದ್ಧವಾಗಿ ಪ್ರಯೋಗಿಸುವದನ್ನು ಧ್ಯೇಯವಾಗಿಟ್ಟುಕೊಳ್ಳಬೇಕು. ಅಷ್ಟೇ.''

ಒಬ್ಬರೆಂದರು: ''ಪ್ರಾಂತಭಾಷೆಯ ಪ್ರಾಚುರ್ಯದಿಂದ ಸಂಸ್ಕೃತವು ವನವಾಸಕ್ಕೆ ಹೋಗಬೇಕಾಗುವದು; ಆಗ ಭಾರತದ ಐಕ್ಯವು ನಷ್ಟವಾಗುವದು, ರಾಷ್ಟ್ರ ನೀತಿಯಲ್ಲಿ ಕೇಂದ್ರಕ್ಕೆ ಅಧೀನವಾಗಿರುವ ಪ್ರಾಂತಗಳು ಭಾಷಾಸ್ವಾತಂತ್ರ್ಯವನ್ನು ಪಡೆಯಬೇಕೆಂಬುದು ವ್ಯಾಹತ. ಭಾರತವು ಜೀವಿಸಿರಬೇಕಾದರೆ ರಾಷ್ಟ್ರ ನೀತಿಗೂ ಶಿಕ್ಷಣಕ್ಕೂ ಒಂದೇ ಭಾಷೆಯಿರುವದು ಅವಶ್ಯ!'' ಆಗ ಮತ್ತೊಬ್ಬರೆಂದರು; ದೇಶ ಭಾಷಾ ಪ್ರಾಮುಖ್ಯದಿಂದ ಸುರಭಾರತಿಗೆ ಯಾವ ಹಾನಿಯೂ ಆಗದು. ದೇಶಭಾಷಾ

ವಿಕಾಸಕ್ಕೆ ದೇವಭಾಷಾ ಸಹಾಯವು ಅವಶ್ಯವಾಗಿ ಬೇಕೇ ಆಗುವದರಿಂದ ಈ ಭಾಷೆಯಲ್ಲಿ ಸಾರ್ವತ್ರಿಕ ಪೂಜ್ಯತೆಯು ಲಭಿಸುವದಕ್ಕೆ ಅವಕಾಶವಾದೀತು. ರಾಷ್ಟ್ರಗಳ ಪರಸ್ಪರ ವ್ಯವಹಾರವೂ ಕೇಂದ್ರಸ್ಥಾನದೊಡನೆ ಆಗಬೇಕಾದ ವ್ಯವಹಾರವೂ ಸಂಸ್ಕೃತದಲ್ಲಿಯೆ ಆಗಬೇಕೆಂಬ ನಿರ್ಬಂಧವಿದ್ದರೆ ಸಾಕು."

ಒಬ್ಬರೆಂದರು; 'ಸಂಸ್ಕೃತಸಕಲವಿದ್ಯಾನಿಲಯುವು ಬೇರೆಯಾಗಬಾರದು: ಅದರಿಂದ ಆಗ ದೇಶದ ಸಾಂಸ್ಕೃತಿಕ ಜೀವನಕ್ಕೂ ಈ ಭಾಷೆಗೆ ಸಂಪರ್ಕವಿಲ್ಲದಂತೆ ಆಗುವದು.' ಇನ್ನೊಬ್ಬರೆಂದರು ''ಸಂಸ್ಕೃತ ಸಕಲ ವಿದ್ಯಾನಿಲಯವೂ ಸಂಸ್ಕೃತಭಾಷಾ ಮೂಲಕವೇ ಶಿಕ್ಷಣವನ್ನು ಕೊಡುವ ಪ್ರೌಢವಿದ್ಯಾಶಾಲೆಗಳೂ ಏರ್ಪಟ್ಟರೆ ಭಾರತಕ್ಕೆ ಪೂಜ್ಯಸ್ಥಾನವನ್ನು ಕೊಡುವ ಭವನ ನಿರ್ಮಾಣಕ್ಕೆ ವಾಸ್ತುಶಾಂತಿಯಾದಂತೆ." ತತ್ಕಾಲಕ್ಕೆ ಒಂದು ಭವ್ಯವಾದ ಸಕಲ ವಿದ್ಯಾನಿಲಯವು ಸ್ಥಾಪಿತವಾಗಲಿ. ಅಲ್ಲಿ ಮುಖ್ಯವಾದ ಆಧುನಿಕ ಭಾಷೆಗಳು, ಆಧುನಿಕ ವಿಜ್ಞಾನಶಾಸ್ತ್ರಗಳು, ದೇಶದ ಇತಿಹಾಸ ಇಷ್ಟು ವಿಷಯಗಳನ್ನು ಸಂಸ್ಕೃತ ಭಾಷೆಯ ದ್ವಾರದಿಂದ ಕಲಿಸುವುದಕ್ಕೆ ಉದ್ಯಮವಾಗಲಿ. ಮಿಕ್ಕ ಸಕಲ ವಿದ್ಯಾನಿಲಯಗಳಲ್ಲಿ ಗಣಿತ, ಜ್ಯೋತಿಷ್ಯ, ವ್ಯಾಕರಣ, ತರ್ಕ, ವಿಜ್ಞಾನಶಾಸ್ತ್ರದ ವಿಭಾಗಗಳು- ಮುಂತಾದವನ್ನು ಬೋಧಿಸುವವರಿಗೆ ಸಹಾಯಕವಾಗಿ ಆಯಾ ವಿಷಯಗಳನ್ನು ಪ್ರತಿಪಾದಿಸುವ ಪ್ರಾಚೀನಗ್ರಂಥಗಳ ಪುಸ್ತಕ ಭಂಡಾರವೂ ಸಹಾಯಕ ಪಂಡಿತರೂ ಇರಲೇಬೇಕು. ಪ್ರಾಚೀನರ ಅಭಿಪ್ರಾಯಗಳೂ ಅವಶ್ಯವಾಗಿ ಅಲ್ಲಿರುವವರಿಗೆ ಪರಿಚಿತವಾಗಿರಲೇಬೇಕೆಂಬ ನಿರ್ಬಂಧವಾಗಲಿ!

ಚರ್ಚೆಯ ಸಮಾಪ್ತವಾಗುತ್ತಲೂ ನಾನು ಒಬ್ಬ ವಿದ್ವಾಂಸರನ್ನು ''ಇದು ಯಾವ ಭಾಷೆ, ಸ್ವಾಮಿ, ತಾವೆಲ್ಲ ಆಡುತ್ತಿರುವದು? ನನಗೂ ಅರ್ಥವಾಗುತ್ತಿದೆಯಲ್ಲ! ಈ ಭಾಷೆಯನ್ನು ಕಲಿಯುವದಕ್ಕೆ ಸಹಾಯಕ ಗ್ರಂಥಗಳೇನಾದರೂ ಇವೆಯೆ? ಎಂದು ಕೇಳಿದೆ. ಅದಕ್ಕೆ ಅವರು ಆಶ್ಚರ್ಯಸೂಚಕವಾದ ಮುಖಮುದ್ರೆಯಿಂದ ಇದೇನು! ನಿಮಗೆ ಅಮರಭಾಷೆಯ ಪರಿಚಯವಿಲ್ಲವೆ? ಈ ಭಾಷೆಯು ನರರನ್ನು ಅಮರಸ್ಥಾನಕ್ಕೇರಿಸುವ ಭಾಷೆಯಲ್ಲವೆ? ಮಾನವಜಾತಿಯ ವಿವಿಧಸಂಸ್ಕೃತಿಗಳಿಗೆಲ್ಲ ಪ್ರಬೋದನೆಯನ್ನು ಕೊಟ್ಟಿರುವ ಅಮರಸಂಸ್ಕೃತಿಯ ಉಗಮ ಸ್ಥಾನವಿದಲ್ಲವೆ? ಭಾರತದ ಆಧುನಿಕ ದೇಶಭಾಷೆಗಳಿಗೆ ಮಾತೃವಾಗಿರುವ ಅಥವಾ ಧಾತ್ರಿಯಾಗಿರುವ ಭಾರತಿಯಿದಲ್ಲವೆ? ಈಗಿನ ನಾಗರೀಕದೇಶಗಳಲ್ಲೆಲ್ಲ ವಿದ್ಯಾವಂತರು ಆದರದಿಂದ ಕಲಿಯಲುತ್ಸುಕರಾಗಿರುವ ಭಾಷೆಯಿದಲ್ಲವೆ? ಈ ಅಮರವಾಣಿಯನ್ನು ಅಭ್ಯಾಸ

ಮಾಡುವದಕ್ಕೆ ಅಮರಕೋಶವನ್ನು ಹತ್ತಿರ ಇಟ್ಟುಕೊಳ್ಳಿರಿ. ನಿಮ್ಮ ಭಾಷೆಯಲ್ಲಿರುವ ಕಾವ್ಯಶಾಸ್ತ್ರಾದಿಗ್ರಂಥಗಳನ್ನು ನೋಡಿರಿ. ಅದರ ನಿಘಂಟುವನ್ನೂ ವ್ಯಾಕರಣವನ್ನೂ ನೋಡಿ! ಇದು ನಿಮ್ಮ ಭಾಷೆಗೆ ಪಂಚಪ್ರಾಣಗಳೇ ಆಗಿರುವದೆಂಬುದು ಆಗ ತಿಳಿಯುವದು! ಎಂದು ಉಚ್ಚಸ್ವರದಿಂದ ಹೇಳುವದಕ್ಕೆ ಆರಂಭಿಸುತ್ತಿದ್ದರು.

ಇಷ್ಟರಲ್ಲಿ ನನಗೆ ಎಚ್ಚರವಾಯಿತು! ಇಂಥ ಶುಭಸ್ವಪ್ನವನ್ನಾದರೂ ಕಂಡೆನಲ್ಲ!

* * * * *

# 53. ಸಂಸ್ಕೃತಕ್ಕೆ ಆಘಾತ

**- ಪತ್ರಿಕಾ ಪಾಠಕ**

ಇತ್ತೀಚಿನ ದಿನಗಳಲ್ಲಿ ಕನ್ನಡಭಾಷಾಭಿಮಾನಿಗಳು ಕನ್ನಡರಾಜ್ಯದಲ್ಲಿ ವಿದ್ಯಾಭ್ಯಾಸಇಲಾಖೆಯವರು ಸಂಸ್ಕೃತಭಾಷೆಗೆ ನೀಡಿರುವ ಪ್ರಥಮಸ್ಥಾನವು ಸಲ್ಲದೆಂದೂ, ಅದು ಮೃತಭಾಷೆಯೆಂದೂ ಜನಸಾಮಾನ್ಯರ ಭಾಷೆಯಾದ ಕನ್ನಡಕ್ಕೇ ಎಲ್ಲಾ ಕ್ಷೇತ್ರಗಳಲ್ಲಿಯೂ ಅಗ್ರಪೂಜೆಯು ಸಲ್ಲಬೇಕೆಂದೂ ಕಳಕಳಿಯಿಂದ ಪ್ರಚಾರ ಮಾಡುತ್ತಿರುವದು ಪತ್ರಿಕೆಗಳಲ್ಲಿ ವರದಿಯಾಗಿದೆ. ಕೆಲವು ಸಂದರ್ಭಗಳಲ್ಲಿ ಸಂಸ್ಕೃತದ ಸ್ಥಾನಮಾನಗಳನ್ನು ಗೊತ್ತುಪಡಿಸಲು ರಚಿಸಿದ್ದ ಕಮಿಟಿಯವರಿಗೂ ಕನ್ನಡಸಾಹಿತಿಗಳು ಕೆಲವರು ನಿರ್ಬಂಧಗಳನ್ನು ಹೇರಿ ನಿಷ್ಕ್ರಿಯರನ್ನಾಗಿ ಮಾಡಿದ ಸುದ್ದಿಯೂ ಬಂದಿದೆ. ಅಭಿಮಾನವು ಏನೇನು ಕೆಲಸಗಳನ್ನಾದರೂ ಮಾಡಿಸಬಲ್ಲದು- ಎಂಬುದೊಂದು ವಿಷಾದಕರ ಸತ್ಯವು. ಕನ್ನಡನಾಡಿನಲ್ಲಿಯೆ ಕನ್ನಡಭಾಷೆಗೆ ಸಂಸ್ಕೃತದಿಂದ ಅನ್ಯಾಯ ವಾಗಿದೆಯೆಂದೂ ಪರೀಕ್ಷೆಗಳಲ್ಲಿ ಕೂಡ ಸಂಸ್ಕೃತದವರ ಕೈಮೇಲಾಗಿ ಕನ್ನಡವು ಮೂಲೆ ಗುಂಪಾಗಿದೆಯೆಂದೂ ಈ ದೋಷವನ್ನು ಸರಿಪಡಿಸಲೇಬೇಕೆಂದೂ ಕನ್ನಡಾಭಿಮಾನಿ ಗಳ ಹೇಳಿಕೆಯಾಗಿದೆ. ಇದರ ಯುಕ್ತಾಯುಕ್ತತೆಯನ್ನು ಪ್ರಾಜ್ಞರಿಗೇ ಬಿಡಲಾಗಿದೆ.

ಅಧ್ಯಾತ್ಮದೃಷ್ಟಿಯಿಂದ ಈ ಸಮಸ್ಯೆಯನ್ನು ಕೈಗೆತ್ತಿಕೊಂಡಾಗ ಕನ್ನಡ ಭಾಷೆಯಲ್ಲಿ ಹೇರಳವಾಗಿ ಆಧ್ಯಾತ್ಮಿಕಕೃತಿಗಳಿದ್ದು ಸಾಹಿತ್ಯ-ಧರ್ಮ-ಮತ, ನೀತಿ-ಆಚಾರ-ಸಂಸ್ಕೃತಿಗಳ ದೃಷ್ಟಿಯಿಂದ ಕನ್ನಡಭಾಷೆಯನ್ನು ಇವು ಶ್ರೀಮಂತವಾಗಿ ಮಾಡಿವೆ- ಎಂಬಿದು ವಿದ್ವಾಂಸರಿಗೆಲ್ಲ ತಿಳಿದಿದೆ. ಇವುಗಳೆಲ್ಲ ಸಂಸ್ಕೃತಶಬ್ದಪ್ರಚುರವಾದ ಶೈಲಿಯಲ್ಲಿವೆ. ಈಗಲೂ ಹಳಗನ್ನಡಗ್ರಂಥಗಳ ವ್ಯಾಸಂಗಕ್ಕೂ ಕನ್ನಡಪಂಡಿತ ಪರೀಕ್ಷೆಗೂ ಸಂಸ್ಕೃತಭಾಷೆಯನ್ನಾಶ್ರಯಿಸದೆ ವಿಽಯಿಲ್ಲ. ಈಚಿನ ಕನ್ನಡಾಭಿಮಾನಿಗಳ

ಚಳುವಳಿಯ ಅಂಗವಾಗಿಯೇ ಇರುವ ಆಂಗ್ಲಭಾಷಾಬೋರ್ಡುಗಳ ಕನ್ನಡೀಕರಣಕ್ಕೂ ಸಂಸ್ಕೃತ ಶಬ್ದಗಳೇ ಗತಿಯಾಗಿವೆ. ವಿಧಾನಸೌಧ, ಸಭೆ, ಪರಿಷತ್ತು, ಅಧ್ಯಕ್ಷ, ಶಾಸನ, ಸಂಪ್ರದಾಯ, ಗೌರವ, ಪ್ರಮಾಣವಚನ, ಪ್ರತಿಜ್ಞೆ, ದೀಕ್ಷೆ, ಈ ಎಲ್ಲಾ ಶಬ್ದಗಳೂ ಅಚ್ಚ ಸಂಸ್ಕೃತದವು. ಹೀಗೆಯೇ ಹುಡುಕುತ್ತಾ ಹೋದರೆ ಮಾತಾಡುವ ಭಾಷೆಗಿಂತ ಗ್ರಂಥಸ್ಥ ಹಾಗೂ ಬರವಣಿಗೆಯಲ್ಲಿ ಬಳಸುವ ಕನ್ನಡಭಾಷೆಯಲ್ಲಿ ಹೆಚ್ಚು ಹೆಚ್ಚು ಸಂಸ್ಕೃತ ಶಬ್ದಗಳಿರುವದು ಎಲ್ಲರಿಗೂ ತಿಳಿದಿದೆ. ಹೀಗೆ ಸಂಸ್ಕೃತವು ಕನ್ನಡಕ್ಕೆ ಪೋಷಕವೂ ಜೀವನಾಡಿಯೂ ಆಗಿರುವಾಗ ಅದನ್ನು ಕೈಬಿಡುವದು ಹೇಗೆಂಬುದು ತಿಳಿಯುತ್ತಿಲ್ಲ. ಸಂಸ್ಕೃತಭಾಷೆಯಲ್ಲಿ ಲೌಕಿಕ ವ್ಯವಹಾರವಾಗಲಿ, ಗ್ರಂಥರಚನೆಯಾಗಲಿ ಈಗ ಹೆಚ್ಚಾಗಿ ಕಂಡುಬರದೆ ಇರಬಹುದು. ಅದನ್ನು ಮನೆಮಾತಾಗಿ ಬಳಸದೆಯೂ ಇರಬಹುದು. ಈಗ ಆ ಭಾಷೆಯ ಪ್ರತ್ಯಯ-ವ್ಯಾಕರಣ ನಿಯಮಗಳು ಮೃತವಾಗಿರಬಹುದಾದರೂ ಪ್ರಕೃತಿಯು ಹಾಗೇ ಬದುಕಿದೆ. 'ವ್ಯಾಮೋಹವನ್ನು (ವ್ಯಾಮೋಹಮ್) ಬಿಡಿರಿ' ಎಂಬಲ್ಲಿ ಅಮ್ ಎಂಬ ಸಂಸ್ಕೃತ ಪ್ರತ್ಯಯವು ಮೃತವಾಗಿದ್ದರೂ 'ವ್ಯಾಮೋಹ' ಶಬ್ದವು ಜೀವಂತವಾಗಿಯೇ ಇದೆ. ಒಂದು ಬಗೆಯ ಹುಳುವಿದೆಯಂತೆ. ಅದನ್ನು ಸಾಯಿಸಲು ಎರಡು ತುಂಡುಮಾಡಿದರೆ ಆ ಎರಡು ಭಾಗಗಳೂ ಒಂದೊಂದು ಪ್ರತ್ಯೇಕ ಜೀವಂತ ಹುಳುವಾಗುವದಂತೆ. ಹಾಗೆ ಸಂಸ್ಕೃತವೂ ಒಂದು ವಿಲಕ್ಷಣವಾದ ಜೀವಂತಹುಳುವಾಗಿದ್ದು ಅದನ್ನು ಸಾಯಿಸುವದು ಯಾರಿಂದಲೂ ಆಗಲಾರದು. ಅದು ಅಧ್ಯಾತ್ಮದ ಗಂಡುಬೀಜವುಳ್ಳದ್ದಾಗಿದ್ದು ಭರತಖಂಡದಲ್ಲಿ ಸಾವಿರಾರು ವರ್ಷಗಳಿಂದಲೂ ಎಲ್ಲಾ ಆಘಾತಗಳನ್ನೂ ತಡೆದುಕೊಂಡೇ ಬದುಕಿಬಂದಿದೆ. ಆದ್ದರಿಂದ ಕೆಲವೇ ಅಳಿದುಳಿದ ಸ್ಥಾನಮಾನಗಳಿಂದಲಾದರೂ ಸಂಸ್ಕೃತವನ್ನು ಕಾಪಾಡಿಕೊಳ್ಳುವದು ಕನ್ನಡಿಗರಿಗೇ ಭೂಷಣವು. ಇಷ್ಟರಮಟ್ಟಿಗೆ ಬೇಡವೆನ್ನುವದಾದರೆ ಸಂಸ್ಕೃತಕ್ಕೇನೂ ನಷ್ಟವಿಲ್ಲ.

ಈಗಿನ ವಿದ್ಯಾರ್ಥಿಗಳೂ ಕೆಲವು ಕನ್ನಡ ಬರಹಗಾರರೂ ಸಂಸ್ಕೃತಶಬ್ದಗಳನ್ನು ತಪ್ಪಾಗಿ ಬಳಸುತ್ತಿರುವದೂ ಅಲ್ಲಲ್ಲಿ ಕಂಡುಬರುತ್ತಿದೆ. ಉದಾಹರಣೆಗೆ; ಆಕರ್ಷಕ, ಫಲಿತಾಂಶ, ಜನಾರ್ದನ, ಶಂಕುಸ್ಥಾಪನೆ, ಷಷ್ಟಿಪೂರ್ತಿ, ಫಲಶ್ರುತಿ- ಈ ಶಬ್ದಗಳನ್ನು ಕ್ರಮವಾಗಿ ಆಕರ್ಷಕ, ಪಲಿತಾಂಶ, ಜನಾರ್ಧನ, ಶಂಖುಸ್ಥಾಪನೆ, ಷಷ್ಠಿಪೂರ್ತಿ, ಫಲಶೃತಿ-ಎಂದು ಬರೆಯುವದು ಸಾಮಾನ್ಯವಾಗಿಬಿಟ್ಟಿದೆ, ಇದು ಆಘಾತವಲ್ಲವೆ? ಸಂಸ್ಕೃತವು ಬೇಡ- ಎನ್ನುವವರು ಪೂರ್ತಿಯಾಗಿ ಸಂಸ್ಕೃತ ಶಬ್ದಗಳನ್ನು ಪ್ರಯೋಗದಲ್ಲಿ ಕೈಬಿಡಬೇಕು. ಅಥವಾ ಬೇಕೆಂದರೆ ಅದರ ಪ್ರಕೃತಿಯನ್ನು ಭಾಷಾಮರ್ಯಾದೆಗೆ ತಕ್ಕಂತೆ ಶುದ್ಧವಾಗಿಯಾದರೂ ಬರೆಯಬೇಕು, ಹಾಗಿಲ್ಲವಾದರೆ ಕನ್ನಡಕ್ಕೂ

ಅಪಮಾನವಾದಂತೆಯೇ ಸರಿ. ಹೇಗೆ ಇಂಗ್ಲೀಷುಭಾಷೆಯ ಕೆಲವು ಶಬ್ದಗಳನ್ನು ಕನ್ನಡಿಗರು ಪ್ರಯೋಗಿಸುವಾಗ ಸರಿಯಾಗಿ ಉಚ್ಚರಿಸದೆ ಇದ್ದರೆ- ಉದಾಹರಣೆಗೆ ಸೀಕ್ರೆಟ್ ಎಂಬುದನ್ನು ಸಿಗರೇಟ್ ಎಂದರೆ ಟ್ರೇ ಎಂಬುದನ್ನು ಟ್ರೈ ಎಂದರೆ ಷೋ ಎಂಬುದನ್ನು ಷೂ ಎಂದುಚ್ಚರಿಸಿದರೆ ಅಸಹ್ಯವಾಗುವದೋ ಹಾಗೆಯೇ ಸಂಸ್ಕೃತ ಶಬ್ದವನ್ನು ತಪ್ಪಾಗಿ ಉಚ್ಚರಿಸಿದರೂ ಬಲ್ಲವರಿಗೆ ಬೇಸರವಾಗುತ್ತದೆ. 'ಗುರುವೇನ್ನಮಃ' ಎಂಬ ಅಪದ್ಧವನ್ನು ನೀವೂ ಕೇಳಿರಬಹುದು. ಕನ್ನಡಭಾಷೆಗೂ ಅದು ಅನ್ನದಲ್ಲಿನ ಕಲ್ಲಿನಂತೆ ಕಳಂಕವಾಗುವದು. ಆದ್ದರಿಂದ ಕನ್ನಡ ಭಾಷೆಯಲ್ಲಿನ ಸಂಸ್ಕೃತಶಬ್ದಗಳ ತಪ್ಪು -ಒಪ್ಪುಗಳನ್ನು ನಿರ್ಣಯಿಸುವದಕ್ಕಾದರೂ ಸಂಸ್ಕೃತವನ್ನು ತಿಳಿದಿರಬೇಕು. ಕೆಲವರಾದರೂ ಸಂಸ್ಕೃತವನ್ನು ಓದಲೇಬೇಕು.

ರಾಜಕೀಯಲಾಭಗಳ ದೃಷ್ಟಿಯಿಂದ ಸಂಸ್ಕೃತವನ್ನು ವಿದ್ಯಾಶಾಲೆಗಳಲ್ಲಿ ಗೌರವಿಸಲು ಕನ್ನಡಸಾಹಿತಿಗಳಿಗೆ ಮನಸ್ಸಿಲ್ಲದಿದ್ದರೆ ಖಾಸಗಿಯಾಗಿಯೇ ಸಂಸ್ಕೃತ ಭಾಷೆಗೆ ಕನ್ನಡಿಗರು ಪ್ರೋತ್ಸಾಹವನ್ನಿತ್ತರೂ ಸಾಕು. ಸಂಸ್ಕೃತಕ್ಕೆ ಕನ್ನಡರಾಜ್ಯದಲ್ಲಿ ರಾಜನಾಗಿ ಬಾಳಬೇಕೆಂಬ ದುರಾಶೆಯೇನೂ ಇಲ್ಲ. ಆದರೆ ಸಾಮಾನ್ಯಪ್ರಜೆಯಾಗಿ ಯಾದರೂ ಕನ್ನಡದೊಡನೆ ಸಹಬಾಳ್ವೆಮಾಡುವ ಆಶೆಯಂತೂ ಇದೆ. ಇಷ್ಟರ ಮಟ್ಟಿಗಾದರೂ ಕನ್ನಡಾಭಿಮಾನಿಗಳು ಸಂಸ್ಕೃತಶಿಶುವಿನ ಮೇಲೆ ದಯೆಯನ್ನು ತೋರಬೇಕಾಗಿ ಪ್ರಾರ್ಥಿಸುವೆನು.

* * * * *

# 54. ಸಂಸ್ಕೃತದ ಸಂಸ್ತುತಿ

**- ಡಾ|| ಫ್ರೀಡ್ರಿಕ್ ಹೀಲರ್**

ಪಾಶ್ಚಾತ್ತ್ಯದೇಶಗಳಲ್ಲಿ ಸಂಸ್ಕೃತದ ಮಹಿಮೆಯನ್ನು ವಿದ್ವಾಂಸರು ಹಾಡಿ ಹೊಗಳುತ್ತಿರುವಲ್ಲಿ ನಮ್ಮ ದೇಶದಲ್ಲಿ ಅದಕ್ಕೆ ಸಾಕಾದಷ್ಟು ಮನ್ನಣೆ ದೊರೆಯ ದಿರುವದು ಶೋಚನೀಯ. ಈ ಕೆಳಗೆ ಕೊಟ್ಟಿರುವ ಫೆಡರಲ್ ರಿಪಬ್ಲಿಕ್ ಆಫ್ ಜರ್ಮನಿಯಲ್ಲಿ ಮ್ಯೂನಿಚ್ ಸಕಲವಿದ್ಯಾಲಯದ ವಿವಿಧಮತಗಳ ಇತಿಹಾಸದ ವಿದ್ವಾಂಸರೊಬ್ಬರಾದ ಡಾಕ್ಟರ್ ಫ್ರೀಡ್ರಿಕ್ ಹೀಲರ್‌ರವರ ಪತ್ರದಿಂದ ಇದನ್ನು ಮನವರಿಕೆಮಾಡಿಕೊಳ್ಳಬಹುದಾಗಿದೆ.

Munichen 19 Klugstor 50, 24-7-1964

Dear Sri Chakravarty

I was most delighted to receive your Sanskrit translation of "Mukta-Dhara". I thank you heartily for your kindness of sending me this valuable booklet.

I love Sanskrit as the most perfect language of the world, the earthly expression of the eternal rtam. Every Sanskrit verse is heavenly music for my ears. I only regret that the independent Indian State did not accept Sanskrit as the official language of India, just as Israel had adopted the ancient language of the Old Testament to modern condition. India could do the same with regard to Sanskrit.

I hope to come once again to my beloved India where I passed four unforgettable months in 1959, the first of them in Calcutta.

With many thanks and with kind regards.

[Sd] FRIEDRICH HEILER,

ಶ್ರೀ ಚಕ್ರವರ್ತಿಯವರೆ, 'ಮುಕ್ತಧಾರಾ' ಗ್ರಂಥಕ್ಕೆ ತಾವು ಮಾಡಿರುವ ಸಂಸ್ಕೃತ ಅನುವಾದವು ನನ್ನ ಕೈಗೆ ಬಂದದ್ದರಿಂದ ಅತ್ಯಂತಾನಂದವಾಯಿತು. ಈ ಅಮೋಘ ಪುಸ್ತಿಕೆಯನ್ನು ನನಗೆ ದಯವಿಟ್ಟು ಕಳುಹಿಸಿಕೊಟ್ಟದ್ದಕ್ಕಾಗಿ ತಮ್ಮನ್ನು ಹೃತ್ಪೂರ್ವಕವಾಗಿ ವಂದಿಸುತ್ತೇನೆ.

ಸಂಸ್ಕೃತವು ಭೂಮಂಡಲದಲ್ಲೆಲ್ಲ ಅತ್ಯಂತಪರಿಪೂರ್ಣಗುಣಯುಕ್ತವಾದ ಭಾಷೆ. ನಿತ್ಯವಾದ 'ಋತ'ದ ಐಹಿಕವಿಭೂತಿ- ಎಂಬ ಕಾರಣದಿಂದ, ಅದರಲ್ಲಿ ನನಗೆ ಪ್ರೇಮ. ಪ್ರತಿಯೊಂದು ಸಂಸ್ಕೃತಪದ್ಯವೂ ನನ್ನ ಕಿವಿಗಳಿಗೆ ಗಂಧರ್ವಗಾನದಂತೆ ಇಂಪಾಗಿರುತ್ತದೆ. ಭಾರತವು ಸ್ವತಂತ್ರವಾದ ಬಳಿಕ-ಇಸ್ರೇಲ್ ದೇಶವು ಬೈಬಲಿನ ಹಳೆ ಒಡಂಬಡಿಕೆಯ ಪ್ರಾಚೀನ ಭಾಷೆಯನ್ನು ಈಗಿನ ಸನ್ನಿವೇಶಕ್ಕೆ ತಕ್ಕಂತೆ ಸಂಸ್ಕರಿಸಿ ಕೊಂಡಿರುವ ಹಾಗೆ- ಭಾರತ ಸರಕಾರವು ಇದನ್ನು ಇಂಡಿಯಾದ ಸರಕಾರದ ಭಾಷೆ

ಎಂದು ಅಂಗೀಕರಿಸದೆಹೋಯಿತಲ್ಲ! ಎಂಬ ವಿಷಯಕ್ಕೆ ಮಾತ್ರ ನನಗೆ ವಿಷಾದ. ಇಸ್ರೇಲ್ ದೇಶದವರಂತೆ ಭಾರತವು ಸಂಸ್ಕೃತವನ್ನು ಬಳಸಿಕೊಳ್ಳಬಹುದಾಗಿತ್ತು.

ಪ್ರೇಮಪಾತ್ರವಾಗಿರುವ ಭಾರತದೇಶಕ್ಕೆ ಮತ್ತೊಮ್ಮೆ ಬರುವನೆಂಬ ಪ್ರತ್ಯಾಶೆ ನನಗಿದೆ. ಅಲ್ಲಿ ಎಂದಿಗೂ ಮರೆಯಲಾಗದ ನಾಲ್ಕು ತಿಂಗಳುಗಳನ್ನು ನಾನು ಹಿಂದೆ ಕಳೆದಿದ್ದೆನು. ಅವುಗಳಲ್ಲಿ ಮೊದಲನೆಯದನ್ನು ಕಲಕತ್ತೆಗೆ ವಿನಿಯೋಗಿಸಿದ್ದೆನು.

ಇಂತು ತುಂಬ ಕೃತಜ್ಞನೂ ಹಾರ್ದಿಕಪೂಜ್ಯಬುದ್ಧಿಯುತನೂ ಆಗಿರುವ ತಮ್ಮ

*- ಫ್ರೀಡ್ರಿಕ್ ಹೀಲರ್.*

* * * * *

## 55. ಸಂಸ್ಕೃತ ಭಾಷೆಯ ನೈಜಸ್ತುತಿ

**(ಗೋಕಾಕ್ ವರದಿಯಿಂದ ಉದ್ಧೃತ- ಕೃಪೆ: ಕನ್ನಡ ನುಡಿ)**

1. ಸಂಸ್ಕೃತವು ಎಲ್ಲ ಭಾರತೀಯರಿಗೂ ಅಭಿಮಾನವಿರಬೇಕಾದ ಭಾಷೆ. ಋಗ್ವೇದವು ವಿಶ್ವವಾಙ್ಮಯದ ಇತಿಹಾಸದಲ್ಲಿಯೇ ಪ್ರಪ್ರಥಮವಾಗಿ ರೂಪುಗೊಂಡಿರುವ ಹಾಗೂ ಉಳಿದುಬಂದಿರುವ ಕಾವ್ಯಸಂಗ್ರಹವಾಗಿದೆ. ಸಂಸ್ಕೃತದ ಪ್ರಾಚೀನತೆಯು ಕನಿಷ್ಠ ಪಕ್ಷಕ್ಕೆ 5000 ವರ್ಷಗಳನ್ನು ಮೀರಿದೆ. ಈ ಅವಧಿಯಲ್ಲೆಲ್ಲ ನಡುನಡುವೆ ಬಹುದೊಡ್ಡ ಆತಂಕಗಳು ಬಂದರೂ ಸಂಸ್ಕೃತವು ಸಾಹಿತ್ಯ ಭಾಷೆಯಾಗಿ ಮುಂದುವರೆಯಿತು. ಗ್ರಾಂಥಿಕಭಾಷೆಗೂ ಬಳಕೆ ಮಾತಿಗೂ ಭೇದ ಬಹಳವಾದಾಗ ವ್ಯಾವಹಾರಿಕಭಾಷೆಗಳು (ಪಾಲಿ, ಅರ್ಧಮಾಗಧ) ಬುದ್ಧ ಹಾಗೂ ಮಹಾವೀರರ ಕಾಲದಲ್ಲಿ ಧಾರ್ಮಿಕಸಾಹಿತ್ಯದ ಭಾಷೆಗಳಾದವು. ಕ್ರಮೇಣ ಸಂಸ್ಕೃತಜನ್ಯ ಪ್ರಾಕೃತಗಳಿಂದ ಹಿಂದಿ, ಬಂಗಾಲಿ, ಮೊದಲಾದ ಭಾಷೆಗಳು ತಲೆಯೆತ್ತಿ ತಾವೇ ಸಾಹಿತ್ಯವಾಹಕಗಳಾದವು. ಆದರೆ ಭಾರತದ ತುಂಬೆಲ್ಲ ಸಾಹಿತ್ಯಕ್ಕೂ ಪಂಡಿತರ ಸಭೆಗಳಿಗೂ ಶಾಸನಸಭೆಗಳಿಗೂ ಸರ್ವಸಾಮಾನ್ಯ ಭಾಷೆಯಾಗಿ ಅನೇಕಾನೇಕ ಶತಮಾನಗಳವರೆಗೆ ಸಂಸ್ಕೃತವು ನಡೆದುಬಂದಿತ್ತು.

2. ಸಂಸ್ಕೃತವು ಗ್ರಾಂಥಿಕಭಾಷೆಯಾಗಿ ಶೈಲಿ, ಅಲಂಕಾರ, ವ್ಯಾಕರಣಾದಿ ಲಕ್ಷಣಗಳಿಂದ ಹಾಗೇ ಸ್ಥಿರವಾಗಿ ಉಳಿದುಕೊಂಡಾಗ ಮುಂದೆ ಪ್ರಾದೇಶಿಕ ಭಾಷೆಗಳು ಜನತೆಯ ಸಾಹಿತ್ಯದ ಭಾಷೆಗಳಾಗುತ್ತಾ ಬೆಳೆದವು. ಆಗ ಒಂದು ಸ್ಥಿರ, ಮಾರ್ಗೀಯ, ಗ್ರಾಂಥಿಕ, ಇಲ್ಲವೆ ಕ್ಲಾಸಿಕಲ್ ಮಾದರಿಯಲ್ಲಿ ಹಾಗೆಯೆ ಉಳಿದುಕೊಂಡ ಸಂಸ್ಕೃತವು

ಅಳಿಯಲೂ ಇಲ್ಲ, ಬೆಳೆಯಲೂ ಇಲ್ಲ. ಅದು ಪರಿವರ್ತನಾತೀತ (ಅಮರ) ವಾಯಿತು. ಇದೇ ಗ್ರಾಂಥಿಕರೂಪದಲ್ಲಿಯೇ ಪಂಡಿತರ ಬಳಕೆಯು ಮಾತೂ ಆಯಿತು, ಸಂಸ್ಕೃತದ ಈ ಸ್ಥಿರ ಭಾಷಾರೂಪವೇ ಮೃತವೆಂದಿರುವ ಭಾಷೆಯಲ್ಲಿನ ಜೀವಂತ ಅಂಶವೆಂದು ಎತ್ತಿ ತೋರಿಸಬಹುದಾಗಿದೆ. ಅಲ್ಲದೆ ಜೀವಂತ ಭಾಷೆಗಳಲ್ಲಿಯೂ ಮೃತ ಅಂಶಗಳಿರುತ್ತವೆಯೆಂಬುದನ್ನು ನಾವು ಎಂದಿಗೂ ಮರೆಯುವಂತಿಲ್ಲ. ಇಂಗ್ಲಿಷ್‌ನಲ್ಲಿ ಬಳಸುವ ಅನೇಕ ಶಬ್ದಗಳಿಗೆ ಹಾಗೂ ಔಷಧದ ಹೆಸರುಗಳಿಗೆ ಎಂ.ಬಿ.ಬಿ.ಎಸ್. ಡಾಕ್ಟರ್‌ರ ಭಾಷೆಯಲ್ಲಿ ಮಾತ್ರ ಅಸ್ತಿತ್ವವಿದೆ. ಉಳಿದವರಿಗೆ ಆ ಶಬ್ದಗಳ ಅರ್ಥ ಸುಲಭವಾಗಿ ಆಗುವದಿಲ್ಲ. ಇದೇ ರೀತಿಯಾಗಿ ಪ್ರತಿಯೊಂದು ವೈಜ್ಞಾನಿಕಕ್ಷೇತ್ರದಲ್ಲಿಯೂ ಅದರ ಪಾರಿಭಾಷಿಕಶಬ್ದಗಳಿವೆ. ಪ್ರಾಚೀನ ಹಾಗೂ ಅರ್ವಾಚೀನಭಾಷೆಗಳನ್ನು ಮೃತ ಹಾಗೂ ಜೀವಂತ ಎಂದು ವರ್ಣಿಸುವದು ಸಾಧುವಾಗಲಾರದು. ಏಕೆಂದರೆ ಮೇಲೆ ತಿಳಿಸಿರುವಂತೆ ಪ್ರಾಚೀನಭಾಷೆಯಲ್ಲಿ ಜೀವಂತ ಅಂಶಗಳೂ ಹಾಗೂ ಅರ್ವಾಚೀನಭಾಷೆಯಲ್ಲಿ ಮೃತ ಅಂಶಗಳೂ ದೊರೆಯುವದುಂಟು.

3. ಆದರೆ ಅರ್ವಾಚೀನಭಾಷೆಯಂತೆ ಒಂದು ಸ್ಥಿರ ಭಾಷೆಯು ಸೃಜನಶೀಲತೆ ಯನ್ನು ಹೊಂದಿದೆ- ಎಂದು ಹೇಳಬರುವದಿಲ್ಲ. ಚತುರ್ವೇದ ಸಂಹಿತೆಗಳ ಸಂಸ್ಕೃತ ಔಪನಿಷದಸಂಸ್ಕೃತವಾದಂತೆ- ಔಪನಿಷದಸಂಸ್ಕೃತ ಪೌರಾಣಿಕ ಸಂಸ್ಕೃತವಾದಂತೆ ನಮಗೆ ಗೊತ್ತಿದ್ದ ಸ್ಥಿರ ಮಾರ್ಗೀಯ ಸಂಸ್ಕೃತ ವಿಕಸನ ಈಗ ಪೂರ್ಣವಾಗುತ್ತಿಲ್ಲ. ಹಿಂದೆ ಆ ಮಾತೃಪದವಿಯನ್ನನುಭವಿಸಿ ಸಂಸ್ಕೃತವು ಪ್ರಾಕೃತ ಹಾಗೂ ಉತ್ತರಪ್ರಾದೇಶಿಕ ಭಾಷೆಗಳ ತಾಯಿಯಾಯಿತು. ದ್ರಾವಿಡಭಾಷೆಗಳ ಸಾಕುತಾಯಿಯಾಯಿತು. ಸಂಸ್ಕೃತದ ಒಂದು ಮಾರ್ಗೀಯ ರೂಪಕ್ಕೆ ಒದಗಿದ ಸ್ಥೈರ್ಯ ಮತ್ತೆ ಅಂಥ ಮಾತೃತ್ವ ವನ್ನು ಗಳಿಸಬಹುದು. ಆದರೆ ಅದಕ್ಕಾಗಿ ಅತ್ಯಂತ ಅಪರೂಪವಾದ ಪರಿಸ್ಥಿತಿಯ ವೈಚಿತ್ರ್ಯ ಅಸ್ತಿತ್ವದಲ್ಲಿ ಬರಬೇಕಾಗುತ್ತದೆ.

4. ಏಳನೆಯ ಶತಮಾನದ ಸಾಹಿತ್ಯದ ಪೂರ್ವದಲ್ಲಿ ಇಂಗ್ಲಿಷಿನಲ್ಲಿ ಅಲ್ಪ ಸ್ವಲ್ಪ ಬರವಣಿಗೆ ಇದ್ದಿರಬಹುದು. ಆದರೆ ಇದಕ್ಕೂ ಪೂರ್ವದಲ್ಲಿ ಅಸ್ತಿತ್ವಕ್ಕೆ ಬಂದ ಸಾಹಿತ್ಯದ ಮೂಲಕ ಸಂಸ್ಕೃತವು ಇಂದಿಗೂ ಜಗತ್ತಿನಲ್ಲಿಯ ಅದ್ವಿತೀಯ ಸಾಹಿತ್ಯವಾಗಿ ಕೆಲವೊಂದು ದಿಕ್ಕಿನಲ್ಲಿ ಉಳಿದುಕೊಂಡಿದೆ. ಏಳನೇ ಶತಮಾನದಿಂದ ಹದಿನೈದನೆಯ ಶತಮಾನದ ವರೆಗೆ ಬಂದ ಸಂಸ್ಕೃತಸಾಹಿತ್ಯವು ಇಂಗ್ಲಿಷಿಗಿಂತ ಎಷ್ಟೋ ಹೆಚ್ಚು ಪ್ರಕಟವಾಗಿದೆ.

* * * * *

# 56. ಕಂಪ್ಯೂಟರ್ ಯುಗಕ್ಕೆ ಸಂಸ್ಕೃತ

**(ಜನಮಿತ್ರ ಪತ್ರಿಕೆ, ಹಾಸನ 1-1-1985)**

ಭಾರತದ ಪ್ರಾಚೀನಭಾಷೆ ಸಂಸ್ಕೃತವು ಈಗ ಕಂಪ್ಯೂಟರ್ ಯುಗವನ್ನು ಪ್ರವೇಶಿಸಿದೆ. ಅಮೇರಿಕಾ ದೇಶದ ಪೆನ್‌ಸಿಲ್‌ವೇನಿಯಾ ವಿಶ್ವವಿದ್ಯಾನಿಲಯದಲ್ಲಿ ಪ್ರಪ್ರಥಮವಾಗಿ ನಡೆದ ಆರನೆಯ ವಿಶ್ವಸಂಸ್ಕೃತಸಮ್ಮೇಳನದಲ್ಲಿ ಈ ವಿಚಾರವು ಪ್ರಕಟವಾಗಿದೆ. ಈ ಸಮ್ಮೇಳನವು ಕಳೆದ 1984ನೆಯ ಅಕ್ಟೋಬರ್ 13ರಿಂದ ಒಂದು ವಾರ ಕಾಲ ನಡೆದುದಾಗಿ ಪತ್ರಿಕಾವರದಿಗಳು ತಿಳಿಸುತ್ತವೆ. ಅಲ್ಲಿ ಭಾಗವಹಿಸಿದ ಕಂಪ್ಯೂಟರ್ ತಜ್ಞರು ತಾವು ಸಂಸ್ಕೃತದಲ್ಲಿ ವರ್ಡ್‌ಪ್ರೊಸೆಸಿಂಗ್ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ತಯಾರಿಸಿರುವದಾಗಿ ವರದಿ ಮಾಡಿದ್ದಾರೆ. ಇದರಿಂದ ಸಂಶೋಧಕರಿಗೆ ಈ ಭಾಷೆಯಲ್ಲಿ ಕಂಪ್ಯೂಟರ್ ಪ್ರಿಂಟೌಟ್‌ಗಳನ್ನು ತಯಾರಿಸಲ ಸಾಧ್ಯವಾಗಲಿದೆ. ಹಲವಾರು ಸಾಧನಗಳನ್ನು ಬಳಸಿ ಸಂಶೋಧಕರು ರೋಮನ್ ಅಥವಾ ಸಂಸ್ಕೃತ ಲಿಪಿಗಳಲ್ಲಿ ದಾಖಲೆಗಳನ್ನು ರಚಿಸಿ ಪ್ರಿಂಟ್ ಮಾಡಬಲ್ಲರು- ಎಂದೂ ವರದಿಯಾಗಿದೆ.

ಈ ಸಮ್ಮೇಳನದಲ್ಲಿ ಕಂಪ್ಯೂಟರ್ ಬಗೆಗೆ ನಡೆದ ಚರ್ಚೆಗಳಲ್ಲದೆ ಪ್ರತಿನಿಧಿಗಳು ವೇದಗಳ ಅಧ್ಯಯನಕಾಲದಿಂದ ಹಿಡಿದು ಹಿಂದೂ, ಬೌದ್ಧಧರ್ಮಗಳು, ಪುರಾತನ ಕಾಲದ ಸ್ತ್ರೀಯರು, ಅವರ ತಿಳಿವಳಿಕೆ, ಸ್ಥಾನಮಾನಗಳ ವಿಚಾರವಾಗಿಯೂ ಚರ್ಚಿಸಿದರು. ಇತ್ತೀಚೆಗೆ ಬಿಡುಗಡೆಯಾದ ಸಂಸ್ಕೃತ ಚಲನಚಿತ್ರ- 'ಶ್ರೀಶಂಕರಾಚಾರ್ಯ'ದ ಪ್ರದರ್ಶನವೂ ನಡೆಯಿತು.

ಪೆನ್ಸಿಲ್‌ವೇನಿಯಾ ವಿಶ್ವವಿದ್ಯಾನಿಲಯದಲ್ಲಿ ಭಾರತೀಯ ಸಾಹಿತ್ಯ ಪ್ರಾಧ್ಯಾಪಕರಾಗಿರುವ ಪೀಟರ್ ಗೇಫ್‌ಕೆಯವರು ಸಮ್ಮೇಳನವ್ಯವಸ್ಥೆಗೆ ಸಹಾಯಮಾಡಿದ್ದಲ್ಲದೆ ಜಾಗತಿಕ ಮಾನವೀಯ ಸಂಸ್ಕೃತಿಯನ್ನುಳಿಸಲು ಭಾರತೀಯಸಂಸ್ಕೃತ ವಿದ್ವಾಂಸರು ಇತಿಹಾಸದುದ್ದಕ್ಕೂ ಶ್ರಮಿಸಿದ್ದಾರೆ- ಎಂದು ತಿಳಿಸಿದರು. ಮತ್ತು ವಿಶ್ವವಿದ್ಯಾನಿಲಯದಲ್ಲಿ ಮೂರು ಸಾವಿರ ವರ್ಷಗಳಷ್ಟು ಹಿಂದಿನ ಹಸ್ತಪತ್ರಿಕೆಗಳ ಬೃಹತ್ ಸಂಗ್ರಹವಿದೆಯೆಂದೂ ಅವುಗಳು- ನಲವತ್ತು ವರ್ಷಗಳ ಕಾಲ ಸಂಸ್ಕೃತವನ್ನು ಬೋಧಿಸಿದ ಡಬ್ಲೂಯನಾರ್ಮನ್ ಬ್ರೌನ್‌ರವರ ಕೊಡುಗೆಗಳೆಂದೂ ತಿಳಿಸಿದರು. ಈ ಸಮ್ಮೇಳನಕ್ಕೆ ಭಾರತಸರ್ಕಾರವು 9 ಮಂದಿ ಡೆಲಿಗೇಟುಗಳನ್ನು 130 ವಿದ್ವಾಂಸರುಗಳನ್ನೂ ಕಳುಹಿಸಿತ್ತುಫಿ. ಕೆನಡಾ, ಪಶ್ಚಿಮಜರ್ಮನಿ, ಫ್ರಾನ್ಸ್‌ಫಿ, ಬ್ರಿಟನ್, ಮೆಕ್ಸಿಕೋ, ಬೆಲ್ಜಿಯಂ, ಆಸ್ಟ್ರಿಯಾ, ಯುಗೋಸ್ಲಾವಿಯ- ಮುಂತಾದ ದೇಶಗಳಿಂದಲೂ ಪ್ರತಿನಿಧಿಗಳು ಬಂದಿದ್ದರು.

**ಭಾರತೀಯರೆ, ಈಗಲಾದರೂ ಸಂಸ್ಕೃತವು 'ಅಮರಭಾಷೆ'ಯೆಂಬುದು ಸೂರ್ಯ ಪ್ರಕಾಶದಷ್ಟು ಸತ್ಯವೆಂಬುದನ್ನು ಮನದಂದುಕೊಳ್ಳಿರಿ.** * * * * *

# ಪರಿಶಿಷ್ಟ

(ಈ ಗ್ರಂಥದಲ್ಲಿ ಪ್ರಕಟನೆಗೊಂಡಿರುವ ಲೇಖನಗಳು 'ಅಧ್ಯಾತ್ಮಪ್ರಕಾಶ ಪತ್ರಿಕೆ' ಮತ್ತು ಇತರ ಪತ್ರಿಕೆಗಳಿಂದ ಸಂಗ್ರಹಿಸಿದ ಲೇಖನಗಳ ಮೂಲದ ವಿವರ)

## ಭಾಗ - 1

(ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು)

| ಸಂಖ್ಯೆ | ವಿಷಯ | ಸಂಪುಟ/ಸಂಚಿಕೆ | ತಿಂಗಳು | ವರ್ಷ |
|---|---|---|---|---|
| 1. | ಸಂಸ್ಕೃತವೂ ವೇದಾಂತವೂ | 18/3 | ನವೆಂಬರ್ | 1948 |
| 2. | ರಷಿಯದೇಶದಲ್ಲಿ ಸಂಸ್ಕೃತದ ಅಭ್ಯಾಸ | 27/5 | ಜನವರಿ | 1958 |
| 3. | ಸಂಸ್ಕೃತ ಭಾಷೆ | 27/10 | ಜೂನ್ | 1958 |
| 4. | ಸಂಸ್ಕೃತದ ವಿಷಯಕ್ಕೆ ಅನಾದರ | 27/11 | ಜುಲೈ | 1958 |
| 5. | ಸಂಸ್ಕೃತವನ್ನು ಕೊಂಡಾಡುವವರು | 27/12 | ಆಗಸ್ಟ್ | 1958 |
| 6. | ಸಂಸ್ಕೃತವೆಂಬುದೊಂದು ವಿಶ್ವಶಕ್ತಿ | 28/1 | ಸೆಪ್ಟಂಬರ್ | 1958 |
| 7. | ಸಂಸ್ಕೃತ ಭಾಷೆ | 28/8 | ಏಪ್ರಿಲ್ | 1959 |
| 8. | ಸಂಸ್ಕೃತವು ಸರಕಾರಿ ಭಾಷೆಯಾದೀತೇ? | 28/10 | ಜೂನ್ | 1959 |
| 9. | ಅಖಿಲಭಾರತಸಂಸ್ಕೃತಪ್ರಚಾರಸಭಾ | 28/11 | ಜುಲೈ | 1959 |
| 10. | ಸಂಸ್ಕೃತವು ರಾಷ್ಟ್ರಭಾಷೆಯಾಗಬಲ್ಲದೆ? | 29/11 | ಜುಲೈ | 1960 |
| 11. | ಸಂಸ್ಕೃತಭಾಷೆಯ ಮಹತ್ತ್ವ | 30/2 | ಅಕ್ಟೋಬರ್ | 1960 |
| 12. | ಆ ಭಾಷೆ ನನಗೆ ಹೇಗೆ ಹೊಸದಾಯಿತೊ! | 30/2 | ಅಕ್ಟೋಬರ್ | 1960 |
| 13. | ಒಗ್ಗಟ್ಟು | 30/10 | ಜೂನ್ | 1961 |
| 14. | ಸಂಸ್ಕೃತದ ಹಿರಿಮೆ | 30/11 | ಜುಲೈ | 1961 |
| 15. | ಅಮರವಾಣಿ | 30/12 | ಆಗಸ್ಟ್ | 1961 |
| 16. | ಸಂಸ್ಕೃತ ಭಾಷೆ | 31/2 | ಅಕ್ಟೋಬರ್ | 1961 |
| 17. | ಸಂಸ್ಕೃತ ಭಾಷೆ | 31/2 | ನವೆಂಬರ್ | 1961 |
| 18. | ಸಂಸ್ಕೃತ ಭಾಷೆ | 31/7 | ಮಾರ್ಚ್ | 1962 |

| | | | | |
|---|---|---|---|---|
| 19. | ಸಂಸ್ಕೃತ | 31/8 | ಏಪ್ರಿಲ್ | 1962 |
| 20. | ಸಂಸ್ಕೃತ | 31/9 | ಮೇ | 1962 |
| 21. | ಸಂಸ್ಕೃತ | 31/10 | ಜೂನ್ | 1962 |
| 22. | ಸಂಸ್ಕೃತ | 31/11 | ಜುಲೈ | 1962 |
| 23. | ಸಂಸ್ಕೃತ ಭಾಷೆಯಿಂದ ದೇಶದ ಒಗ್ಗಟ್ಟು | 32/2 | ಅಕ್ಟೋಬರ್ | 1962 |
| 24. | ನವೀನ ಸಂಸ್ಕೃತ ಸಂವಿಧಾನದ ಸಮಿತಿ | 32/3 | ನವೆಂಬರ್ | 1962 |
| 25. | ಸಂಸ್ಕೃತ ಸ್ತುತ್ಯಾಭಾಸ | 32/9 | ಮೇ | 1963 |
| 26. | ಸಂಸ್ಕೃತದಲ್ಲಿ ಭಕ್ತಿ | 32/11 | ಜುಲೈ | 1963 |
| 27. | ಸಂಸ್ಕೃತ ಪ್ರಚಾರದಿಂದ ಸಂಸ್ಕೃತಿಗೆ ಬೆಂಬಲ | 33/1 | ಸೆಪ್ಟಂಬರ್ | 1963 |
| 28. | ಆರು 'ಸ'ಕಾರಗಳು | 33/12 | ಆಗಸ್ಟ್ | 1964 |
| 29. | ಸಂಸ್ಕೃತವನ್ನು ಎಲ್ಲರೂ ಕಲಿಯುವದು ಅವಶ್ಯವೆ? | 34/4 | ಡಿಸೆಂಬರ್ | 1964 |
| 30. | ಭಾರತಕ್ಕೆ ಯಾವ ಭಾಷೆಬೇಕು? | 34/7 | ಮಾರ್ಚ್ | 1965 |
| 31. | ಭಾಷೆಗಳ ಗದ್ದಲ | 34/8 | ಏಪ್ರಿಲ್ | 1965 |
| 32. | ದೇಶ ಭಾಷೆಗಳಿಗೆ ಸಂಸ್ಕೃತದ ನೆರವು | 34/9 | ಮೇ | 1965 |
| 33. | ಕನ್ನಡ ಕಾವ್ಯಗಳಲ್ಲಿ ಸಂಸ್ಕೃತ | 34/10 | ಜೂನ್ | 1965 |
| 34. | ಈಗಿನ ಕನ್ನಡವೂ ಸಂಸ್ಕೃತವೂ | 34/11 | ಜುಲೈ | 1965 |
| 35. | ಸಂಸ್ಕೃತವೋ? ಕನ್ನಡವೋ? | 34/12 | ಆಗಸ್ಟ್ | 1965 |
| 36. | ಸಂಸ್ಕೃತದೊಡನೆ ಉಳಿಯಿರಿ ಅಥವಾ ಅಳಿಯಿರಿ | 35/1 | ಸೆಪ್ಟಂಬರ್ | 1965 |
| 37. | ಸಂಸ್ಕೃತವೂ ಬ್ರಾಹ್ಮಣರೂ | 35/2 | ಅಕ್ಟೋಬರ್ | 1965 |
| 38. | ಸಂಸ್ಕೃತಕ್ಕೆ ಸ್ಥಳವೆಲ್ಲಿ | 35/4 | ಡಿಸೆಂಬರ್ | 1965 |
| 39. | ಸಂಸ್ಕೃತ ಭಾಷೆಯ ಪ್ರಚಾರ | 40/10 | ಜೂನ್ | 1971 |

## ಭಾಗ - 2

### (ಶ್ರೀ ಜ್ಞಾನಾಂದೇಂದ್ರಸರಸ್ವತೀಸ್ವಾಮಿಗಳು; ಪೂರ್ವಾಶ್ರಮ-ಎಸ್. ವಿಠ್ಠಲಶಾಸ್ತ್ರಿಗಳು)

| | | | | |
|---|---|---|---|---|
| 40. | ಸಂಸ್ಕೃತ ಭಾಷೆ | 3/9 | ಮೇ | 1932 |
| 41. | ಸಂಸ್ಕೃತವೇಕೆ ಖಿಲವಾಗುತ್ತಿದೆ? | 3/12 | ಆಗಸ್ಟ್ | 1932 |
| 42. | ನಲಂದದ ವಿಶ್ವವಿದ್ಯಾಲಯ | 18/7 | ಮಾರ್ಚ್ | 1949 |
| 43. | ಸಂಸ್ಕೃತವು ಸರ್ವರ ಭಾಷೆಯಾದೀತೇ? | 18/4 | ಡಿಸೆಂಬರ್ | 1948 |
| 44. | ಸಂಸ್ಕೃತ ಭಾಷೆಯ ಸೇವೆ | 18/10 | ಜೂನ್ | 1949 |
| 45. | ಸಂಸ್ಕೃತದ ಪ್ರಚಾರ | 18/12 | ಆಗಸ್ಟ್ | 1949 |
| 46. | ಸಂಸ್ಕೃತಕ್ಕೆ ತಕ್ಕ ಸ್ಥಾನವನ್ನು ಕೊಡಿರಿ | 21/2 | ಅಕ್ಟೋಬರ್ | 1956 |
| 47. | ಭಾರತ ಸಂಸ್ಕೃತಿಯೂ ಸಂಸ್ಕೃತವೂ | 25/5 | ಜನವರಿ | 1956 |
| 48. | ಸಂಸ್ಕೃತಕ್ಕೆ ಸ್ಥಾನವುಂಟೆ | 26/3 | ನವೆಂಬರ್ | 1956 |

## ಭಾಗ - 3 (ಇತರೆ ವಿದ್ವಾಂಸರುಗಳ ಲೇಖನಗಳು)

| | | |
|---|---|---|
| 49. | ಸಂಸ್ಕೃತವೂ ಹಿಂದಿಯೂ | ಶ್ರೀ ಟಿ.ಕೆ. ಕೃಷ್ಣಸ್ವಾಮಿ ಅಯ್ಯರ್, ಎಂ.ಎ., ಆಚಾರ್ಯ, ಸಂಸ್ಕೃತ ಪ್ರೊಫೆಸರ್, ಡಿ.ಎಚ್.ಎಸ್.ಕೆ. ಕಾಲೇಜು, ದಿಬ್ರೂಘರ್, ಅಸ್ಸಾಮ್; 33/2 ಅಕ್ಟೋಬರ್ 1963 |
| 50. | ಸಂಸ್ಕೃತ ಸಾಹಿತ್ಯದಲ್ಲಿ - ಸಾರ್ವಲೌಕಿಕದೃಷ್ಟಿ | ಮಹಾಮಹೋಪಾಧ್ಯಾಯ - ಎನ್. ರಂಗನಾಥಶರ್ಮಾ - ಜಯದೇವ ರಜತಮಹೋತ್ಸವದ ಸಂಚಿಕೆ - |
| 51. | ಸರ್ವಭಾಷಾ ಸರಸ್ವತೀ - | ಹಾ.ಮಾ. ನಾಯಕ್ - |
| 52. | ಅಮರ ಭಾರತಿ | ಹಾ.ಮಾ. ನಾಯಕ್ - |
| 53. | ಸಂಸ್ಕೃತಕ್ಕೆ ಆಘಾತ | ಪತ್ರಿಕಾ ಪಾಠಕ |
| 54. | ಸಂಸ್ಕೃತದ ಸಂಸ್ತುತಿ | ಡಾ॥ ಫ್ರೀಡ್ರಿಕ್ ಹೀಲರ್ (ಫೆಡರಲ್ ರಿಪಬ್ಲಿಕ್ ಆಫ್ ಜರ್ಮನಿಯಲ್ಲಿ ಮ್ಯೂನಿಚ್ ಸಕಲ ವಿದ್ಯಾಲಯದ ವಿವಿಧ ಮತಗಳ ಇತಿಹಾಸದ ವಿದ್ವಾಂಸರು) 4-7-1964 |
| 55. | ಸಂಸ್ಕೃತ ಭಾಷೆಯ ನೈಜಸ್ಥಿತಿ | ಗೋಕಾಕ್ ವರದಿಯಿಂದ: ಪತ್ರಿಕೆ ಕನ್ನಡನುಡಿ |
| 56. | ಕಂಪ್ಯೂಟರ್ ಯುಗಕ್ಕೆ ಸಂಸ್ಕೃತ | ಜನಮಿತ್ರ ಪತ್ರಿಕೆ ; ಹಾಸನ. 1-1-1985 |

* * * * *